॥ಓಂ ವಿರಾಟ್‌ವಿಶ್ವಕರ್ಮ ಪರಬ್ರಹ್ಮಣೇ ನಮಃ॥

# ಶ್ರೀ ಮೌನೇಶ್ವರ ವಿಜಯ




ಇದನ್ನು

ವಿಶ್ವಬ್ರಾಹ್ಮಣ ಪುರೋಹಿತರಾದ

**ವೇ. ಲಿಂಗಾಚಾರ್ಯ ಕಾಳಾಚಾರ್ಯ**

ಮುಕ್ಕಾಂ ಮಾಗೋಡ,

ತಾಲೂಕ } ರಾಣೇಬೆನ್ನೂರ<br>
ಪೋಸ್ಟ }

ಜಿಲ್ಲಾ ಧಾರವಾಡ

ಇವರು ಬರೆದರು.


---


೧೯೪೮

ಸುಧಾರಿಸಿ ತಯಾರಿಸಿದ

೨ನೇ ಆವೃತ್ತಿ (೫೦೦) ಪ್ರತಿಗಳು.

---

ಶಕೆ ೧೮೬೯ ಸರ್ವಜಿತು ಸಂವತ್ಸರದ ಫಾಲ್ಗುಣಮಾಸ

ಬೆಲೆ ೨ ರೂ. ೮ ಆ.

ವ್ಹಿ. ಪಿ. ಖರ್ಚು ಪ್ರತ್ಯೇಕ

ಪ್ರಕಾಶಕ:—

## ವೇ. ಲಿಂಗಾಚಾರ್ಯ ಕಾಳಾಚಾರ್ಯ

ಮುಕ್ಕಾಂ ಮಾಗೋಡ,

ತಾಲೂಕ }
ರಾಣೇಬೆನ್ನೂರ
ಪೋಷ್ಟ }

ಜಿಲ್ಲಾ ಧಾರವಾಡ







ಈ ಪುಸ್ತಕವನ್ನು
ಬಿ. ಪಿ. ಕಾಳೆ, ಅವರು ಶ್ರೀ ಶೇಷಾಚಲ ಪ್ರೆಸ್ಸ,
ಮದಿಹಾಳ-ಧಾರವಾಡ ಇಲ್ಲಿ
ಮುದ್ರಿಸಿದರು.







# ಅರ್ಪಣಪತ್ರಿಕೆ.

ಶಾಂತಿಸ್ವರೂಪರೂ; ಉದಾರ ಚರಿತರೂ; ಸದ್ಗುಣ
ಭರಿತರೂ ಆಗಿ ಮೆರೆಯುವ
ಶ್ರೀಗುರುಪರಬ್ರಹ್ಮ ಶ್ರೀ ಕಾಶೀಪತಿ ಮಹಾಸ್ವಾಮಿಗಳವರ
ದಿವ್ಯ ಚರಣಗಳಲ್ಲಿ ಈ ಮಾಸೇಶ್ವರ ವಿಜಯ ರೂಪ
ಮಲ್ಲಿಕಾ ಕುಸುಮವನ್ನು ಅನನ್ಯ ಭಕ್ತಿ ಯಿಂದ ಸಮರ್ಪಿ
ಸಿರುವೆನು.

ಶ್ರೀಗಳವರ ಚರಣಸೇವಕ,

## ವೇ. ಲಿಂಗಾಚಾರ್ಯ ಕಾಳಾಚಾರ್ಯ

ಮುಕ್ಕಾಂ ಮಾಗೋಡ.

# ಪ್ರಸ್ತಾವನೆ



'ಶ್ರೀ ಮೌನೇಶ್ವರ ವಿಜಯ' ಎಂಬ ಈ ಪುಸ್ತಕದ ಮೊದಲನೇ ಆವೃತ್ತಿಯ ಪ್ರತಿಗಳು ಬಹು ಬೇಗನೆ ತೀರಿಹೋದವು. ಇದರ ಬೇಡಿಕೆಯ ಪತ್ರಗಳಂತೂ ಮೇಲಿಂದ ಮೇಲೆ ಬರಲಿಕ್ಕೆ ಹತ್ತಿದವಲ್ಲದೆ ಸಮಕ್ಷಮ ಸಹ ಎಷ್ಟೋ ಜನರು ಬಂದು ಇದನ್ನು ಕೇಳಲಿಕ್ಕೆ ಹತ್ತಿದರು. ನಮ್ಮಲ್ಲಿ ಪುಸ್ತಕಗಳೇ ಇಲ್ಲದ್ದರಿಂದ ಅವರ ಬೇಡಿಕೆಗಳು ನಿರರ್ಥಕವಾಗಿ ಹೋದವು. ನಮಗಾದರೂ ಮನೆತನದ ಅನೇಕ ತೊಂದರೆಗಳಿಂದಲೂ, ಪ್ರತಿಯೊಂದಕ್ಕೂ ಕಂಟ್ರೋಲ-ಪರಿಮಿಟ್ಟುಗಳನ್ನು ಸರಕಾರದವರು ಇಟ್ಟದ್ದರಿಂದಲೂ ಪರವಾನಗಿ ಇಲ್ಲದೆ ಕಾಗದ ಕೊಳ್ಳುವದಾಗಲೀ, ಪ್ರಿಂಟು ಮಾಡಿಸುವ ಕೆಲಸವಾಗಲಿ ಸಕಾಲಕ್ಕೆ ಆಗಲಿಲ್ಲ. ಈಗ ಸರಕಾರದವರ ಅಪ್ಪಣೆ ದೊರೆತರೂ ಹಣದ ಅಭಾವದ ಮೂಲಕ ಇದನ್ನು ಹೇಗೆ ಛಾಪಿಸಬೇಕೆಂದು ಯೋಚಿಸಲಿಕ್ಕೆ ಹತ್ತಿದೆವು. ಆಗ ಮಾತ್ರ ಶ್ರೀ ಮೌನಪರಮಾತ್ಮನ ಅನುಗ್ರಹವಾಯಿತೋ ಏನೊ? ಅಷ್ಟರಲ್ಲಿಯೇ ನಮ್ಮ ಕುಲಗುರುಗಳಾದ ಶ್ರೀ ಕಾಶೀಪತಿ ಮಹಾಸ್ವಾಮಿಗಳವರು ಉಪನಯನ ಕಾರ್ಯಮಾಡಿಸಲಿಕ್ಕಾಗಿ ರಾಣಿಬೆನ್ನೂರಿಗೆ ದಯಮಾಡಿಸಿದರು. ಅವರ ಸನ್ನಿಧಿಯಲ್ಲಿ ಈ ವಿಷಯವನ್ನು ಅರಿಕೆ ಮಾಡಿಕೊಳ್ಳಲು ದಯಾಳುಗಳಾದ ಸದ್ಗುರುಗಳು ನಮಗೆ ಕೆಲವು ಹಣವನ್ನು ಕೊಟ್ಟರು. ಆಗ ನಾವು ಗುರುಕರುಣವಾಯಿತೆಂಬ ಸಂತೋಷದಿಂದ ಅವರಿಂದ ಆಶೀರ್ವಾದ ಪಡೆದು ನಮ್ಮೂರಿಗೆ ಬಂದೆವು. ಆ ಕೂಡಲೇ ನಮ್ಮೂರ ಮ|| ರಾ||ರಾ|| ಹನುಮಂತಪ್ಪಾ ಕೆಂಚರಡ್ಡಿಯವರ, ಮಳ್ಳಪ್ಪ ಕಮದೋ

ದವರ, ವಿರೂಪಾಕ್ಷಪ್ಪಾ ಹೆಡ್‌ಮಾಸ್ತರ ಇವರು ಕೆಲವು ಹಣ ಕೊಟ್ಟಿದ್ದರಿಂ ದಲೂ ಈ ಪುಸ್ತಕವನ್ನು ಛಾಪಿಸುವ ಸುಯೋಗ ಉಂಟಾಯಿತು. ಇದೆಲ್ಲ ಶ್ರೀಮೌನಪರಮಾತ್ಮನ ಅನುಗ್ರಹವೇ ಎಂದು ಭಾವಿಸಿ ಇದರ ಮೊದಲನೆಯ ಆವೃತ್ತಿಯಲ್ಲಿದ್ದ ನ್ಯೂನತೆಗಳನ್ನು ಸರಿಪಡಿಸಿ ಛಾಪಿಸಿ ಪ್ರಕಟಿಸಿರುವೆವು.

ಆದಕಾರಣ ಈ ಎಲ್ಲ ಮಹಸೀಯರ ಉಪಕಾರವನ್ನು ನಾವು ಎಂದಿಗೂ ಮರೆಯಲಾರೆವು. ಇದಲ್ಲದೆ ನಾವು ಹೊಸದಾಗಿ ಶ್ರೀ ಕಾಶಿ ರಾಜ ವಿಜಯ ಅಥವಾ ರನ್ನದ ಕನ್ನಡಿ, ಎಂಬ ಬಹು ಸ್ವಾರಸ್ಯವಾದ ಪುಸ್ತಕವನ್ನು ಬರೆದಿರುವೆವು. ಇದನ್ನು ಛಾಪಿಸಲಿಕ್ಕಾಗಿ ಈಗಾಗಲೇ ಕೆಲವು ಮಹನೀಯರು ೨೦-೧೫-೧೦-೮-೫ ಈ ಪ್ರಕಾರ ತಮ್ಮ ತಮ್ಮ ಯೋಗ್ಯತೆಯಂತೆ ವರ್ಗಣಿರೂಪಾಯಿಗಳನ್ನು ಸಹ ಕೊಟ್ಟಿರುವರು. ವರ್ಗಣಿ ದಾರರ ಹೆಸರನ್ನು ಸದರೀ ಪುಸ್ತಕದಲ್ಲಿ ಪ್ರಿಂಟು ಮಾಡಿಸುವದಲ್ಲದೆ ಒಂದೊಂದು ಪುಸ್ತಕವನ್ನು ಅವರಿಗೆ ಉಚಿತವಾಗಿ ಕಳಿಸುವೆವು. ಅದುಕಾರಣ ವಿಶ್ವಬ್ರಾಹ್ಮಣರಾದಿ ಸರ್ವರೂ ಮೇಲ್ಕಂಡ ಮಹನೀಯರಂತೆ ವರ್ಗಣಿ ಕೊಟ್ಟು ಸಾವಿರಾರು ಜನರ ಕೈಯಲ್ಲಿ ತಮ್ಮ ಹೆಸರು ನಲಿದಾಡುವಂತೆ ಮಾಡಿ ಪರೋಪಕಾರ ಮಾಡಿದ ಪುಣ್ಯಕ್ಕೆ ಭಾಗಿಗಳಾಗಿರಿ. ಇಂತಹ ಸದ್ಬುದ್ಧಿ ಯನ್ನು ಸಕಲರಿಗೂ ಕೊಡಲೆಂದು ಆ ಜಗನ್ನಿಯಾಮಕನಾದ ಮೌನಪರ ಮಾತ್ಮನನ್ನು ಧ್ಯಾನಿಸುವೆವು.

ತಮ್ಮ
ಲಿಂಗಾಚಾರ್ಯ ಕಾಳಾಚಾರ್ಯ ಮಾಗೋಡ

——

# ಮುನ್ನುಡಿ



ಬಂಧುಗಳೇ, ವಿಶ್ವಬ್ರಾಹ್ಮಣ ಪುರೋಹಿತರಾದ ವೇ|| ಲಿಂಗಾಚಾರ್ಯ ಮಾಗೋಡು ಇವರು ರಚಿಸಿದ ಶ್ರೀಮೌನೇಶ್ವರ ವಿಜಯ ಎಂಬ ಪುಸ್ತಕವನ್ನು ಆಮೂಲಾಗ್ರವಾಗಿ ಓದಿದೆನು. ಇವರ ಭಾಷಾಶೈಲಿಯು ಒಳ್ಳೇ ಮನೋಹರವಾಗಿಯೂ, ಸವಿಕಟ್ಟಾಗಿಯೂ ಇರುವದು. ಇದನ್ನು ಕೈಯೊಳಗೆ ತೆಗೆದುಕೊಂಡು ಓದಲಿಕ್ಕೆ ಹತ್ತಿದರೆ ಮುಗಿಯುವ ವರೆಗೂ ಎಂತಹ ತ್ವರೆಯ ಕೆಲಸಗಳಿದ್ದರೂ ಕೆಳಗೆ ಇಡಲಿಕ್ಕೆ ಮನಸ್ಸಾಗುವದಿಲ್ಲ. ಯಾಕಂದರೆ ಮಹಾ ಮಹಿಮನಾದ ಶ್ರೀ ಮೌನೇಶ್ವರನ ಅಮಾನುಷ ಕೃತಿಗಳು ಓದುಗರ ಮನಸ್ಸು ಸೆಳೆದು ಬಿಡುತ್ತವಾದ ಕಾರಣ ಈ ಗ್ರಂಥವನ್ನು ಸರ್ವರೂ ಓದಲೇ ಬೇಕೆಂದು ನಾನು ತುಂಬಾ ಸಂತೋಷದಿಂದ ಹೇಳುವೆನು.

ವಿರೂಪಾಕ್ಷಪ್ಪಾ ಮಲಕಪ್ಪಾ ಐರಣೀ
ಹೆಡ್‌ಮಾಸ್ತರ ಮಾಗೋಡ

# ವಿಷಯಾನುಕ್ರಮಣಿಕೆ



# ವರ್ಗಣಿಕೊಟ್ಟ ಮಹನೀಯರ ಹೆಸರುಗಳು



| | | | |
|---|---|---|---|
| ಮಿ. ಭಾಸ್ಕರಾಚಾರ್ಯರು | ಮುಕ್ಕಾಂ | ಹಿರಿಯೂರು. | ೧೦ ರೂ. |
| ಮಿ. ವೀರಾಚಾರ್ಯರು | ಮುಕ್ಕಾಂ | ಹಿರಿಯೂರು. | ೧೦ ರೂ. |
| ಮಿ. ಹೊಸಳ್ಳಿಪ್ಪಾಚಾರ್ಯರು | ,, | ಹಿರಿಯೂರು | ೧೦ ರೂ. |
| ಮಿ. ಚಂದ್ರಾಚಾರ್ಯ | ,, | ತಿಳುವಳ್ಳಿ | ೧೦ ರೂ. |
| ಮಳ್ಳಪ್ಪಾ ಉಜ್ಜಪ್ಪಾ ಕಮದೋಡವರ, | | ಮಾಗೋಡ | ೧೦ ರೂ. |
| ಬಸವಣ್ಣೆಪ್ಪಾ ಮರಡೆಪ್ಪಾ, ಹೆಡ್ಡಮಾಸ್ತರ ತಡಕನಹಳ್ಳಿ | ಮುಕ್ಕಾಂ | ತುಮ್ಮಿನಕಟ್ಟಿ | ೧೦ ರೂ. |

---

ಶ್ರೀ ಮೌನಗುರು ಪರಬ್ರಹ್ಮಣೇ ನಮಃ

ಶ್ರೀ ಗಣೇಶಾಯನಮಃ



# ಶ್ರೀ
# ಮೌನೇಶ್ವರ ವಿಜಯವು

## ಮೊದಲನೆಯ ಅಧ್ಯಾಯ

### ಮಂಗಲಾಚರಣ ಮತ್ತು ಶ್ರೀ ಮೌನಗುರುವಿನ ಅವತಾರ.

||ಶ್ಲೋಕ|| ವಂದೇ ಶ್ರೀ ವಿಶ್ವಕರ್ಮಾಣಂ| ವಾಂಛಿತಾರ್ಥ ಪ್ರದಾಯಕಂ || ವಿಶ್ವೋತ್ಪತ್ತಿರ್ವಿನಾಶಶ್ಚ | ಸ್ಥಿತಿರ್ಯಸ್ಮಾತ್ಪ್ರಜಾಯತೇ ||

||ಟೀಕು|| ಪ್ರಪಂಚದ ಉತ್ಪತ್ತಿಯು, ಸ್ಥಿತಿಯು, ನಾಶವು ಯಾವ ಪರಮಾತ್ಮನಿಂದ ಉಂಟಾಗುತ್ತಿರುವವೋ, ಅಂಥ ಇಷ್ಟಾರ್ಥದಾಯಕನಾದ ವಿಶ್ವಕರ್ಮ ಪರಬ್ರಹ್ಮನನ್ನು ನಮಸ್ಕರಿಸುತ್ತೇನೆ.

||ಶ್ಲೋಕ|| ಯಾ ಮಾಯಾ ಮಧುಕೈಟಭಃ ಪ್ರಶಮನೀ ಯಾ ಮಾಹಿಷೋನ್ಮೂಲಿನೀ| ಯಾ ಧೂಮ್ರಾಕ್ಷಕ ಚಂಡ ಮುಂಡ ಮಥಿನೀ ಯಾ ಸಿದ್ಧ ಲಕ್ಷ್ಮೀಃಪರಾ || ಯಾ ಶುಂಭಾದಿ ನಿಶುಂಭದೈತ್ಯದಳನೀ ಯಾ ರಕ್ತ

ಬೀಜಾಶಿನೀ । ಸಾ ಶಕ್ತೀ ನವಕೋಟಿ ಮಂತ್ರ ಸಹಿತಾ ಮಾಂ ಪಾತು ವಿಶ್ವೇಶ್ವರೀ॥

॥ಟೀಕು॥ ಯಾವ ಮಹಾ ಮಾಯೆಯು ಮಧುಕೈಟಭರನ್ನು ಸಂಹಾರಿಸಿದಳೋ, ಯಾವ ಮಹಿಮಳು ಮಹಿಷಾಸುರನನ್ನು ನಿರ್ಮೂಲ ಮಾಡಿದಳೋ, ಯಾವ ಜಗನ್ಮೋಹಿನಿಯು ಧೂಮ್ರಾಕ್ಷ, ಚಂಡ-ಚಾಮುಂಡರನ್ನು ನಾಶ ಮಾಡಿದಳೋ, ಯಾವ ಕರುಣಾಸಮುದ್ರಳು ಭಕ್ತರ ಇಷ್ಟಾರ್ಥವನ್ನು ಕೊಡುವದಕ್ಕೋಸ್ಕರ ಸಿದ್ಧಲಕ್ಷ್ಮೀ ಎನಿಸಿಕೊಂಡಿರುವಳೋ, ಯಾವ ಭಗವತಿಯು ಶುಂಭ-ನಿಶುಂಭರನ್ನು ಕೊಂದಳೋ, ಯಾವ ಮಹಾಶಕ್ತಿಯು ರಕ್ತ ಬೀಜಾಸುರನ ಸೊಕ್ಕನ್ನು ಮುರಿದಳೋ, ಯಾವ ಜಗಜ್ಜನನಿಯು ಒಂಬತ್ತು ಕೋಟಿ ಮಂತ್ರಶಕ್ತಿಯಿಂದ ಸೇವಿಸಿಕೊಳ್ಳುತ್ತಿರುವಳೋ, ಯಾವ ಶಂಕರಿಯು ಪ್ರಪಂಚಕ್ಕೆಲ್ಲ ಕರ್ತೃವೆನಿಸಿಕೊಂಡಿರುವಳೋ ಅಂಥ ಮಹಾಮಹಿಮಳಾದ ಶ್ರೀ ಮಹಾ ಕಾಳಿಕಾದೇವಿಯು ನನ್ನನ್ನು ರಕ್ಷಿಸಲೆಂದು ಬೇಡಿಕೊಳ್ಳುವೆನು.

॥ಶ್ಲೋಕ॥ ಶ್ರೀಕಂಠತನಯಂ ವಂದೇ। ಶ್ರೀಕಂಠೋಪರಿವಾರಣಂ। ವಿಕುಂಠರದನಂದೇವಂ । ವೈಕುಂಠಾದಿ ಸುರಾರ್ಚಿತಂ॥

॥ಟೀಕು॥ ಶಿವಕುಮಾರನಾಗಿಯೂ, ಗಜಮುಖನಾಗಿಯೂ, ಭಿನ್ನವಾದ ಕೋರೆಹಲ್ಲುಗಳುಳ್ಳವನಾಗಿಯೂ, ವಿಷ್ಣುವೇ ಮೊದಲಾದ ದೇವತೆಗಳಿಂದ ಪೂಜಿಸಿಕೊಳ್ಳುವವನಾಗಿಯೂ ಮೆರೆಯುವ ದೇವಶ್ರೇಷ್ಠನಾದ ಶ್ರೀ ಗಣಪತಿಯನ್ನು ನಮಸ್ಕರಿಸುತ್ತೇನೆ.

॥ಶ್ಲೋಕ॥ ಶಿವಂಹರಿಂವಿಧಾತಾರಂ ತತ್ಪತ್ನೀಸ್ತತ್ಸುತಾನ್ ಗುರೂನ್. ವಂದೇ ಸಮಸ್ತ ಪ್ರತ್ಯೂಹ ಶಾಂತಯೇ ಮಂಗಳಾಯಚ ॥

॥ಟೀಕು॥ ಎಲ್ಲ ವಿಘ್ನಗಳು ಶಾಂತಿಯನ್ನು ಹೊಂದಿ, ಶುಭವುಂಟಾಗುವದಕ್ಕೋಸ್ಕರ ಶ್ರೀ ಶಿವನಿಗೂ, ವಿಷ್ಣುವಿಗೂ, ಬ್ರಹ್ಮನಿಗೂ, ಅವರ ಪತ್ನಿಯರಿಗೂ, ಅವರ ಪುತ್ರರಿಗೂ ಮತ್ತು ಗುರುಶ್ರೇಷ್ಠರಾದ ಶ್ರೀ ರೂಢಾಚಾರ್ಯರ ಚರಣ ಕಮಲಗಳಿಗೂ ಪುನಃ ಪುನಃ ನಮಸ್ಕರಿಸುವೆನು.

ಪರಬ್ರಹ್ಮಸ್ವರೂಪನಾಗಿಯೂ, ವೇದಾಗಮಗಳಿಗೆ ಅಗೋಚರನಾಗಿಯೂ, ಸೃಷ್ಟಿ, ಸ್ಥಿತಿ, ಲಯ ಇವುಗಳ ಕಾರಣಕರ್ತನಾಗಿಯೂ. ಕೃಪಾ

ಸಮುದ್ರನಾಗಿಯೂ, ಭಕ್ತೋದ್ಧಾರಕನಾಗಿಯೂ, ಲೀಲಾಮೂರ್ತಿಯಾಗಿಯೂ, ಮಹಾಮಹಿಮನಾಗಿಯೂ, ಅನಾಥರಕ್ಷಕನಾಗಿಯೂ ಮೆರೆಯುವ ಶ್ರೀಗುರು ಮೌನದೇವನೇ, ಈ ನಿನ್ನ ಚರಿತ್ರೆಯನ್ನು ಬರೆಯಲುದ್ಯುಕ್ತನಾದ ನನಗೆ ಯಾವ ತೊಂದರೆಯೂ ಉಂಟಾಗದಂತೆ ಅನುಗ್ರಹಿಸಿ ಇದನ್ನು ಪೂರ್ಣಗೊಳಿಸಬೇಕೆಂದು ನಿನ್ನ ಚರಣಾರವಿಂದಗಳಿಗೆ ದೀರ್ಘದಂಡ ಬಿನ್ನಹಮಾಡಿಬೇಡಿಕೊಳ್ಳುವೆನು.

——

# ಕಥಾ ಪ್ರಾರಂಭಃ



ಶ್ರೀ ಮಹಾ ಮೇರುವಿಗೆ ದಕ್ಷಿಣ ಭಾಗದಲ್ಲಿರುವ ಐವತ್ತಾರು ದೇಶಗಳಲ್ಲಿ ಪವಿತ್ರವಾದ 'ಸಗರನಾಡು' ಎಂದು ಪ್ರಖ್ಯಾತಿಯನ್ನು ಹೊಂದಿದ ಒಂದು ರಾಜ್ಯವಿತ್ತು. ಆ ನಾಡೊಳಗಿರುವ ಎಲ್ಲ ಜನರು ಆಚಾರಶೀಲರೂ, ಪರೋಪಕಾರಿಗಳೂ, ಸ್ವಧರ್ಮ ಪಾಲಕರೂ, ಸದ್ಗುಣ ಭರಿತರೂ, ಸತ್ಯವಂತರೂ ಆಗಿದ್ದರು. ಮೋಸಗಾರರೂ, ಚಾಡಿಖೋರರೂ, ಜಾರರೂ, ಚೋರರೂ, ಆ ರಾಜ್ಯದಲ್ಲಿ ಎಲ್ಲಿ ಹುಡಿಕಿದರೂ ಸಿಗುವಂತಿದ್ದಿಲ್ಲ. ಸರ್ವರೂ ಪರಮೇಶ್ವರನ ಪಾದಾರವಿಂದಗಳಲ್ಲಿ ಭಕ್ತಿಯನ್ನಿಟ್ಟು ಸೌಖ್ಯದಿಂದ ಕಾಲಹರಣ ಮಾಡುತ್ತಿದ್ದರು. ಆ ಪುಣ್ಯಭೂಮಿಯಲ್ಲಿರುವ ಮರಗಳು ಫಲಭರಿತವಾಗಿ ಕಲ್ಪವೃಕ್ಷಗಳ ಹಾಗೆ ಶೋಭಿಸುತ್ತಿದ್ದವು. ಆಕಳುಗಳು ಸಭ್ಯರೀತಿಯಿಂದ ಹಾಲನ್ನು ಕರೆಯುತ್ತಿರುವದರಿಂದ ನೋಡಿದವರೆಲ್ಲರೂ ಅವುಗಳಿಗೆ ಕಾಮಧೇನುಗಳೆಂದು ಅನ್ನುತ್ತಿದ್ದರು. ಗಿಡ-ಬಳ್ಳಿಗಳಂತೂ ಸುವಾಸನೆಯುಳ್ಳ ಹೂಗಳಿಂದ ಪರಿಪೂರ್ಣವಾಗಿ ಯಾವಾಗಲೂ ಮೆರೆಯುತ್ತಿದ್ದವು ಅಲ್ಲಿರುವ ಸ್ತ್ರೀಯರು ಪದ್ಮಿನೀ ಜಾತಿಯವರೂ, ಪತಿವ್ರತಾ ಶಿರೋಮಣಿಗಳೂ, ಗುರು-ಹಿರಿಯರ ಮತ್ತು ಅತ್ತೆ-ಮಾವಂದಿರ ಆಜ್ಞೆಯನ್ನು ಪಾಲಿಸತಕ್ಕವರೂ ಆಗಿ ಒಪ್ಪುತ್ತಿದ್ದರು. ಆ ರಾಜ್ಯದಲ್ಲಿ ಎಲ್ಲಿ ನೋಡಿದರೂ ಕಿಳಿಸೀರಿನ ಸರೋ

ವರಗಳೂ, ಪವಿತ್ರವಾದ ನದಿಗಳೂ ಹರಿಯುತ್ತಿರುವವಲ್ಲದೆ, ಮನೆ-ಮನೆಗೆ ಸೀನೀರಿನ ಬಾವಿಗಳೂ ಶೋಭಿಸುತ್ತಿದ್ದವು. ಯಾರ ಮನೆಯಲ್ಲಿ ನೋಡಿದರೂ ಹೆಂಡಿರು-ಮಕ್ಕಳುಗಳಿಗೂ, ಧನ-ಧಾನ್ಯಗಳಿಗೂ, ಅನ್ನ-ವಸ್ತ್ರಗಳಿಗೂ ಕೊರತೆ ಇಲ್ಲದ್ದರಿಂದ ಐವತ್ತಾರು ದೇಶಗಳಲ್ಲಿ ಆ ಸಗರ ರಾಜ್ಯವೇ ಶ್ರೇಷ್ಠವೆಂದು ಹೆಸರುಗೊಂಡಿತ್ತು.

ಈ ಮೇರೆಗೆ ಸುಖ-ಸಂಪತ್ತುಗಳ ತವರಮನೆ ಎನಿಸಿದ ಸಗರ ರಾಜ್ಯ ದಲ್ಲಿ ಸುರಪುರವೆಂಬ ಪಟ್ಟಣವು ಮೆರೆಯುತ್ತಿತ್ತು. ಅದರ ಸಮೀಪದಲ್ಲಿಯೇ 'ಗೋನಾಲ' ವೆಂಬ ಗ್ರಾಮವು ಮಂಗಳಕರವಾಗಿಯೂ, ಮನೋಹರ ವಾಗಿಯೂ ರಾಜಿಸುತ್ತಿತ್ತು. ಆ ಗ್ರಾಮದಲ್ಲಿ ಕರ್ಮಹರ (ಕಮ್ಮಾರಕಿ) ಕೆಲಸ ವನ್ನು ಮಾಡುವ ಹಾವಪ್ಪನೆಂಬ ನಿರ್ಮಲ ಮನಸ್ಸಿನ ವಿಶ್ವಕರ್ಮ ಬ್ರಾಹ್ಮಣ ನಿದ್ದನು. ಆತನು ಆಚಾರಶೀಲನೂ, ಸಮಾಧಾನ ಗುಣವುಳ್ಳವನೂ, ಸತ್ಯ ವಾಕ್ಯವನ್ನು ಆಡತಕ್ಕವನೂ, ದೇವರಲ್ಲಿಯೂ ಗುರುಗಳಲ್ಲಿಯೂ ಭಕ್ತಿಯುಳ್ಳ ವನೂ, ಧರ್ಮಿಷ್ಠನೂ, ಉದ್ಯೋಗತತ್ಪರನೂ ಆಗಿದ್ದನು. ಆತನಿಗೆ ಪತಿ ವ್ರತಾಶಿರೋಮಣಿಯಾದ ಹಾವಕ್ಕನೆಂಬ ಒಬ್ಬ ಹೆಂಡತಿಯಿದ್ದಳು. ಹಾವ ಕ್ಕನು ಶಾಂತಸ್ವಭಾವದವಳೂ, ನಿರ್ಮಲ ಹೃದಯಳೂ, ಪ್ರಾಣಿದಯಾ ಪರಳೂ, ದೇವರಲ್ಲಿ ಮತ್ತು ಗುರು-ಹಿರಿಯರಲ್ಲಿ ಭಕ್ತಿಯುಳ್ಳವಳೂ ಆಗಿದ್ದಳು. ಆ ಸಾಧ್ವೀಮಣಿಯು ಮನೆಯವರ ಕೂಡಾಗಲಿ, ನೆರೆಮನೆಯ ವರ ಕೂಡಾಗಲಿ ಜಗಳಕ್ಕೆ ಹೋಗಿ ದುರುಳ ಸ್ತ್ರೀಯಳೆಂದು ಯಾವ ಕಡೆ ಯಿಂದಲೂ ಅನಿಸಿಕೊಂಡಿದ್ದಿಲ್ಲ. ತನ್ನ ಮನೆಯಾಯಿತು, ತಾನಾಯಿತು; ಮತ್ತೊಬ್ಬರ ಮನೆಗೆ ಹೋಗಿ ನಿರುದ್ಯೋಗಿಗಳಾದ ಹೆಂಗಸರೊಡನೆ ಒಣ ಹರಟೆಯನ್ನು ಎಂದೂ ಕೊಚ್ಚುತ್ತಿದ್ದಿಲ್ಲ. ಚಾಡಿ-ಛಿದ್ರಗಳ ಗಾಳಿಯು ಸ್ವಪ್ನ ದಲ್ಲಿಯೂ ಕೂಡ ಆಕೆಯನ್ನು ಸೋಂಕಿದ್ದಿಲ್ಲ. ಗಂಡನೇ ದೇವರೆಂಬ ಭಾವನೆ ಯಿಂದ ಆತನ ಸೇವೆಯಲ್ಲಿ ಸ್ವಲ್ಪಾದರೂ ಬೇಸರಮಾಡುತ್ತಿದ್ದಿಲ್ಲ. ಯಾವಾ ಗಲೂ ಶ್ರೀಪರಮೇಶ್ವರನನ್ನು ಧ್ಯಾನಿಸುತ್ತ ಕಾಲ ಕಳೆಯುತ್ತಿದ್ದಳು. ಆ ಸಾಧ್ವಿಯು ಜನರ ಕೂಡ ಬಹಳ ಮಾತುಗಳನ್ನಾಡದೆ ಮೌನದಿಂದಿರುವದ ರಿಂದಲೂ, ವಸ್ತ್ರಾಭರಣಗಳ ಆಡಂಬರಕ್ಕೆ ಹೋಗದಿರುವದರಿಂದಲೂ ಎಲ್ಲರ ಹಾವಕ್ಕನಿಗೆ ಮುಗ್ಧೆ ಎಂದು ಅನ್ನುತ್ತಿದ್ದರು.

ನೆರೆಮನೆಯ ಹೆಣ್ಣುಮಕ್ಕಳು ಯಾರಾದರೂ ಮನೆಗೆ ಬಂದು ಪ್ರೀತಿಗಾಗಲಿ, ಚೇಷ್ಟೆಗಾಗಲಿ:—ಹಾವಕ್ಕಾ, ನಿನಗೆ ಒಡವೆ-ವಸ್ತುಗಳ ಮೇಲೆ ಪ್ರೀತಿಯೇ ಇರುವದಿಲ್ಲ. ನಿನ್ನ ಗಂಡನು ಬೇಕಾದ ಹಾಗೆ ಮಡಿಯುತ್ತಾನೆ. ಆತನಿಗೆ ಹೇಳಿ ಕೆಲವು ಆಭರಣಗಳನ್ನು ಮಾಡಿಸಿಕೊಳ್ಳಬಾರದೆ? ನೀನೆಂಥ ಹುಚ್ಚಳು! ಯಾವಾಗಲೂ ಮೂಕಳ ಹಾಗೆ ಸುಮ್ಮನೆ ಇರುವೆ. ಮಂಗಲಸೂತ್ರದ ವಿನಃ ಮತ್ತೊಂದು ಒಡವೆಯು ಇರಲೇ ಬಾರದೆ ನಮ್ಮವ್ವಾ! ನೀನಾದರೂ ಬಹು ಗಟ್ಟಿ ಮನಸ್ಸಿನವಳು ಹೀಗೆಂದು ಅಂದರೆ ಆ ಮಾತಿಗೆ ಹಾವಕ್ಕನು:—'ಅಮ್ಮಗಳಿರಾ, ಹೆಚ್ಚಿನ ಕಿಮ್ಮತ್ತಿನ ಒಡವೆ-ವಸ್ತುಗಳೂ, ಸೀರೆ-ಕುಪ್ಪಸಗಳೂ ಶ್ರೀಮಂತರಾದ ನಿಮಗೇ ಇರಲಿ; ಬಡವರಾದ ನಮಗೆ ಅವುಗಳೆಲ್ಲ ಯಾತಕ್ಕೆ? ದೇವರು ನನ್ನ ಮಂಗಲಸೂತ್ರಕ್ಕೆ ಮಾತ್ರ ದೀರ್ಘಾಯುಷ್ಯವನ್ನು ಕೊಡಲಿ' ಎಂದು ಹೇಳಿ ಸುಮ್ಮನಾಗಿಬಿಡುತ್ತಿದ್ದಳು. ತಿರುಗಿ ಅವರು ಎಷ್ಟು ಮಾತಾಡಿಸಿದರೂ ಮಾತಾಡುತ್ತಿದ್ದಿಲ್ಲ. ಆದ್ದರಿಂದ ನೆರೆಹೊರೆಯ ಸಾಧಾರಣ ನಡಾವಳಿಯುಳ್ಳ ಸ್ತ್ರೀಯರು ಹಾವಕ್ಕನಿಗೆ:—ಇದೆಂಥ ದಡ್ಡ ಖೋಡಿಯೋ? ಹಾವಪ್ಪನಿಗೆ ಸರಿಯಾದ ಹೆಂಡತಿಯಲ್ಲ ಇಂಥವಳೊಡನೆ ಬಾಳ್ವೆ ಮಾಡುವದಾದರೂ ಹೇಗೆ? ಸ್ವಲ್ಪಾದರೂ ಜಾಣತನವಿಲ್ಲ, ಹೀಗೆಂದು ಮನಬಂದ ಹಾಗೆ ಮಾತಾಡುತ್ತಿದ್ದರು. ಸಾಧ್ವೀಶಿರೋಮಣಿಯುಳಾದ ಹಾವಕ್ಕನು ಯಾರು ಏನು ಮಾತಾಡಿದರೂ ಅದನ್ನು; ಮನಸ್ಸಿಗೆ ಹಚ್ಚಿಕೊಳ್ಳದೆ, ಪರಾತ್ಪರನಾದ ಶ್ರೀ ವಿಶ್ವಕರ್ಮ ಪರಬ್ರಹ್ಮನ ಚರಣಾರವಿಂದಗಳಲ್ಲಿಯೇ ಮನಸ್ಸನ್ನಿಟ್ಟು ಬೂದಿಮುಚ್ಚಿದ ಕೆಂಡದ ಹಾಗೆ ಶೋಭಿಸುತ್ತಿದ್ದಳು.

ಈ ಮೇರೆಗೆ ಸದ್ಗುಣ ನಿಧಿಯಾಗಿರುವ ಹಾವಕ್ಕನ ನಿಜಸ್ಥಿತಿಯನ್ನು ಕಂಡುಹಿಡಿಯಬೇಕಾದರೆ ಸುಜ್ಞಾನಿಗಳಿಂದಾದೀತೇ ಹೊರ್ತು ಅಜ್ಞಾನಿಗಳಿಂದ ಹೇಗಾದೀತು? ಪಾಪ! ನೆರೆಹೊರೆಯ ಸ್ತ್ರೀ- ಪುರುಷರಾದರೂ ಹಾವಕ್ಕನ ಭಗವದ್ಭಕ್ತಿಯ ಸುಗುಣವನ್ನು ಏನು ಬಲ್ಲರು? ಆಕೆಯು ಮೌನದಿಂದಿರುವದನ್ನು ನೋಡಿ ಮುಗ್ಧಳೆಂತಲೂ, ವಸ್ತ್ರಾಭರಣಗಳ ಹೆಚ್ಚಳವಿಲ್ಲದ್ದನ್ನು ನೋಡಿ ಹುಚ್ಚಳೆಂತಲೂ ಅನ್ನುತ್ತಿದ್ದರು. ಎರಡನೆಯವರ ಮಾತು ಹಾಗಿರಲಿ. ಗಂಡನಾದ ಹಾವಪ್ಪನು ಸಹ ಮನೆಯವರ ಮತ್ತು ನೆರೆಮನೆ

ಯವರ ಮಾತುಗಳಿಗೆ ಕಿವಿಗೊಟ್ಟು ತನ್ನ ಹೆಂಡತಿಯನ್ನು ಹುಚ್ಚಳೆಂದು ತಿಳಿದು, ಆಕೆಯೊಡನೆ ಸಂಸಾರಸುಖವನ್ನೇ ಅನುಭವಿಸುತ್ತಿದ್ದಿಲ್ಲ. ಇಷ್ಟೇ ಅಲ್ಲ, ಆ ಪತಿವ್ರತೆಯ ಮೇಲೆ ಬಹಳೇ ಬೇಸರ ಮಾಡುತ್ತಿದ್ದನು.

ಹಾವಕ್ಕನ ಅತ್ತೆಯಂತೂ ಬಹು ಸಿಟ್ಟಿನ ಸ್ವಭಾವದವಳು. ಸೊಸೆಯನ್ನು ಕಂಡರೆ ಆಕೆಯ ಮೈಗೆ ಮುಳ್ಳುಚುಚ್ಚಿದಂತಾಗ ತ್ತಿತ್ತು. ಸೊಸೆಯು ಕೂತರೂ ಸೇರುತ್ತಿದ್ದಿಲ್ಲ; ನಿಂತರೂ ಸೇರುತ್ತಿದ್ದಿಲ್ಲ ಅಡಿಗೆ ಮಾಡುವದು ಸ್ವಲ್ಪ ತಡವಾಯಿತೆಂದರೆ ಬಾಯಿಗೆ ಬಂದ ಹಾಗೆ ಬೈಯುತ್ತಿದ್ದಳು. ಮಾಡಿದ ಅಡಿಗೆಯು ನೆಟ್ಟಗಿದ್ದರಂತೂ ಒಳಿತಾಯಿತು; ಅದರಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿದ್ದರೆ ಮುದುಕೆಯ ಬಾಯಿಗೆ ನೆಲೆಯೇ ಇರುತ್ತಿದ್ದಿಲ್ಲ. ಹಬ್ಬ-ಹುಣ್ಣಿವೆಗಳು ಬಂದರೆ ತೀರಿತು, ನಾಳೆ ಎಂದರೆ ಇವತ್ತಿನ ದಿವಸವೇ ದೇವರ ಮನೆ ಸಾರಿಸು, ಅಡಿಗೆಮನೆ ಸಾರಿಸು ಎಂದು ಬೆಳಗಾಗುವ ವರೆಗೂ ಹಾವಕ್ಕನನ್ನು ಮಲಗಗೊಡುತ್ತಿದ್ದಿಲ್ಲ ಯಾವಾಗಲೂ ಒಟಗುಟ್ಟುತ್ತಲೇ ಇರುತ್ತಿದ್ದಳು. ನೆರೆಮನೆಯವರು ಯಾರಾದರೂ ಮನೆಗೆ ಬಂದರೆ ಅವರ ಕೂಡ:—, ನನಗೆಂಥ ಖೋಡಿ ಸೊಸೆ ಸಿಕ್ಕಿರುವಳು? ಕತ್ತೆ ಮುಂಡೆ! ಸ್ವಲ್ಪಾದರೂ ಬುದ್ಧಿಯಿಲ್ಲ. ತಂಬಿಗೆ ತಪ್ಪೇಲಿಗಳನ್ನು ಚನ್ನಾಗಿ ತಿಕ್ಕುವದಿಲ್ಲ. ಅಡಿಗೆ ಮತ್ತು ಊಟಗಳಲ್ಲಿ ಓರಣವೇ ಇಲ್ಲ. ಹೇಳಿ ಹೇಳಿ ನನಗಂತೂ ಸಾಕಾಗಿ ಹೋಗಿದೆ. ಯಾರ ಮನೆಯಲ್ಲಿಯೂ ಇಂಥ ಪಡ್ಡ ಸೊಸೆ ಇರಲಿಕ್ಕಿಲ್ಲ. ಇದಕ್ಕೆ ಯಾರು ಯಾರು ಮಾಡುವದೇನು? ನಮ್ಮ ಹಾವಪ್ಪನ ದೈವವೇ ಕೆಟ್ಟದ್ದಾಗಿದೆ. ಇದೆಲ್ಲ ಹಾಗಿರಲಿ. ಇವಳ ಹೊಟ್ಟೆಯಲ್ಲಿ ಸಂತಾನವೇ ಆಗಬಾರದೇ? ಮೊಮ್ಮಕ್ಕಳನ್ನು ನೋಡಿಯಾದರೂ ಸಂತೋಷಪಡುವೆನೆಂದರೆ ಅದೂ ಸಹ ನನ್ನ ದೈವದಲ್ಲಿರಲಿಕ್ಕಿಲ್ಲವೇ? ಯಾವಾಗಲೂ ಈ ಬಂಜೆಯ ಕೂಡ ಕಾಲಹರಣ ಮಾಡಬೇಕಾಗಿದೆ. ಬೆಳಿಗ್ಗೆ ಎದ್ದು ಇವಳ ಮುಖವನ್ನು ನೋಡಿದರೆ ಆಗುವ ಕಾರ್ಯಗಳು ಸಹ ಆಗುವದಿಲ್ಲ, ಹೀಗೆಂದು ಹಾವಕ್ಕನ ವಿಷಯವಾಗಿ ಸ್ವಲ್ಪಾದರೂ ಭಿಡೆ ಇಲ್ಲದಂತೆ ಮಾತಾಡುತ್ತಿದ್ದಳು. ಬೈಯುವದೆಂದರೆ ಆಕೆಗೆ ಒಂದು ಹಬ್ಬವೇ ಆಗಿತ್ತು. ಪುಣ್ಯಾತ್ಮಳ ಬಾಯಿಗೆ ವಿಶ್ರಾಂತಿಯೇ ಇದ್ದಿಲ್ಲ. ಆಹಾ! ಅತ್ತೆಯವರ ಪ್ರತಾಪವು ಹೇಗಿದೆ ನೋಡಿರಿ! ಆ ಮಹಿಮಳಿಗೆ ಮೃತ್ಯುದೇವತೆಯೆಂದರೆ ಅತಿಶಯೋಕ್ತಿಯಾಗಲಾರದು.

ಹೀಗೆ ಒಂದು ದಿನವಲ್ಲ, ಎರಡು ದಿನಗಳಲ್ಲ ಪ್ರತಿನಿತ್ಯವೂ ಇದೇ ರೀತಿಯಾಗಿಯೇ ಒಟಗುಟ್ಟುತ್ತಿರುವ ಅತ್ತೆಯ ಕಠೋರ ಮಾತುಗಳನ್ನು ಕೇಳಿ ಕೇಳಿ ನಮ್ಮ ಹಾವಕ್ಕನ ಗತಿಯು ಏನಾಗಿದ್ದೀತು? ಇತ್ತ ಗಂಡನಾದರೂ ಪ್ರೀತಿಯುವನೆ? ಕಂಡರೆ ಸೇರುತ್ತಿದ್ದಿಲ್ಲ. 'ಗಂಡನಿಗೆ ಬೇಡಾದವಳು ಮನೆಯೊಳಗಿನ ಗುಂಡುಕಲ್ಲಿಗೂ ಸಹ ಬೇಡಾಗುವಳು.' ಎಂಬ ಲೋಕವಾದಿಕೆಯುಂತೆ ಮನೆಯುವರೆಲ್ಲರೂ ಹಾವಕ್ಕನ ಮೇಲೆ ವಿರೋಧವನ್ನೇ ಮಾಡುತ್ತಿದ್ದರು.

ಈ ರೀತಿಯಾದ ಕಷ್ಟವು ಶ್ರೇಷ್ಠಳಾದ ನಮ್ಮ ಹಾವಕ್ಕನಿಗಲ್ಲದೆ ದುಷ್ಟರಾದ ಮತ್ತಾವ ಸ್ತ್ರೀಯರಿಗಾದರೂ ಇದ್ದರೆ ತಾವು ಹುಟ್ಟಿದ ಮನೆಯನ್ನು ಸೇರಿ, ಇಲ್ಲದ್ದೊಂದು ಹೇಳಿ, ಗಂಡನ ಮನೆಯುವರಿಗೂ, ತವರ ಮನೆಯುವರಿಗೂ ಜಗಳವನ್ನೇ ಎಬ್ಬಿಸುತ್ತಿದ್ದರು; ಅಥವಾ ಅತ್ತೆಯು ಒಂದು ಮಾತಾಡಿದರೆ ಕಜ್ಜಾಲತನದಿಂದ ಹತ್ತು ಮಾತುಗಳನ್ನಾಡಿ ಹೆದರಿಸಿಕೊಳ್ಳುತ್ತಿದ್ದರು. ಹೀಗಾಗದಿದ್ದಲ್ಲಿ ಸವಿಮಾತುಗಳಿಂದ ಗಂಡನನ್ನು ಮರುಳುಗೊಳಿಸಿ, ಅಣ್ಣ-ತಮ್ಮಂದಿರಲ್ಲಿ ವಿಭಾಗವನ್ನೇ ಮಾಡಿಸಿಬಿಡುತ್ತಿದ್ದರು. ಇದೂ ಸಾಧ್ಯವಾಗದಿದ್ದರೆ ಕೆರೆ ಭಾವಿಗಳ ಪಾಲಾಗಿ ಜೀವಕ್ಕೆ ಎರವಾಗಿ ಹೋಗುತ್ತಿದ್ದರು. ಸದ್ಗುಣ ಶಿರೋರತ್ನಳಾದ ಹಾವಕ್ಕನು ಈ ತರದ ಯಾವ ಗೊಂದಲಕ್ಕೂ ಹೋಗದೆ, ಅತ್ತೆ--ಮಾವಂದಿರನ್ನು ತಾಯಿ--ತಂದೆಗಳೆಂತಲೂ, ಭಾವ-ಮೈದುನರನ್ನು ಅಣ್ಣ-ತಮ್ಮಂದಿರೆಂತಲೂ, ಗಂಡನನ್ನು ತನ್ನ ಭಾಗದ ದೇವರೆಂತಲೂ ತಿಳಿದು, ಅವರ ಸೇವೆಯನ್ನು ಮನಮುಟ್ಟಿ ಮಾಡುತ್ತಿದ್ದಳು. ಆಹಾ! ಹಾವಕ್ಕನ ಶಾಂತಗುಣವನ್ನು ಯಾರಿಂದ ವರ್ಣಿಸುವದಾದೀತು? ವಿಷವನ್ನೆರೆದವರಿಗೆ ಹಾಲನ್ನೆರೆಯಬೇಕೆಂಬ ಸಂತರ ವಚನವನ್ನಾಕೆ ಅರಿತಿದ್ದಳೋ? ಈ ದುಃಖರೂಪವಾದ ಸಂಸಾರವೇ ಅಸ್ಥಿರವಾಗಿರುವದರಿಂದ ಇದಕ್ಕಾಗಿ ನಾನೇಕೆ ವ್ಯಸನಪಡಬೇಕೆಂದು ಸಹನಶೀಲಳಾಗಿದ್ದಳೋ? ಪ್ರಾರಬ್ಧಕರ್ಮವು ಎಂಥವರನ್ನೂ ಬಿಟ್ಟಿಲ್ಲ. ಕಾರಣ ಅದನ್ನು ಅನುಭವಿಸಿಯೇ ತೀರಬೇಕೆಂದು ಆನಂದಭರಿತಳಾಗಿದ್ದಳೋ? ಹೇಳಲಸದಳವು!

ಹೀಗೆ ಸದ್ಗುಣನಿಧಿಯಾಗಿರುವ ಹಾವಕ್ಕನು ಮತ್ತೊಂದು ಚಿಂತೆಯಿಲ್ಲದೆ ದಯಾಘನನಾದ ಪರಶಿವನೇ ಸಕಲ ಸಂಪತ್ತೆಂದು ನಂಬಿ, ನಿತ್ಯ

ವಲ್ಲಿಯೂ ಪವಿತ್ರ ಜಲವನ್ನು ತುಂಬಿದ ಕೊಡವನ್ನು ಹೊತ್ತುಕೊಂಡು ಊರ ಹೊರಗಿರುವ ಆದಿಲಿಂಗ ದೇವರ ಗುಡಿಗೆ ಬಂದು, ಆ ಮೌನಲಿಂಗನಿಗೆ ಮಜ್ಜನ ಮಾಡಿ, ಗಂಧ, ಅಕ್ಷತೆ, ಪತ್ರಿ, ಪುಷ್ಪ ಮೊದಲಾದ ಉಪಚಾರಗಳಿಂದ ಪೂಜಿಸಿ, ಭಕ್ತಿಪೂರ್ವಕವಾಗಿ ನಮಸ್ಕರಿಸಿ:-'ಮೃತ್ಯುಂಜಯ, ಭಕ್ತರಕ್ಷಕ, ದಯಾನಿಧೆ, ಚಂದ್ರಮೌಳಿ! ಅನಾಥಳಾದ ನನ್ನನ್ನು ರಕ್ಷಿಸು-ರಕ್ಷಿಸು! ಎಂದು ಸ್ತೋತ್ರಮಾಡಿ, ಪುನಃ ಕೆರೆಗೆ ಹೋಗಿ ನೀರು ತುಂಬಿಕೊಂಡು ಮನೆಗೆ ಬರುತ್ತಿದ್ದಳು.

ಹೀಗೆ ಹನ್ನೆರಡು ವರುಷಗಳ ವರೆಗೂ ಆ ಪತಿವ್ರತೆಯು ಪರಮೇಶ್ವರನನ್ನು ಪೂಜಿಸುವ ವ್ರತವನ್ನು ಗೌಪ್ಯವಾಗಿಯೇ ಮಾಡಿದ್ದಳು. ನೋಡಿರಿ. ಮನುಷ್ಯನು ಏನಾದರೊಂದು ಕಾರ್ಯವನ್ನು ಎಷ್ಟು ಗುಪ್ತವಾಗಿ ಮಾಡಿದರೂ ಅದು ಸ್ವಲ್ಪ ಕಾಲದಲ್ಲಿಯೇ ಬಯಲಿಗೆ ಬಿದ್ದು ಹೋಗುತ್ತದೆ; ಆದರೆ ಹಾವಕ್ಕನು ಹನ್ನೆರಡು ವರುಷಗಳ ವರೆಗೂ ಊರ ಹೊರಗಿನ ದೇವಾಲಯಕ್ಕೆ ಹೋಗಿ ಯಾರಿಗೂ ಕಾಣಿಸದಂತೆ ಶಿವಪೂಜೆಯನ್ನು ಮಾಡಬೇಕಾದರೆ ಆ ಪರಾತ್ಪರನಾದ ಮೌನಲಿಂಗನ ಅನುಗ್ರಹದಿಂದಲೇ ಅಲ್ಲವೇ? ಇಲ್ಲದಿದ್ದರೆ ಇಂಥ ಮಹತ್ಕಾರ್ಯವು ಹೇಗೆ ನಡೆದೀತು? ಎಂದಿಗೂ ನಡೆಯದು.

ಈ ರೀತಿಯಾಗಿ ನಿಶ್ಚಲಮನಸ್ಸಿನಿಂದ ತನ್ನನ್ನು ಪೂಜಿಸುತ್ತಿರುವ ಭಕ್ತಶ್ರೇಷ್ಠಳ ಕಷ್ಟವನ್ನು ನೋಡಿ ಶಂಕರನಾದರೂ ಎಷ್ಟು ದಿವಸ ಸುಮ್ಮನಿರುವನು? ಇನ್ನು ಮೇಲೆ ಈ ಮಹಾತ್ಮಳ ಗುಪ್ತ ಪೂಜೆಯನ್ನು ಪ್ರಕಾಶಗೊಳಿಸಿ ಈಕೆಯ ಇಷ್ಟಾರ್ಥವನ್ನು ಕೊಟ್ಟು ಬಿಡಬೇಕೆಂದು ಯೋಚಿಸಿದನು. ದೇವರ ಮನಸ್ಸಿಗೆ ಬರುವದೊಂದೇ ತಡ, ಅಂದಿನ ದಿನವೇ ಹಾವಕ್ಕನ ಗುಪ್ತಪೂಜೆಯು ಬಯಲಿಗೆ ಬಿದ್ದು ಹೋಯಿತು. ಕಠಿಣ ಹೃದಯಳಾದ ಮುದುಕಿಯು ಅಂದರೆ ಹಾವಕ್ಕನ ಅತ್ತೆಯು, ಏನೋ ಕಾರ್ಯಾರ್ಥವಾಗಿ ಊರ ಹೊರಗೆ ಬಂದು ನಿಲ್ಲುವದಕ್ಕೂ, ಹಾವಕ್ಕನು ನೀರಿನ ಕೊಡವನ್ನು ಹೊತ್ತುಕೊಂಡು ಮೌನಲಿಂಗನ ಗುಡಿಯನ್ನು ಹೊಗುವದಕ್ಕೂ ಗಂಟೇ ಬಿದ್ದಿತು.

ಮೊದಲೇ ಸೊಸೆಯು ನಿಂತ ನೆರಳಿಗೆ ಸೇರದ ಮುದುಕೆಗೆ ನೀರಿನ ಕೊಡವನ್ನು ಹೊತ್ತುಕೊಂಡು ಮನೆಗೆ ಬರದೇ ಈಶ್ವರ ದೇವಾಲಯದೊಳಗೆ

ಹೋದದ್ದನ್ನು ಪ್ರತ್ಯಕ್ಷ ನೋಡಿದ ಮೇಲೆ ಕೇಳುವದೇನು? ಅಂಗಾಲಿನಿಂದ ನಡುನೆತ್ತಿಯವರೆಗೂ ಉರಿ ಬಿದ್ದಹಾಗಾಯಿತು. ಮನಸ್ಸಿನಲ್ಲಿ ಇಲ್ಲದ ಕಲ್ಪನೆಗಳು ಒದರಲಿಕ್ಕೆ ಹತ್ತಿದವು. ಮುದುಕೆಯು ಸಿಟ್ಟಿನ ಭರದಲ್ಲಿ—ಈಗಲೇ ಗುಡಿಗೆ ಹೋಗಿ ಆ ದುಷ್ಟಳ ಗುಟ್ಟನ್ನು ಬಯಲಿಗೆ ಹಾಕಬೇಕೆಂದು ಮಾಡಿದಳು; ಆದರೆ ಮತ್ತೇನು ತಿಳಿದುಕೊಂಡಳೋ ಬೇಗನೆ ಅಲ್ಲಿಂದ ಹಿಂದಿರುಗಿ ಮನೆಗೆ ಬಂದು:—ಹಾವ್ಯಾ, ಹಾವ್ಯಾ ಎಂದು ಮಗನನ್ನು ಘಟ್ಟಿಯಾಗಿ ಕೂಗಿದಳು. ನೆರೆಮನೆಯಲ್ಲಿ ಕುಳಿತಿರುವ ಹಾವಪ್ಪನು ಓ ಎಂದು ಅನ್ನುತ್ತ ಮನೆಗೆ ಬರಲು, ಮುದುಕಿಯು ಮಗನನ್ನು ಒಳಗೆ ಕರೆದು:-'ತಮ್ಮಾ, ನಿನ್ನ ಹೆಂಡತಿಯನ್ನು ಹುಚ್ಚಳೆಂದು ತಿಳಿದಿದ್ದೆವು; ಆದರೆ ಈ ದಿವಸ ಅವಳ ಕಾರಸ್ಥಾನವೆಲ್ಲಾ ಬಯಲಿಗೆ ಬಿದ್ದಿತು. ನೀರಿಗೆ ಹೋದವಳು ಆದಿಲಿಂಗನ ಗುಡಿಯಲ್ಲಿ ಏನು ಗಂಟನ್ನು ಇಟ್ಟಿರುವಳು? ಕೊಡ ಹೊತ್ತುಕೊಂಡು ಗುಡಿ ಹೊಕ್ಕದ್ದನ್ನು ನಾನು ಇದೇ ಈಗ ನೋಡಿ ಬಂದೆನು. ನಮ್ಮೆಲ್ಲರ ಮರ್‍ಯಾದೆಯನ್ನು ಕಳೆದುಬಿಟ್ಟಳು. ಬೇಡ ಬೇಡ, ಆ ದುಷ್ಟಳು ನಮ್ಮ ಮನೆಯಲ್ಲಿರುವದೇ ಬೇಡ. ಅವಳನ್ನು ಬಿಟ್ಟುಬಿಡು ಮತ್ತೊಬ್ಬಳನ್ನು ತಂದು ಲಗ್ನ ಮಾಡುತ್ತೇನೆ. ಮನೆಗೆ ಬಂದ ಕೂಡಲೇ ಅವಳ ಮಂಗಲಸೂತ್ರವನ್ನು ಹರಿದುಕೊಂಡು ಬಿಡು, ಎಂದು ಹೇಳಿದಳು.

ತಾಯಿಯು ಈ ಮಾತುಗಳನ್ನು ಕೇಳಿದಾಕ್ಷಣವೇ ಹಾವಪ್ಪನ ಕಣ್ಣುಗಳು ಕೆಂಪಗಾದವು. ಹಲ್ಲುಗಳು ತುಟಿಯನ್ನು ಕಚ್ಚಲಿಕ್ಕೆ ಹಾತೊರೆಯುತ್ತಿದ್ದವು. ಹುಬ್ಬುಗಳು ಗಂಟಿಕ್ಕಿದವು ತನ್ನ ಹೆಸರಿಗೆ ಸರಿಯಾಗಿ ಸಿಟ್ಟಿನಿಂದ ಭುಸುಗುಟ್ಟಹತ್ತಿದನು. ಆದರೂ ಆತನು ತನ್ನ ಹುಟ್ಟುಗುಣವಾದ ಸಮಾಧಾನವೃತ್ತಿಗೆ ಸರಿಯಾಗಿ ಆಗಿನ ಕಾಲದ ಸಿಟ್ಟನ್ನು ನುಂಗಿಕೊಂಡು:-ಅವ್ವಾ, ಇಂದು ನಿನ್ನ ಕಣ್ಣಿಗೆ ಬಿದ್ದವಳು ನಾಳೆ ನನ್ನ ಕಣ್ಣಿಗಾದರೂ ಬೀಳುವಳು. ಮನುಷ್ಯರ ಕೆಟ್ಟ ಗುಣವು ಎಷ್ಟು ದಿವಸ ಮುಚ್ಚುತ್ತದೆ? ಬಯಲಿಗೆ ಬಂದೇ ಬರುತ್ತದೆ ಆ ಮೇಲೆ ಮನೆಯನ್ನು ಬಿಟ್ಟು ಹೊರಗೆ ದೂಡುವದು ಇದ್ದೇ ಇದೆ. ನೀನು ಮಾತ್ರ ಗದ್ದಲವನ್ನು ಮಾಡದೆ ಸುಮ್ಮನಿರು; ಹಾಗಾದರೆ ಅವಳ ಜಾರತನವನ್ನು ಪರೀಕ್ಷಿಸಲಿಕ್ಕೆ ದಾರಿ ಸಿಗುತ್ತದೆ, ಎಂದನು.

ಆ ಮಾತಿಗೆ ಮುದುಕಿಯು:—ತಮ್ಮಾ, ನೀನೆಂಥ ಮೂರ್ಖನು? ಆ ಗುಮ್ಮನಗುಸುಕಳನ್ನು ನಾಳೆ ಪರೀಕ್ಷಿಸುವದೇತಕ್ಕೆ? ಇಂದೇ ಸಾಯಂಕಾಲದಲ್ಲಿ ಪುನಃ ನೀರಿಗೆ ಹೋಗುವಳು. ಆಗ ನೀನು ಅವಳಿಗೆ ಕಾಣದಂತೆ ಹೋಗಿ ನೋಡಿದರೆ ನಿನಗೇ ಗೊತ್ತಾಗುತ್ತದೆ

ಹೀಗೆಂದು ಹೇಳುವ ತಾಯಿಯ ಮಾತಿಗೆ ಸಮ್ಮತಿಸಿ, ತನ್ನ ಉದ್ಯೋಗದಲ್ಲಿ ತೊಡಗಿದನು. ಅಷ್ಟರಲ್ಲಿ ನಿರ್ಮಲ ಮನಸ್ಸಿನ ಹಾವಕ್ಕನು ತನ್ನ ಪೂಜೆಯನ್ನು ಮುಗಿಸಿಕೊಂಡು ನೀರಿನ ಕೊಡ ಹೊತ್ತುಕೊಂಡು ಮನೆಗೆ ಬಂದಳು. ಮೊದಲೇ ಸಿಟ್ಟಿನ್ನುವ ಬೆಟ್ಟವನ್ನೇರಿದ ಹಾವಪ್ಪನೂ ಆತನ ತಾಯಿಯೂ ಆಕೆಯನ್ನು ಕಂಡಾಕ್ಷಣವೇ ಹೊಟ್ಟೆಯಲ್ಲಿ ಕೆಂಡವನ್ನು ಸುರುವಿದಂತಾಗಿ ತಳಮಳಿಸಹತ್ತಿದರು. ಆದರೂ ಹಾವಪ್ಪನು—ಪ್ರತ್ಯಕ್ಷವಿದ್ದರೂ ಪ್ರಮಾಣಿಸಿ ನೋಡಬೇಕೆಂಬ ಮಾತನ್ನು ನೆನಪಿಗೆ ತಂದುಕೊಂಡು, ಅವರಲ್ಲಿಯೇ ಸ್ವಲ್ಪ ಸಮಾಧಾನ ಮಾಡಿಕೊಂಡನು. ನೋಡಿರಿ, ಹೆಂಡತಿಯು ಪರಪುರುಷನೊಡನೆ ವಿನೋದ ಮಾಡಲಿಕ್ಕಾಗಿ ಈಶ್ವರನ ಗುಡಿಯನ್ನು ಹೊಕ್ಕಳೆಂದು ಪ್ರತ್ಯಕ್ಷ ಹಡೆದ ತಾಯಿಯೇ ಹೇಳಿದರೆ ಅದಾವ ಪತಿಗೆ ಸಿಟ್ಟು ಬರಲಿಕ್ಕಿಲ್ಲ? ಆತನಿಗೆ ಕೂತರೂ ಸಮಾದಾನವಾಗಲಿಲ್ಲ, ನಿಂತರೂ ಸಮಾಧಾನವಾಗಲಿಲ್ಲ. ಉದ್ಯೋಗ ಮಾಡಲಿಕ್ಕಂತೂ ಕೈಗಳೇ ಏಳಲಿಲ್ಲ. ಯಾವಾಗ ಹೊತ್ತು ಮುಳುಗುವ ಸಮಯವಾದೀತು? ನಾನು ಯಾವಾಗ ಆ ದುಷ್ಟಳ ಗುಣವನ್ನು ಪರೀಕ್ಷಿಸೇನು?' ಎಂದು ಹಂಬಲಿಸಹತ್ತಿದ್ದನು. ಇರಲಿ. ಹಾವಪ್ಪನಿಗೆ ಇಂಥ ಪ್ರಸಂಗದಲ್ಲಿ ಶಾಂತಗುಣವು ಪ್ರಾಪ್ತವಾದದ್ದೊಂದು ಹಾವಕ್ಕನ ಸುದೈವವೇ ಸರಿ! ಇಲ್ಲದಿದ್ದರೆ ಸಿಟ್ಟಿನ ಭರದಲ್ಲಿ ಎಂಥ ಅನರ್ಥ ಘಟಿಸುತ್ತಿತ್ತೋ ತಿಳಿಯದು! ಇದೆಲ್ಲ ಆ ಪರಮಾತ್ಮನ ಅನುಗ್ರಹವಲ್ಲದೆ ಮತ್ತೇನು?

ಅಷ್ಟರಲ್ಲಿ ಹಾವಕ್ಕನಿಗೆ ಸಾಯಂಕಾಲದ ಶಿವಪೂಜೆಯ ವೇಳೆಯು ಒದಗಿತು. ಕೂಡಲೆ ಆ ಭಕ್ತಶ್ರೇಷ್ಠಳು ಎಂದಿನಂತೆ ಕೊಡವನ್ನು ತೆಗೆದುಕೊಂಡು ನೀರಿಗೆಂದು ಹೊರಟಳು. ಮೊದಲೇ 'ಇಲಿಯನ್ನು ಹಿಡಿಯಲಿಕ್ಕಾಗಿ ಸಪ್ಪಳ ಮಾಡದಂತೆ ಜಪ್ಪಿಸಿಕೊಂಡು ಕುಳಿತ ಬೆಕ್ಕಿನ ಹಾಗೆ' ಸೊಸೆಯು ನೀರಿಗೆ ಹೊರಡುವ ದಾರಿಯನ್ನೇ ನೋಡುತ್ತಿರುವ ಮುದುಕಿಯು

ಹಾವಕ್ಕನು ಮನೆಬಿಟ್ಟು ಹೋಗಿದ್ಬೊಂದೇ ತಡ; ಬೇಗನೆ ಮಗನನ್ನು ಕರೆದು-ಹಾವಪ್ಪಾ, ನೀರಿನ ನೆವಮಾಡಿಕೊಂಡು ಆ ಜಾರಿಣಿಯು ಹೋದಳು. ನೀನು ಕಾಣಿಸದಂತೆ ನಿಂತು ಅವಳ ಕಾರಸ್ಥಾನವನ್ನೆಲ್ಲ ಕಡೆಗಿಡಬೇಕು ನೋಡು, ಎಂದು ಹೇಳಿದಳು. ಹಾವಪ್ಪನಾದರೂ ಅದೇ ಬೇತಿನಲ್ಲಿದ್ದ ಕಾರಣ ಹೆಂಡತಿಯು ನೀರು ತುಂಬಿಕೊಂಡು ಬರುವದರೊಳಗಾಗಿ ಮೌನಲಿಂಗನ ಗುಡಿಗೆ ಹೋಗಿ ಅಲ್ಲಿಯೇ ಒಂದು ಕತ್ತಲೆಯಿರುವ ಕೋಣೆಯಲ್ಲಿ ಕಾಣಿಸದ ಹಾಗೆ ಕುಳಿತನು.

ಕನಸು-ಮನಸ್ಸಿನಲ್ಲಿಯೂ ಸಹ ಪರಪುರುಷರ ದರ್ಶನಾಪೇಕ್ಷೆಯಿಲ್ಲದ ಪರಮ ಪತಿವ್ರತೆಯಾದ ಹಾವಕ್ಕನು ಇದಾವ ವಿಷಯವನ್ನೂ ಅರಿಯದೆ ಮುಖವನ್ನು ಮೇಲಕ್ಕೆತ್ತದಂತೆ ನೆಟ್ಟಗೆ ಕೆರೆಗೆ ಹೋಗಿ ಸ್ನಾನಮಾಡಿ ಕೊಡವನ್ನು ಹೊತ್ತುಕೊಂಡು ಆದಿಲಿಂಗೇಶ್ವರನ ಆಲಯವನ್ನು ಪ್ರವೇಶ ಮಾಡಿದಳು ಅಲ್ಲಿ. ಅರ್ಘಯಿಂದ ಆ ಮೃತ್ಯುಂಜಯನ ಅಭಿಷೇಕ ಮಾಡಿ, ಗಂಧ, ಅಕ್ಷತೆ, ಪತ್ರಿ, ಪುಷ್ಪ ಮುಂತಾದ ಉಪಚಾರಗಳಿಂದ ಪೂಜಿಸಿ, ಮಂಗಲಾರತಿಯನ್ನೆತ್ತಿ, ನಿಶ್ಚಲ ಮನಸ್ಸಿನಿಂದ ಆ ಶಿವಲಿಂಗವನ್ನು ನೋಡುತ್ತ:- ಪರಾತ್ಪರನಾದ ಪರಬ್ರಹ್ಮನೇ, ನಿರಂಜನನೇ, ನಿರಾಕಾರನೇ, ನಿರ್ಗುಣನೇ, ನಿರ್ಮಲ ಸ್ವರೂಪನೇ, ನಿತ್ಯ ತೃಪ್ತನೇ, ಓಂಕಾರ ಮೂರ್ತಿಯೇ, ತ್ರಿಲೋಕ ಕರ್ತನೇ, ಜಗದ್ಭರಿತನೇ ನಿನ್ನ ಪಾದಾರವಿಂದಗಳಿಗೆ ನಮಸ್ಕಾರ, ನಮಸ್ಕಾರಗಳು. ಸಾಕಾರಮೂರ್ತಿಯೇ, ಸನಾತನನೇ, ಅಖಿಲಕೋಟಿ ಬ್ರಹ್ಮಾಂಡಗಳ ಅಧಿಪತಿಯೇ, ವೇದಾಗಮಗಳಿಗೆ ಅಗೋಚರನೇ, ಸುಖಸ್ವರೂಪನೇ, ಸರ್ವಾಧಾರನೇ, ಸಾಕ್ಷಿಸ್ವರೂಪನೇ, ಅವ್ಯಯನೇ, ಅನಂತನೇ, ಆದಿಲಿಂಗನೇ, ನಿನ್ನ ಪಾದಾರವಿಂದಗಳಿಗೆ ನಮಸ್ಕಾರ, ನಮಸ್ಕಾರಗಳು. ಕೈಲಾಸವಾಸನೇ, ಕರುಣಾಸಾಗರನೇ, ಕಾಮನಾಶನೇ, ಮೃತ್ಯುಂಜಯನೇ, ನೀಲಕಂಠನೇ, ಭಕ್ತರಕ್ಷಕನೇ ಪಾರ್ವತೀಶನೇ, ಗಂಗಾಧರನೇ, ಚಂದ್ರಶೇಖರನೇ, ನಂದಿವಾಹನನೇ, ನಾಗಾಭರಣನೇ, ಅಂಧಕಾಸುರ, ವ್ಯಾಘ್ರಾಸುರ, ಗಜಾಸುರ ಮುಂತಾದ ರಕ್ಕಸರ ಸೊಕ್ಕನ್ನು ಮುರಿದ ಮುಕ್ಕಣ್ಣನೇ, ಹರಿ-ಬ್ರಹ್ಮಾದಿಗಳಿಗೆ ವರವನ್ನಿತ್ತ ಪುರಹರನೇ, ಸುರಾಸುರವಂದಿತನೇ, ಸುಖಪೂರ್ಣನೇ ನಿನ್ನ ಚರಣಾರವಿಂದಗಳಿಗೆ ನಮಸ್ಕಾರ, ನಮಸ್ಕಾರಗಳು.

ಈ ರೀತಿಯಾಗಿ ಸ್ತೋತ್ರಮಾಡುತ್ತ ಮೇಲಿಂದ ಮೇಲೆ ನಮಸ್ಕರಿಸುತ್ತಿದ್ದಳು. ಅಹಾ! ಭಗವಂತನು ತನ್ನ ಭಕ್ತರ ಮೇಲೆ ಎಷ್ಟು ದಯವುಳ್ಳವನೆಂ ತಿಳಿಯದು! ಹೀಗೆ ನಿಶ್ಚಲ ಮನಸ್ಸಿನಿಂದ ಸ್ತೋತ್ರಮಾಡುತ ಹಾವಕ್ಕನ ಭಕ್ತಿ-ಭಾವಕ್ಕೆ ಮೆಚ್ಚಿ. ಕೂಡಲೆ ಆ ಶಿವಲಿಂಗದಲ್ಲಿಯೇ ಪ್ರಸನ್ನನಾಗಿ, ತನ್ನ ವರದ ಹಸ್ತವನ್ನು ಆಕೆಯ ತಲೆಯ ಮೇಲಿಟ್ಟು:- ಭಕ್ತಶ್ರೇಷ್ಠಳೇ, ಬೇಡು-ಬೇಡು, ನಿನ್ನ ಇಷ್ಟಾರ್ಥವನ್ನು ಈ ಕ್ಷಣವೇ ಕೊಡುವೆನು, ಎಂದು ನುಡಿದನು. ವೇದಗಳಿಗೂ, ಆಗಮಗಳಿಗೂ ಅಗೋಚರನಾದ ಆದಿಲಿಂಗನು ತನ್ನ ನಿಜರೂಪಿನಿಂದ ಪ್ರಕಟನಾಗಿ ಹೀಗೆ ಹೇಳಬೇಕಾದರೆ ಹಾವಕ್ಕನ ಪುಣ್ಯಫಲವನ್ನು ಎಷ್ಟೆಂದು ಹೇಳಬೇಕು? ಅದನ್ನು ವರ್ಣಿಸಲಿಕ್ಕೆ ಸಾವಿರ ಹೆಡೆಗಳಿರುವ ಆದಿಶೇಷನಿಗಾದರೂ ಅಸಾಧ್ಯವೇ ಸರಿ! ಇರಲಿ.

ಈ ಮೇರೆಗೆ ವರವನ್ನು ಬೇಡೆಂದು ಹೇಳುತ್ತಿರುವ ಶ್ರೀಮಹಾದೇವನ ಪಾದಾರವಿಂದಗಳಿಗೆ ಹಾವಕ್ಕನು ದೀರ್ಘದಂಡ ನಮಸ್ಕಾರಮಾಡಿ, ಎದ್ದು ನಿಂತು ಕೈಜೋಡಿಸಿ ಗದ್ಗದ ಕಂಠದಿಂದ:—'ದೇವಾ! ನಿತ್ಯದಲ್ಲಿಯೂ ಬಂಜೆಯಳೆಂದು ಅನ್ನುತ್ತಿರುವ ಅತ್ತೆಯ ಮಾತುಗಳನ್ನು ಕೇಳಿ ಕೇಳಿ ಬೇಸತ್ತು ಭಕ್ತವತ್ಸಲನಾದ ನಿನ್ನನ್ನು ಮರೆಹೊಕ್ಕಿರುತ್ತೇನೆ. ಮೃತ್ಯುಂಜಯನಾದ ಮೌನಲಿಂಗಾ, ನೀನು ಈ ಅನಾಥಳಿಗೆ ವರವನ್ನು ಕೊಡುವದಾದರೆ. ನಿನ್ನ ಹೆಸರಿನ ಒಬ್ಬ ಸತ್ಪುತ್ರನನ್ನು ಕೊಟ್ಟು ಈ ಅಪವಾದವನ್ನು ತಪ್ಪಿಸಿ ರಕ್ಷಿಸು, ರಕ್ಷಿಸು! ಎಂದು ಬೇಡಿಕೊಂಡಳು.

ಆಗ ಕರುಣಾಸಾಗರನಾದ ಪರಶಿವನು:—ಹಾವಕ್ಕಾ, ನೀನು ಹನ್ನೆರಡು ವರುಷಗಳ ವರೆಗೂ ಬೇಸರಿಯದೆ ಮಾಡಿದ ಪೂಜೆಯಿಂದ ನಾನು ತೃಪ್ತನಾಗಿರುವೆನಲ್ಲದೆ, ನಿನ್ನ ಸೇವೆ ಎಂಬ ಋಣಭಾರವು ನನ್ನ ಮೇಲೆ ಬಹಳೇ ಆಗಿದೆ; ಕಾರಣ ಅದನ್ನು ತೀರಿಸಲಿಕ್ಕಾಗಿ ನಾನೇ ನಿನಗೆ ಮಗನಾಗಿ ತರಿಸುತ್ತೇನೆ, ಎಂದು ಹೇಳಿದನು.

ಆಗ ಹಾವಕ್ಕನು ಆನಂದಸಾಗರದಲ್ಲಿ ಮುಳುಗಿ ಭಕ್ತಿಪುರಸ್ಸರವಾಗಿ ಪರಮಾತ್ಮನಿಗೆ ಶಿರಬಾಗಿ ಕರಜೋಡಿಸಿ:—ದಯಾನಿಧೇ. ಅನಾಥರಕ್ಷಕಾ! ನಾನು ನಿನ್ನ ದರ್ಶನದಿಂದ ಕೃತಾರ್ಥಳಾಗಿರುವೆನಲ್ಲದೆ ನನ್ನ ಜನ್ಮವು ಪವಿತ್ರವಾಗಿ ಹೋಯಿತು. ನಾನು ಭೂಲೋಕದಲ್ಲಿ ಜನಸಿದ್ದು

ಸಾರ್ಥಕವಾಯಿತು. ದೇವಾ! ನೀನು ಕೊಟ್ಟ ವರದ ಫಲವು ಇಂದಿನ ರಾತ್ರಿಯಲ್ಲಿಯೇ ನನಗೆ ಲಭಿಸುವಂತೆ ಅನುಗ್ರಹಿಸಿ ಈ ಸೇವಕಳನ್ನು ಉದ್ಧರಿಸಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು.

ಹೀಗೆ ದೈನ್ಯಭಾವದಿಂದ ಮಾತಾಡುತ್ತಿರುವ ಹಾವಕ್ಕನ ನಿಜವಾದ ಭಕ್ತಿಯನ್ನು ನೋಡಿ ಪರಶಿವನು ಪರಮಾನಂದದಿಂದ:—ಮಗಳೇ, ನಿನ್ನ ಮನೋಭೀಷ್ಟೆಯನ್ನು ಇಂದೇ ಪೂರೈಸುವೆನು. ಸಂದೇಹಗೊಳ್ಳಬೇಡ, ಎಂದು ಹೇಳಿ ಆ ಮಹಾತ್ಮಳ ಮಸ್ತಕದಲ್ಲಿ ಪುನಃ ತನ್ನ ವರದ ಹಸ್ತವನ್ನಿಟ್ಟು ಅಂತರ್ಧಾನ ಹೊಂದಿದನು. ಆ ಮೇಲೆ ಹಾವಕ್ಕನು ಮುಖವೆತ್ತಿ ನೋಡಲು ದೇವಾಧಿದೇವನು ಮಾಯವಾಗಿ ಹೋಗಿದ್ದನು.

ಇದನ್ನೆಲ್ಲ ಮರೆಯಾಗಿ ನಿಂತು ನೋಡುತ್ತಿದ್ದ ಹಾವಪ್ಪನು ಬೆರಗಾಗಿ:—'ಅಹಾ! ಸಂಸಾರವನ್ನು ತ್ಯಾಜ್ಯಮಾಡಿ ಅರಣ್ಯದಲ್ಲಿ ಕುಳಿತು ಅನ್ನೋದಕಗಳಿಲ್ಲದೆ ಒಣಗಿದ ಎಲೆಗಳನ್ನು ಸೇವಿಸಿ ಸಾವಿರ ವರುಷಗಳ ವರೆಗೂ ತಪಸ್ಸು ಮಾಡಿದ ಯೋಗಿಗಳಿಗೂ ಸಹ ದುರ್ಲಭವಾಗಿರುವ ಪರಮಾತ್ಮನ ದರ್ಶನವು ಇಂದಿನ ದಿವಸ ನನಗೆ ಲಭಿಸಿದ್ದರಿಂದ ನಾನು ಧನ್ಯನಾಗಿ ಹೋದೆನು. ಈ ಮಹಾತ್ಮಳನ್ನು ಪಾಣಿಗ್ರಹಣ ಮಾಡಿದ್ದರಿಂದ ಇಂಥ ಸುದಿನವನ್ನು ಕಂಡೆನು. ಅಕಟಾ! ಅವಿವೇಕದಿಂದ ನಮ್ಮ ತಾಯಿಯ ಚಾಡಿಯ ಮಾತಿಗೊಳಗಾಗಿ ಪತಿವ್ರತಾ ಶಿರೋಮಣಿಯಾದ ಇವಳ ಪರೀಕ್ಷೆಗಾಗಿ ವಿಪರೀತ ಕಲ್ಪನೆಯಿಂದ ಬೆನ್ನಟ್ಟಿ ಬಂದೆನು. ನಿತ್ಯದಲ್ಲಿಯೂ ನಾನು ಎಷ್ಟು ಬೇಸರ ಮಾಡಿದರೂ ಅದನ್ನು ಮನಸ್ಸಿನಲ್ಲಿ ಹಿಡಿಯದೆ, ನನ್ನ ಸೇವೆಯನ್ನು ಮನಮುಟ್ಟಿ ಮಾಡಿದಳು. ಇಂಥವಳ ಮೇಲೆ ಸುಮ್ಮನೆ ವಿರೋಧವನ್ನು ಮಾಡಿದೆನು. ಶಿವ ಶಿವ! ನಾನು ಮಹಾ ಮೂರ್ಖನು.' ಎಂದು ತನ್ನ ಅವಿಚಾರದ ಕೃತ್ಯಕ್ಕೆ ಪಶ್ಚಾತ್ತಾಪಪಡುತ್ತ ಹೆಂಡತಿಗೆ ಮುಖ ತೋರುವ ಧೈರ್ಯಸಾಲದೇ ಮನೆಗೆ ಬಂದು ತಾಯಿಯ ಕೂಡ ದೇವಾಲಯದಲ್ಲಿ ನಡೆದ ಎಲ್ಲ ಸಂಗತಿಯನ್ನು ಹೇಳಿದನು. ಆ ಕ್ಷಣವೇ ಮುದುಕಿಯು ಹೌಹಾರಿ:—'ಅಕಟಾ! ಆ ಪುಣ್ಯಾತ್ಮಳಿಗೆ ಇದುವರೆಗೂ ಕೆಟ್ಟ ಮಾತುಗಳಾಡಿದ್ದು ಬಹು ತಪ್ಪಾಯಿತು, ಎಂದು ತನ್ನ ಗಲ್ಲವನ್ನು ತಾನೇ ಬಡಿದುಕೊಂಡಳು.

ಇತ್ತ ಗುಡಿಯಲ್ಲಿದ್ದ ಹಾವಕ್ಕನು ಶಿವನಿಂದ ಅನುಗ್ರಹ ಹೊಂದಿ, ಆದಿಲಿಂಗನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಪುನಃ ಕೆರೆಗೆ ಹೋಗಿ ಕೊಡವನ್ನು ತುಂಬಿಕೊಂಡು ಬರುವಾಗ ಮನಸ್ಸಿನಲ್ಲಿ:— ಈ ದಿನ ಬಹಳೇ ಹೊತ್ತಾಯಿತು ಗಂಡನೂ, ಅತ್ತೆಯೂ ಎಷ್ಟು ಸಿಟ್ಟುಮಾಡುವರೋ ಎಂದು ಅನ್ನುತ್ತ ಮನೆಗೆ ಬರಲು, ಮೊದಲೇ ಎಲ್ಲ ವಿಷಯವನ್ನು ತಿಳಿದಿದ್ದ ಅವರು ಸಿಟ್ಟಿಂದು ಮಾತಾಡಲಿಲ್ಲ. ಹಾವಕ್ಕನು ಇದೆಲ್ಲ ಆ ಮೌನಲಿಂಗನ ಅನುಗ್ರಹವೇ ಎಂದು ತನ್ನ ಅಡಿಗೆಯ ಕೆಲಸದಲ್ಲಿ ತೊಡಗಿದಳು. ಅಷ್ಟರಲ್ಲಿ ಶ್ರೀ ಸೂರ್ಯನಾರಾಯಣನು ಪ್ರತಿನಿತ್ಯದಂತೆ ಐದು ನೂರು ಕೋಟಿ ಯೋಜನದ ತನ್ನ ಅಂತರಿಕ್ಷದ ಮಾರ್ಗಕ್ರಮಣವನ್ನು ಮುಗಿಸಿ, ಪಶ್ಚಿಮದಿಕ್ಕಿನ ಸಮುದ್ರದಲ್ಲಿ ಪ್ರವೇಶ ಮಾಡಿದನು. ಆಗ ಕಮಲಗಳು ಮುಚ್ಚಿದವು; ಕುಮುದಗಳು ಅರಳಲಿಕ್ಕೆ ಹವಣಿಸುತ್ತಿದ್ದವು. ಕತ್ತಲೆ ಎಂಬ ಸ್ತ್ರೀಯಳು ಲೋಕವನ್ನೆಲ್ಲ ಮುಸುಗಿ ಭಯವನ್ನುಂಟು ಮಾಡಿದಳು. ಅದನ್ನು ನೋಡಿ: 'ಹೇ ಸ್ತ್ರೀಯಳೇ ಬೇಡ-ಬೇಡ; ನೀನು ಈ ರೀತಿಯಾಗಿ ಜಗತ್ತನ್ನು ಹೆದರಿಸಬೇಡ. ಇನ್ನು ಸ್ವಲ್ಪ ವೇಳೆಯಲ್ಲಿಯೇ ನಮ್ಮೊಡೆಯನು ತನ್ನ ಸೈನ್ಯ ಸಹಿತನಾಗಿ ಬರುತ್ತಿರುವನು; ಆದ್ದರಿಂದ ನೀನು ಬೇಗನೆ ಹಿಂದಕ್ಕೆ ಹೋಗಿ ಸಂದಿ-ಸಂದಿಗಳಲ್ಲಿ ಅಡಗಿಕೋ' ಎಂದು ಹೇಳಲಿಕ್ಕೆ ಮುಂದೆ ಬಂದಿರುವವೇನೋ ಎಂಬಂತೆ ಆಕಾಶದಲ್ಲಿ ನಕ್ಷತ್ರಗಳು ಕಾಣಿಸಲಿಕ್ಕೆ ಹತ್ತಿದವು; ಆಗ ಹಾವಕ್ಕನು ಅಡಿಗೆಯ ಕೆಲಸವನ್ನು ಮುಗಿಸಿ ಗಂಡನಿಗೂ, ಅತ್ತೆ ಮುಂತಾದವರಿಗೂ ಊಟಕ್ಕೆ ಬಡಿಸಿ ಅವರ ಭೋಜನ ತೀರಿದ ಮೇಲೆ ತಾನೂ ಭೋಜನ ಮಾಡಿ, ಮೌನಲಿಂಗನನ್ನು ಧ್ಯಾನಿಸುತ್ತ ಹಾಸಿಗೆಯ ಮೇಲೆ ಮಲಗಿಕೊಂಡಳು. ಒಂದೇಸವನೆ ಹನ್ನೆರಡುತಾಸು ಮನೆಯೊಳಗಿನ ಕೆಲಸ ಮಾಡಿ ದಣಿದದ್ದರಿಂದಲೋ ಪರಮಾತ್ಮನು ಪ್ರಸನ್ನನಾದ ಆನಂದದಿಂದಲೊ ಮಗ್ಗಲನ್ನು ಹಾಕಿ ಮಲಗಿದಾಕ್ಷಣವೇ ಹಾವಕ್ಕನಿಗೆ ಗಾಢ ನಿದ್ರೆಯು ಹತ್ತಿತು.

ಮಧ್ಯರಾತ್ರಿಯ ಸಮಯ. ಎಲ್ಲರೂ ನಿದ್ರಾದೇವಿಯ ಅಧೀನದಲ್ಲಿದ್ದಾರೆ; ಆಕಾಶದಲ್ಲಿ ಎತ್ತ ನೋಡಿದರೂ ನಕ್ಷತ್ರಗಳು ಥಳಥಳಾಯಮಾನವಾಗಿ ಹೊಳೆಯುತ್ತಿವೆ; ಎಲ್ಲ ಕಡೆಯಲ್ಲಿಯೂ ಶಾಂತಮಯ ಸಾಮ್ರಾಜ್ಯವು

ನೆಲೆಗೊಂಡಿದೆ. ಅಷ್ಟರಲ್ಲಿ ಶ್ರೀ ಮಹಾದೇವನು ಹಾವಕ್ಕನಿಗೆ ಮಗನಾಗುವೆನೆಂದು ವರವನ್ನು ಕೊಟ್ಟಿರುವನು. ಆ ಶಿಶುರೂಪನಾಗಿ ಅವತರಿಸುವ ಭಗವಂತನನ್ನು ನೋಡಿ ಧನ್ಯನಾಗುವೆನೆಂದು ಬಂದನೇನೋ ಎಂಬಂತೆ ಚಂದ್ರನು ಉದಯಿಸಿದನು. ಇಂಥ ಸುಸಮಯದಲ್ಲಿ ಭಕ್ತವತ್ಸಲನಾದ ಪರಮಾತ್ಮನು ಲೋಕೋದ್ಧಾರಾರ್ಥವಾಗಿ ತನ್ನ ಭಕ್ತಳಿಗೆ ವರವನ್ನು ಕೊಟ್ಟ ಪ್ರಕಾರ ಶಿಶುರೂಪವನ್ನು ಧಾರಣಮಾಡಿಕೊಂಡು ಹಾವಕ್ಕನ ಮಗ್ಗಲಲ್ಲಿ ಮಲಗಿ ಮಲೆಯುಣ್ಣುತ್ತಿದ್ದನು. ಆಗ ದೇವತೆಗಳು ಆ ತಾಯಿಮಕ್ಕಳ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ದುಂದುಭಿ ಮೊದಲಾದ ವಾದ್ಯಗಳನ್ನು ಬಾರಿಸಿದರು ಭೃಂಗೀಶ್ವರನು ನಾಟ್ಯವನ್ನು ಆಡಿದನು ದೇವಾಧಿದೇವಾ! ನಿನಗೆ ಭಕ್ತವತ್ಸಲನೆಂಬ ಮಾತು ಸಾರ್ಥಕವಾದದ್ದೇ ಸರಿ!! ಸಕಲ ಶುಭಗಳನ್ನು ಕೊಡುವ ನಿನ್ನ ಪಾದಗಳಿಗೂ, ನಿನ್ನನ್ನೇ ಮಗನನ್ನಾಗಿ ಪಡೆದ ಹಾವಕ್ಕನ ಚರಣಗಳಿಗೂ ನನ್ನ ಅನಂತ ಪ್ರಣಾಮಗಳಿರಲಿ!

ಅಷ್ಟರಲ್ಲಿ ಶ್ರೀಷ್ಟಭಕ್ತಳಾದ ಹಾವಕ್ಕನಿಗೆ ಥಕ್ಕನೆ ಎಚ್ಚರವಾಗಲು ನೂರು ಕೋಟಿ ರಾಮಚಂದ್ರರ ಪ್ರಕಾಶದಿಂದಲೂ, ಪ್ರೇಮಯುಕ್ತವಾದ ನೋಟದಿಂದಲೂ, ಹದಿನಾರು ಕಳೆಗಳಿಂದಲೂ ಕೂಡಿರುವ ಬಾಲಕನು ಲೀಲೆಯಿಂದ ತನ್ನ ಮೊಲೆಯುಣ್ಣುತ್ತಿದ್ದನು ಆಗ ಹಾವಕ್ಕನು ಬೇಗನೆ ಮೇಲಕ್ಕೆದ್ದು ತನ್ನ ಮನಸ್ಸಿನ ಅಪೇಕ್ಷೆಯನ್ನು ಪೂರ್ಣಮಾಡಿದ ಪಾರ್ವತೀಪತಿಯ ಚರಣಾರವಿಂದಗಳಿಗೆ ಮನಸ್ಸಿನಲ್ಲಿಯೇ ನಮಸ್ಕರಿಸುತ್ತ ಪರಮಾನಂದದಿಂದ ಆ ಶಿಶುವನ್ನೆತ್ತಿಕೊಂಡು ಬಾಯಿಗೆ ಬಾಯಿಟ್ಟು ಮುದ್ದನ್ನು ಕೊಟ್ಟಳು ನಿಗಮಾಗಮಗಳಿಗೆ ಅಗೋಚರನಾದ ಭಗವಂತನೇ ಮಗನಾಗಿ ತನ್ನ ಬಗಲಲ್ಲಿ ನಗುತ್ತಿರಲು, ಅದನ್ನು ನೋಡಿದ ಸುಗುಣ ಶಿರೋಮಣಿಯಾದ ನಮ್ಮ ಹಾವಕ್ಕನ ಸುಖ-ಸಂತೋಷಗಳನ್ನು ಯಾರಿಂದ ವರ್ಣಿಸಲಾದೀತು? ಎಂಥವರಿಗಾದರೂ ಅಸಾಧ್ಯವೇ ಸರಿ!

ಈ ರೀತಿಯಾಗಿ ಹಾವಕ್ಕನು ಆನಂದಸಾಗರದಲ್ಲಿ ಮುಳುಗಿರಲು, ಅಷ್ಟರಲ್ಲಿ ಪ್ರಭಾತಕಾಲವು ಪ್ರಾಪ್ತವಾಗಿ ತಂಗಾಳಿಯು ಬೀಸಲಿಕ್ಕೆಹತ್ತಿತು. ಮುಂಗೋಳಿಯು ಕೂಗಿತು; ಮೂಡಣದಿಕ್ಕು ಕೆಂಪಾಯಿತು. ಕಮಲಗಳು ಅರಳಿ, ಒಳಗಿರುವ ಭ್ರಮರಗಳು ಹೊರಗೆ ಬಂದು ಝೇಂಕಾರ ಮಾಡಹತ್ತಿ

ದವು; ನೈದಿಲೆಗಳು ಮುಚ್ಚಿಕೊಂಡವು; ಭಾಸ್ಕರನು ತನ್ನ ಹೊಂಬಣ್ಣದ ಕಿರಣಗಳನ್ನು ಚಾಚುತ್ತ ನರರೂಪನಾಗಿ ಅವತರಿಸಿದ ಪರಮಾತ್ಮನನ್ನು ನೋಡಿ ಧನ್ಯನಾಗುವೆನೆಂದು ಪೂರ್ವದಿಕ್ಕಿನಲ್ಲಿ ಉದಯಿಸಿದನು. ಹಾವಕ್ಕನ ಅತ್ತೆಯು ಎಂದಿನಂತೆ ಎದ್ದು ಸೊಸೆಯು ಇದುವರೆಗೂ ಏಳಲಿಲ್ಲವೇ? ಎಂದು ಅನ್ನುತ್ತ ಹಾವಕ್ಕನು ಮಲಗಿರುವ ಸ್ಥಳಕ್ಕೆ ಬಂದು ನೋಡಲು, ಪ್ರಕಾಶಮಯವಾದ ಶಿಶುವು ತನ್ನ ಸೊಸೆಯ ತೊಡೆಯಮೇಲೆ ಕಾಣಿಸಿತು. ಅದನ್ನು ನೋಡಿದ ಕೂಡಲೆ ಮುದುಕೆಯು ಬೆರಗಾಗಿ:—ಅಹಾ! ಸಾಕ್ಷಾತ್ ಪರಮಾತ್ಮನೇ ನನಗೆ ಮೊಮ್ಮಗನಾದನೆಂದು ಮಹಾಸಂತೋಷದಿಂದ ಆ ಶಿಶುವನ್ನೆತ್ತಿಕೊಂಡು ಕಪೋಲಗಳನ್ನು ಚುಂಬಿಸುತ್ತ:—ಹಾವಕ್ಕಾ, ನೀನು ಪತಿವ್ರತಾಶಿರೋಮಣಿಯೂ, ಪರಬ್ರಹ್ಮನಲ್ಲಿ ಭಕ್ತಿಯುಳ್ಳವಳೂ ಇರುವೆ ಎಂದು ತಿಳಿಯದೆ ಬಹುಪರಿಯಾಗಿ ನಿನ್ನನ್ನು ಪೀಡಿಸಿದೆನಲ್ಲದೆ ಬಾಯಿಗೆ ಬಂದ ಹಾಗೆ ಬೈದಿರುವೆನು. ನನ್ನ ಎಲ್ಲ ತಪ್ಪುಗಳನ್ನು ಮನಸ್ಸಿನಲ್ಲಿ ಹಿಡಿಯದೆ ಕ್ಷಮಿಸುವವಳಾಗು. ಪುಣ್ಯವಂತಳಾದ ನೀನು ನನಗೆ ಸೊಸೆಯಾದ್ದರಿಂದಲೇ ಈ ಕಣ್ಣುಗಳಿಂದ ಭಗವಂತನನ್ನು ನೋಡಿ ಧನ್ಯಳಾದೆನು. ನನ್ನ ಜನ್ಮವು ಸಾರ್ಥಕವಾಯಿತು, ಎಂದು ದೈನ್ಯದಿಂದ ಹೇಳಿಕೊಂಡಳು.

ಆಗ ಹಾವಕ್ಕನು:—ಅತ್ತೆಯವರೇ, ನಿಮ್ಮನ್ನು ಹೆತ್ತತಾಯಿ ಎಂತಲೂ, ಪಾರ್ವತೀದೇವಿಗೆ ಸಮಾನರೆಂತಲೂ ತಿಳಿದಿರುವೆನು. ಅಂದಮೇಲೆ ನಿಮ್ಮ ತಪ್ಪುಗಳನ್ನು ಕ್ಷಮಿಸಲಿಕ್ಕೆ ನಾನೆಷ್ಟರವಳು? ಎಂದು ಅತ್ತೆಗೂ, ಗಂಡನಿಗೂ ನಮಸ್ಕಾರಮಾಡಿದಳು.

ಹಾವಪ್ಪನಂತೂ ಹಾವಕ್ಕನ ಭಗವದ್ಭಕ್ತಿಯನ್ನು ಪ್ರತ್ಯಕ್ಷನೋಡಿದವನಾದ್ದರಿಂದ ಮೈಯೊಳಗೆ ನಡುಗು ಬಂದಂತಾಗಿ:—ಪ್ರಿಯೇ, ಇದುವರೆಗೂ ಪರಮಪತಿವ್ರತೆಯಾದ ನಿನ್ನ ಮೇಲೆ ವ್ಯರ್ಥವಾಗಿ ವಿರೋಧಮಾಡಿದೆನು. ನಿನ್ನಂಥ ಪುಣ್ಯಶಾಲಿನಿಯನ್ನು ಕೈಹಿಡಿದಿದ್ದರಿಂದ ನನ್ನ ಜನ್ಮವು ಪವಿತ್ರವಾಯಿತು, ಎಂದು ಅನ್ನುತ್ತ ಜ್ಞಾನರೂಪನಾಗಿರುವ ಆ ಶಿಶುವನ್ನೆತ್ತಿಕೊಂಡು:—ಭಾನುಕೋಟಿ ಪ್ರಕಾಶನಾದ ಪರಮಾತ್ಮಾ, ಭಕ್ತರ ಮೇಲೆ ನಿನ್ನ ಅಂತಃಕರಣವೆಷ್ಟು? ಅದು ಕಾರಣದಿಂದಲೇ ನಿನಗೆ

ದಯಾಸಮುದ್ರನೆಂದು ವೇದಗಳು ಹೇಳುತ್ತಿರುವವು, ಎಂದು ಕೊಂಡಾಡುತ್ತ ಆನಂದಾಶ್ರುಗಳು ಉದುರುತ್ತಿರಲು ಪುನಃ ಪುನಃ ಮುದ್ದಿಸುತ್ತಿದ್ದನು.

ನೋಡಿರಿ! ಶಂಕರನ ಕೃಪೆಯಾಯಿತೆಂದರೆ ಎಂಥ ಸಂಕಟಗಳಾದರೂ ಕ್ಷಣಕಾಲದಲ್ಲಿಯೇ ನಾಶವಾಗುವವೆಂಬ ಮಾತು ಸುಳ್ಳಲ್ಲ! ಅದರಂತೆ ಎಷ್ಟೋ ದಿನಗಳ ವರೆಗೂ ಕಂಡರೆ ಕೆಂಡವನ್ನೇ ಕಾರುತ್ತಿರುವ ಹಾವಕ್ಕನ ಗಂಡನೂ, ಅತ್ತೆಯೂ ಒಂದೇ ದಿವಸದಲ್ಲಿ ಹಣ್ಣಾಗಿ ತಮ್ಮ ವೈರಭಾವವನ್ನು ಬಿಟ್ಟು ಅತಿ ಪ್ರೀತಿಯುಳ್ಳವರಾಗಿ ಹೋದರು.

ಇತ್ತ ಊರೊಳಗಿನ ಜನರೆಲ್ಲರೂ:—ಹಾವಕ್ಕನು ಗರ್ಭಧರಿಸದೇ ಶಿವಾನುಗ್ರಹದಿಂದ ಮಗನನ್ನು ಪಡೆದಳೆಂಬ ಸುದ್ದಿಯನ್ನು ಕೇಳಿ ಅಲ್ಲಿಗೆ ಬಂದು ಪ್ರಕಾಶಮಾನವಾದ ಆ ಶಿಶುವನ್ನು ನೋಡಿ, ಆಶ್ಚರ್ಯಭರಿತರಾಗಿ:—ಇದು ನಿಶ್ಚಯವಾಗಿ ಮನುಷ್ಯ ಕೂಸಲ್ಲ; ಸಾಕ್ಷಾತ್ ಪರಬ್ರಹ್ಮನೇ ಹಾವಕ್ಕನ ಭಕ್ತಿಗೆ ಮೆಚ್ಚಿ ಅವತರಿಸಿರುವನು. ನಾವು ತಿಳಿಯದೇ ಈ ಮಹಾತ್ಮಳಿಗೆ ಹುಚ್ಚಳೆಂದು ಅನ್ನುತ್ತಿದ್ದೆವು. ಅಹಾ! ಈಕೆಯು ಎಂಥ ಪುಣ್ಯಶಾಲಿನಿಯು!! ಎಂದು ಕೊಂಡಾಡುತ್ತ ಮನೆಗೆ ಹೋಗುತ್ತಿದ್ದರು. ಆ ದಿವಸ ಊರೊಳಗೆ ಎಲ್ಲಿ ನೋಡಿದರೂ ಹಾವಕ್ಕನು ಎಷ್ಟು ದೈವಶಾಲಿನಿ! ಎಂಬ ಸುದ್ದಿಯೇ ಹೊರತು ಮತ್ತೊಂದು ವಿಷಯವು ಯಾರ ಬಾಯೊಳಗೂ ಹೊರಡುತ್ತಿದ್ದಿಲ್ಲ ಇದಕ್ಕೇ ಅಲ್ಲವೇ ಸುದಿನ ಅಥವಾ ಆನಂದದ ದಿವಸವೆನ್ನುವರು?

ಇಂಥ ಆನಂದದ ಹತ್ತು ದಿವಸಗಳು ಪೂರ್ಣವಾಗಿ ಹನ್ನೊಂದನೆಯ ದಿವಸ ಪ್ರಾಪ್ತವಾಗಲು, ಹಾವಪ್ಪನು ಪದ್ಧತಿಯಂತೆ ಕುಲಾಚಾರ್ಯರನ್ನು ಕರೆಯಿಸಿ ಜಾತಕರ್ಮವನ್ನು ನೆರವೇರಿಸಿ, ಹನ್ನೆರಡನೇ ದಿವಸದಲ್ಲಿ ಆ ಕೂಸನ್ನು ತೊಟ್ಟಿಲಲ್ಲಿ ಹಾಕಿಸಿ ಮೌನಲಿಂಗನ ಅವತಾರವೇ ಆ ಶಿಶುವಾದ ಕಾರಣ ಅದಕ್ಕೆ ಸುಮಂಗಲೆಯರಿಂದ ಮೌನೇಶ್ವರನೆಂಬ ನಾಮಕರಣವನ್ನು ಮಾಡಿಸಿದನು. ಅನಂತರ ಎಲ್ಲ ಸುಮಂಗಲೆಯರೂ ಜೋಗುಳವನ್ನು ಹಾಡಿ, ಹಾವಕ್ಕನಿಂದ ಕೊಡಲ್ಪಟ್ಟ ಬಾಗಿಣಗಳನ್ನು ತೆಗೆದುಕೊಂಡು, ಅತ್ಯಂತ ಉತ್ಸವದಿಂದ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಇತ್ತ ಮೌನೇಶ್ವರನು ಶುಕ್ಲ ಪಕ್ಷದ ಚಂದ್ರನ ಹಾಗೆ ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದುತ್ತ ಬಾಲಲೀಲೆಗಳಿಂದಲೂ, ಆಟ-ನೋಟಗಳಿಂದಲೂ ತಂದೆ-ತಾಯಿಗಳನ್ನು ಸಂತೋಷಸಾಗರದಲ್ಲಿ ಮುಳುಗಿಸುತ್ತಿದ್ದನು. ಮುದುಕೆಯಂತೂ ಮೊಮ್ಮಗನನ್ನು ಅರಗಳಿಗೆಯಾದರೂ ಅಗಲಿರುತ್ತಿದ್ದಿಲ್ಲ ಮೌನೇಶ್ವರನು ಸ್ಥೂಲದೇಹದಲ್ಲಿ ನರರ ಕಾಂತಿಯಿಂದಲೂ, ಸೂಕ್ಷ್ಮದೇಹದಲ್ಲಿ ಸುರರ ತೇಜದಿಂದಲೂ, ಕಾರಣತನುವಿನಲ್ಲಿ ತಾನೇ ತಾನಾದ ಪರಮಾತ್ಮನ ಪ್ರಕಾಶದಿಂದಲೂ ಕಾಲಕರ್ಮಗಳಿಗೆ ದೂರನಾಗಿ ಬಾಲಲೀಲೆಯಿಂದ ಮೆರೆಯುತ್ತಿದ್ದನು; ಮತ್ತು ಪರಮ ಗುರುವಾದ ಮೌನೇಶನು ಮರಣಾಲಂಪಟರಂತೆ ನೆರಳೂ ನಾಭಿಯೂ ಇರದೆ, ಮೃತ್ಯುವಿಗೂ ಯಮನಿಗೂ ತಾನೇ ಕರ್ತನಾಗಿ ಜಗತ್ತಿನ ಸೂತ್ರಧಾರಕನೂ, ಸುರಾಸುರವಂದ್ಯನೂ, ನಂಬಿದ ಭಕ್ತರನ್ನು ಭವವೆಂಬ ಸಮುದ್ರದಿಂದ ದಾಟಿಸತಕ್ಕವನೂ, ಘನಮಹಿಮನೂ ಆಗಿ ಮೆರೆಯುತ್ತಿದ್ದನು. ಹೀಗಿರುವ ಜಗದ್ರಕ್ಷಕನಾದ ಭಗವಂತನನ್ನೇ ಮಗನನ್ನಾಗಿ ಪಡೆದು ಹಾವಕ್ಕನು ಸುಖದಿಂದಿದ್ದಳೆಂಬಲ್ಲಿಗೆ ಮೊದಲನೆಯ ಅಧ್ಯಾಯ ಸಂಪೂರ್ಣ.

---

ಶ್ರೀ ಮೌನಗುರು ಪರಬ್ರಹ್ಮಣೇ ನಮಃ||

ಶ್ರೀ ಗಣೇಶಾಯ ನಮಃ||

# ಎರಡನೆಯ ಅಧ್ಯಾಯ



–ಉಪನಯನ ಮತ್ತು ಅಧ್ಯಯನ–

ಪರಶಿವಸ್ವರೂಪನಾದ ಮೌನೇಶ್ವರನು ಚಿತ್ರ-ವಿಚಿತ್ರವಾದ ತನ್ನ ಬಾಲಲೀಲೆಗಳನ್ನು ಗೋನಾಲದಲ್ಲಿ ತೋರಿಸುತ್ತ ಸರ್ವರನ್ನು ಆಶ್ಚರ್ಯಗೊಳಿಸುತ್ತಿದ್ದನು. ಹೀಗೆ ಕೆಲವು ಕಾಲ ಕಳೆಯಲು, ಮೌನೇಶನಿಗೆ ಏಳು ವರುಷಗಳು ಪೂರ್ಣವಾಗಿ, ಎಂಟನೇ ವರುಷವು ಪ್ರಾಪ್ತವಾಯಿತು. ಆಗ

ಹಾವಪ್ಪನು:—'ಗರ್ಭಾಷ್ಟಮೇ ಬ್ರಾಹ್ಮಣೋರುಪನಯನಂ' ಎಂಬ ವೇದ ವಾಕ್ಯದಂತೆ ಈ ಎಂಟನೇ ವರುಷದಲ್ಲಿಯೇ ತನ್ನ ಮಗನ ಉಪನಯನ ಮಾಡಿಸಿ ಲೋಕಾಚಾರದಂತೆ ಗುರುಕುಲವಾಸಿಯನ್ನಾಗಿ ಮಾಡಬೇಕೆಂದು ಆಲೋಚಿಸಿ ಸರ್ವ ಸಿದ್ಧತೆಯನ್ನು ಮಾಡಿದನು; ಮತ್ತು ಜ್ಯೋತಿಷ್ಕರಿಂದ ಶುಭ ಮುಹೂರ್ತವನ್ನು ತೆಗೆಯಿಸಿ, ಆ ಮುಹೂರ್ತಕ್ಕೆ ಸರಿಯಾಗಿ ವೈದಿಕ ವಿಶ್ವಬ್ರಾಹ್ಮಣರನ್ನೂ, ತನ್ನ ಆಪ್ತೇಷ್ಟರನ್ನೂ ಉತ್ಸಾಹದಿಂದ ಕರೆಯಿಸಿದನು. ಹಾವಪ್ಪನ ಬಿನ್ನಹದಂತೆ ಶ್ರೀ ಗುರುಗಳವರ ಸವಾರಿಯೂ ದಯ ಮಾಡಿಸಿತು. ಶ್ರೀಗಳವರು ಎಲ್ಲ ಸಾಹಿತ್ಯವನ್ನು ತರಿಸಿಕೊಂಡು ಪಂಚ ಕಲಶಗಳನ್ನು ಸ್ಥಾಪಿಸಿ ವಿಧ್ಯುಕ್ತಪ್ರಕಾರ ಪುಣ್ಯಾಹವಾಚನವನ್ನು ಮುಗಿಸಿದರು. ಆ ಕ್ಷಣವೇ ಮೌನೇಶನಿಗೆ ಸುಮಂಗಲೆಯರಿಂದ ಮಂಗಲಸ್ನಾನ ಮಾಡಿಸಿ ಆರತಿಯನ್ನೆತ್ತಿ ಆಚಾರ್ಯರೆದುರಾಗಿ ತಂದು ಕೂಡ್ರಿಸಿದರು. ಗುರುಗಳು ಎಲ್ಲ ವಿಧಿಗಳು ಮುಗಿದ ಮೇಲೆ ಮೌನೇಶನ ಕಂಠದಲ್ಲಿ ಯಜ್ಞೋಪವೀತವನ್ನು ಹಾಕಿ, ಬಲಗಿವಿಯಲ್ಲಿ ಮಂತ್ರೋಪದೇಶವನ್ನು ಮಾಡಿದರು.

ಸಾಕ್ಷಾತ್ ವಿಶ್ವಕರ್ಮ ಪರಬ್ರಹ್ಮನೇ ನರರೂಪಾಗಿ ಬಂದಿರುವ ನಮ್ಮ ಮೌನೇಶನು ಮಾನವರ ಮಂತ್ರೋಪದೇಶಕ್ಕೆ ಮರುಳಾಗುವನೆ? ಅವನು ಬಲಗಿವಿಯಲ್ಲಿ ಮಂತ್ರವನ್ನು ಹೇಳುವಾಗ ಎಲ್ಲರಿಗೂ ಕೇಳುವ ಹಾಗೆ ಗಹಗಹಿಸಿ ನಕ್ಕುಬಿಟ್ಟನು ಅದನ್ನು ನೋಡಿದ ಶ್ರೀಗಳವರಿಗೆ ಸಿಟ್ಟು ಬಂದು:–'ಇವನನ್ನು ಪ್ರಾಯಶ್ಚಿತ್ತ ವಿಧಿಯಲ್ಲಿ ಚನ್ನಾಗಿ ಶಿಕ್ಷಿಸಬೇಕು' ಎಂದು ಮನಸ್ಸಿನಲ್ಲಿ ಯೋಚಿಸಿ, ಮೊದಲೇ ತರಿಸಿ ಇಟ್ಟಿದ್ದ ಉತ್ತರಾಣೆಯ ಕಡ್ಡಿಗಳಿಗೆ ಚನ್ನಾಗಿ ಅರಳೆಯನ್ನು ಸುತ್ತಿ ತುಪ್ಪದಲ್ಲಿ ಎದ್ದಿ ಉರಿಯನ್ನು ಹಚ್ಚಿ: ಎಲೋ ಮೌನೇಶಾ, ನಾಲಿಗೆಯನ್ನು ಹೊರಗೆ ಚಾಚು, ಎಂದು ಹೇಳಲು, ಮೌನೇಶನು ಗುರುಗಳ ಕೃತಕತನವನ್ನು ಮನಸ್ಸಿನಲ್ಲಿ ತಿಳಿದು ಕೊಂಡಿದ್ದರೂ ನಸುನಗುತ್ತ ನಾಲಿಗೆಯನ್ನು ಚಾಚಿದನು.

ಪಾಪ! ಗುರುಗಳಾದರೂ ಮೌನೇಶನು ಅವತಾರಿಕ ಪುರುಷನೆಂಬುವದನ್ನು ಏನು ಬಲ್ಲರು? ಧಗಳಾಗಿ ಉರಿಯುತ್ತಿರುವ ಆ ಕಡ್ಡಿಗಳನ್ನು ಮೌನೇಶನ ನಾಲಿಗೆಯ ಮೇಲೆ ಇಟ್ಟೇಬಿಟ್ಟರು. ಕೇಳುವದೇನು? ಆ ಕ್ಷಣವೇ ಗುರು

ಗಳ ದೇಹಕ್ಕೆ ಉರಿಯನ್ನೇ ಹಚ್ಚಿದ ಹಾಗಾಯಿತು. ಅದನ್ನು ತಾಳಲಾರದೆ ಅವರು ಭೂಮಿಯ ಮೇಲೆ ಬಿದ್ದು ಉರುಳಾಡಲಿಕ್ಕೆ ಹತ್ತಿದರು.

ಅಕಸ್ಮಾತ್ತಾಗಿ ಒದಗಿದ ಈ ದುಃಸ್ಥಿತಿಯನ್ನು ನೋಡಿ, ನೆರೆದವರೆಲ್ಲರೂ ಗಾಬರಿಯಾಗಿ ಹೋದರು. ಇದರ ಅಂತರಂಗವು ಯಾರಿಗೂ ತಿಳಿಯು ದಾಯಿತು. ಯಾವ ಶೈತ್ಯೋಪಚಾರಗಳಿಂದಲೂ ಅವರಿಗೆ ಸಮಾಧಾನವಾಗ ಲಿಲ್ಲ. ಆಗ ಮೌನೇಶನ ಉಪನಯನದ ಮುಂದಿನ ಕಾರ್ಯವು ಕಟ್ಟಾಗಿ ಹೋಗಿ, ಗುರುಗಳಿಗೆ ವೈದ್ಯೋಪಚಾರವು ಪ್ರಾರಂಭವಾಯಿತು. ಯಾವ ಔಷಧಿಯಿಂದಲೂ ಉರಿಯು ಶಾಂತವಾಗದೆ ಮತ್ತಷ್ಟು ಹೆಚ್ಚಾಗುತ್ತಲೇ ಇತ್ತು. ಮಾಂತ್ರಿಕರಂತು ಮಂತ್ರಿಸಿ ಮಂತ್ರಿಸಿ ಗುಣಕಾಣದೆ ಚಿಂತೆಯಲ್ಲಿ ಮುಳುಗಿದರು. ಆಗ ಗುರುಗಳು:-ಹರ ಹರಾ, ಈ ಉರಿಯನ್ನು ತಾಳಲಾರೆ; ಒಮ್ಮೆಲೆ ಮರಣಪ್ರಾಪ್ತಿಯಾದರೆ ಲೇಸಾಗಿದೆ, ಎಂದು ಒಂದೇಸ ನೆ ಕಣ್ಣೀರು ಸುರಿಸುತ್ತ 'ತಣ್ಣೀರನ್ನಾದರೂ ತಂದು ನನ್ನ ಮೇಲೆ ಸುರುವಿರಿ' ಎಂದು ಗಟ್ಟಿಗಟ್ಟಿಯಾಗಿ ಶಂಖಗೈಯಹತ್ತಿದರು. ಗುರುಗಳ ಈ ಸಂಕಟ ವನ್ನು ನೋಡಿ, ಶಿಷ್ಯರು ಮೇಲಿಂದ ಮೇಲೆ ನೀರಿನ ಕೊಡಗಳನ್ನು ತಂದು ಸುರುವಲಿಕ್ಕೆ ಹತ್ತಿದರು.

ಹೀಗೆ ಹೊತ್ತು ಮುಳುಗಿ ಕತ್ತಲಾಗುವ ವರೆಗೂ ನೀರನ್ನು ಹೊತ್ತು ಬೇಸತ್ತು ಹೋದರು. ಆದರೂ ಗುರುಗಳ ಶರೀರದ ಉರಿಯು ಸ್ವಲ್ಪಾದರೂ ಕಡಿಮೆಯಾಗಲಿಲ್ಲ. ಒದರಿ ಒದರಿ ಅವರ ಧ್ವನಿಯು ಕುಗ್ಗಿಹೋಯಿತು ಮಾತಾಡಿಸಿದರೆ ಕೈಸನ್ನೆ ಮಾಡಲಿಕ್ಕೆ ಹತ್ತಿದರು. ಆಗಂತೂ ಅಲ್ಲಿರುವ ಎಲ್ಲ ಜನರು ಚಿಂತೆಗೊಳಗಾಗಿ:—'ಇನ್ನುಮಾತ್ರ ಗುರುಗಳು ನಿಶ್ಚಯವಾಗಿ ಬದುಕುವದಿಲ್ಲ. ಇವರ ಆಯುಷ್ಯವು ಮುಗಿದದ್ದರಿಂದಲೇ ನಮ್ಮ ಪ್ರಯತ ಗಳೆಲ್ಲ ನಿಷ್ಫಲವಾಗಿ ಹೋದವು' ಎಂದು ಅನ್ನಲಿಕ್ಕೆ ಹತ್ತಿದರು.

ಇದೆಲ್ಲವನ್ನು ನೋಡಿ ತ್ರಾಣವಿಲ್ಲದ ಒಬ್ಬ ಮುಯಬ್ರಾಹ್ಮಣನು ನನ್ನ ದಷ್ಟು ಸೇವೆಯು ಗುರುಗಳಿಗೆ ಸಲ್ಲಲೆಂದು ಒಂದು ಸಣ್ಣ ಕೊಡವನ್ನು ತೆಗೆದು ಕೊಂಡು ನೀರು ತರಲಿಕ್ಕಾಗಿ ಹೊರಗೆ ಬರಲು, ಏನೂ ಕಾಣದಹಾಗೆ ಕತ್ತಲೆ ಗವಿಯಿತು. ಆಗ ಆತನು ಮುಂದಕ್ಕೆ ಹೋಗಲಾರದೆ:—ಮೌನಲಿಂಗಾ, ನೀನೇ ಗತಿ, ಎಂದು ಅನ್ನುತ್ತ ಮೌನೇಶ್ವರನಿಗೆ ಸ್ನಾನ ಮಾಡಿಸಿದ ನೀರು

ಒಂದು ಗುಂಡಿಯಲ್ಲಿ ನಿಂತಿರಲು, ಅದೇ ನೀರನ್ನು ತುಂಬಿಕೊಂಡು ಬಂದು ಗುರುಗಳ ಮೇಲೆ ಸುರುವಿದನು. ಕೂಡಲೆ ಗುರುಗಳ ದೇಹದಲ್ಲಿರುವ ಉರಿ ಶಾಂತವಾಯಿತು. ಪ್ರಜ್ಞೆ ಹುಟ್ಟಿ ಮೊದಲಿನಂತಾದರು ಆಗ ಗುರುಗಳು ಶಾಂತಚಿತ್ತರಾಗಿ ಎದ್ದು ಕುಳಿತು—ಕಡೆಗೆ ನೀರಿನ ಕೊಡವನ್ನು ತಂದವ ರಾರು? ಆ ನೀರು ಎಲ್ಲಿಯದು? ಬೇಗನೆ ಹೇಳಿರಿ, ಎಂದು ಕೇಳಿದರು.

ಆಗ ಆ ನೀರನ್ನು ತಂದ ಮಯ ಬ್ರಾಹ್ಮಣನು—'ಗುರುವರ್ಯರೇ! ನೀವು ಬಹುಪರಿಯಾಗಿ ಸಂಕಟದಿಂದ ಹೊರಳಾಡುವದನ್ನು ನೋಡಿ ನಾನು ನೀರಿನ ಕೊಡವನ್ನು ತೆಗೆದುಕೊಂಡು ಹೊರಗೆ ಬರಲು, ಬಹು ಕತ್ತಲೆ ಯಾಗಿತ್ತು. ಆಗ ನಾನು ಮುಂದಕ್ಕೆ ಹೋಗಲಾರದೆ ಮೌನೇಶನಿಗೆ ಸ್ನಾನ ಮಾಡಿಸಿ ಗುಂಡಿಯೊಳಗೆ ನಿಂತ ನೀರನ್ನೇ ತಂದು ನಿಮ್ಮಮೇಲೆ ಸುರುವಿದೆ. ಇದೊಂದು ನನ್ನ ಅಪರಾಧವಾಗಿದೆ, ಕ್ಷಮಿಸಿರಿ.' ಎಂದು ನಮಸ್ಕರಿಸಿದನು

ಗುರುಗಳು ಪರಮ ಸಂತೋಷದಿಂದ:—ಪುಣ್ಯಾತ್ಮಾ. ನೀನು ಪವಿತ್ರ ಮಯವಾದ ಆ ತೀರ್ಥವನ್ನು ತಂದು ನನ್ನ ಮೇಲೆ ಹಾಕಿದ್ದರಿಂದಲೇ ನಾನು ಉರಿಯಿಂದ ಮುಕ್ತನಾಗಿ ಬದುಕಿದೆನು. ಇಲ್ಲದಿದ್ದರೆ ನನಗೆ ಮರಣವೇ ಪ್ರಾಪ್ತಿಯಾಗುತ್ತಿತ್ತು. ಅಕಟಾ! ಗುರುವರ್ಗಕ್ಕೆಲ್ಲಾ ಪರಮ ಗುರುವಾದ ಮೌನೇಶನಲ್ಲಿ ದ್ರೋಹವನ್ನೆಣಿಸಿದೆನು. ಅದಕ್ಕಾಗಿಯೇ ನನಗೆ ತಕ್ಕ ಪ್ರಾಯಶ್ಚಿತ್ತವಾಯಿತು! ಎಂದು ದೈನ್ಯದಿಂದ ಮೌನೇಶನ ಪಾದಗಳಿಗೆ ನಮಸ್ಕರಿಸಿ:—'ಮಹಾತ್ಮಾ, ನಿಂನ ಅವತಾರ ಪುರುಷನೆಂದು ಅರಿಯದೆ ನಾನು ಮಾಡಿದ ಅಪರಾಧವನ್ನು ಕ್ಷಮಿಸು' ಎಂದು ಬೇಡಿಕೊಂಡರು

ಆಗ ಮೌನೇಶನು—'ಗುರುವರ್ಯಾ! ಶಾಂತಗುಣಭರಿತನೂ, ಪಕ್ಷಪಾತವಿಲ್ಲದವನೂ, ಶಿಷ್ಯರನ್ನು ದುರ್ಗುಣಗಳಿಂದ ದೂರ ಮಾಡತಕ್ಕ ವನೂ, ನಿರ್ಮಲಚಿತ್ತನೂ, ನಿಸ್ಪೃಹನೂ ಆಗಿ ಮೆರೆಯುವಾತನೇ ಸದ್ಗುರು ವೆನ್ನಿಸಿಕೊಳ್ಳುವನು. ಕಾಮಾದಿ ಅರಿಷಡ್ವರ್ಗಗಳು ಗುರುವರ್ಗದವರಿಗೆ ಇರಬಾರದು. ಇವುಗಳಿದ್ದವರು ಮಾತ್ರ ನಿಮ್ಮ ಹಾಗೆ ದುಃಖವನ್ನು ಅನು ಭವಿಸಬೇಕಾಗುವದು.' ಎಂದು ಹೇಳಲು, ಎಲ್ಲರೂ ಆಶ್ಚರ್ಯಭರಿತರಾಗಿ:— ಈತನು ಅವತಾರಿಕಪುರುಷನಲ್ಲದೆ, ಮನುಷ್ಯಮಾತ್ರನಲ್ಲ. ಮಹಿಮಾಪುರುಷ ನಾಗದಿದ್ದರೆ ಎಂಟೇ ವರುಷಗಳಲ್ಲಿ ಇಂಥ ವಾಕ್ಚಾತುರ್ಯವು ಹೇಗೆ

ಉಂಟಾಗಬೇಕು? ಎಂದು ಮೌನೇಶನ ಪಾದಗಳಿಗೆ ನಮಸ್ಕರಿಸಿ, ಕೃತಾರ್ಥ
ರಾದರು. ಅಂದಿನಿಂದ ಮೌನೇಶ್ವರನ ವಿಷಯವಾಗಿ ಎಲ್ಲರಿಗೂ ಪೂಜ್ಯ
ಬುದ್ಧಿಯು ಉಂಟಾಯಿತು.

ತಂದೆಯಾದ ಹಾವಪ್ಪನಂತೂ ಮಗನ ಮಹಿಮೆಯನ್ನು ನೋಡಿ
ಮನಸ್ಸಿನಲ್ಲಿಯೇ ಆನಂದಪಡುತ್ತಿದ್ದನು; ಮತ್ತು ಆತನು ತನ್ನ ಮಗನನ್ನು
ಸಾಲೆಗೆ ಕಳಿಸಿ ಚನ್ನಾಗಿ ವಿದ್ಯೆ ಕಲಿಸಿ ಬುದ್ಧಿಶಾಲಿಯನ್ನಾಗಿ ಮಾಡ
ಬೇಕೆಂದು ಆಲೋಚಿಸಿ, ಶುಭಮುಹೂರ್ತದಲ್ಲಿ ಸಾಲೆಗೆ ಕಳಿಸಿದನು. ವಿದ್ಯಾ
ಗುರುಗಳು ಹಲಗೆಯ ಮೇಲೆ ಮಳಲನ್ನು ಹರಡಿ ತಮ್ಮ ಕೈಬೆರಳಿನಿಂದ:-
'ಓಂ ನಮಃಶಿವಾಯ' ಎಂಬ ಬೀಜಾಕ್ಷರಗಳನ್ನು ಬರೆದುಕೊಟ್ಟು:-ತಮ್ಮಾ,
ಇವರಂತೆ ತೀಡು, ಎಂದು ಹೇಳಿದರು. ಸಕಲ ವಿದ್ಯೆಗಳ ಮೂಲಸ್ಥಾನವಾಗಿ
ರುವ ಮೌನೇಶನು ಎಲ್ಲ ಹುಡುಗರಂತೆ ಸುಮ್ಮನೆ ಹೇಗೆ ತೀಡುವನು? ಅವರ
ಮಾತಿಗೆ ನಗುತ್ತ:—ಗುರುಗಳೇ, ನೀವು ನನಗೆ ಬರೆದು ಕೊಟ್ಟಿರುವ ಈ
ಅಕ್ಷರಗಳ ಅರ್ಥವೇನು? ಮೊದಲೇ ಇವುಗಳನ್ನು ಬರೆದು ಕೊಡಲಿಕ್ಕೆ ಕಾರಣ
ವೇನು? ಎಲ್ಲ ಅಕ್ಷರಗಳಿಗಿಂತ ಮೊದಲು ಓಂ ಅನ್ನುವದನ್ನು ಏಕೆ ಬರೆದಿರು
ತ್ತೀರಿ? ಇದೆಲ್ಲವನ್ನು ದಯವಿಟ್ಟು ಹೇಳಿರಿ, ಎಂದನು.

ಈ ಮಾತಿಗೆ ಗುರುಗಳು:—ತಮ್ಮಾ, ಮೊದಲು ಎಲ್ಲ ಅಕ್ಷರಗಳನ್ನು
ಕಲಿಯದೆ ಅರ್ಥವನ್ನು ಕೇಳುವೆಯಲ್ಲ? ನಾವು ಹೇಳಿದರೆ ನಿನಗೆ ತಿಳಿಯುವ
ಬಗೆಯಾದರೂ ಹೇಗೆ? ಅದರ ಅರ್ಥವು ಬಹು ಗೂಢವಾದದ್ದು ಅದನ್ನು
ತಿಳಿಯಬೇಕಾದರೆ ಬಹು ದಿವಸ ಕಲಿಯಬೇಕು ಸದ್ಯಕ್ಕೆ ಬರುವದಲ್ಲ.
ಸುಮ್ಮನೆ ತೀಡು, ಎಂದು ಹೇಳಿದರು.

ಅದಕ್ಕೆ ಮೌನೇಶನು:—ಗುರುಗಳೇ, ಅರ್ಥವು ಗೊತ್ತಾಗದೆ ವ್ಯರ್ಥ
ವಾಗಿ ಅಕ್ಷರಗಳನ್ನು ಕಲಿತರೆ ಸಾರ್ಥಕವೇನು? ಇದು ಸತ್ಯವಾದ ಅರ್ಥ
ವನ್ನು ಹೇಳಿ ಕೃತಾರ್ಥನನ್ನಾಗ ಮಾಡಿರಿ, ಎಂದು ಅನ್ನಲು,

ಗುರುಗಳು ಆಶ್ಚರ್ಯಭರಿತರಾಗಿ:—'ಈತನು ಇಂದೇ ಸಾಲೆಗೆ ಬಂ-
ದಿರುವನು; ಮೇಲಾಗಿ ಸಣ್ಣ ಹುಡುಗನು. ಹೀಗಿದ್ದು ಎಂಥ ಪ್ರಶ್ನೆಯನ್ನು
ಮಾಡುವನಲ್ಲ! ಇದರ ಅರ್ಥವು ನನ್ನ ಕನಸು-ಮನಸುಗಳಲ್ಲಿಯೂ ಸಹ
ಗೊತ್ತಿರುವದಿಲ್ಲ. ಅಂದ ಮೇಲೆ ಈತನಿಗೆ ಯಾವ ಉತ್ತರವನ್ನು ಹೇಳಿ

ಸಮಾಧಾನಗೊಳಿಸಬೇಕು? ಇದೊಂದು ನನಗೆ ಮರ್ಯಾದೆಸುತ್ತು ಬಂದಿತು, ಎಂದು ಯೋಚಿಸಹತ್ತಿದರು. ಪಾಪ! ಅದರ ಗಂಧವನ್ನೇ ಅರಿಯದ ಆ ಗುರುಗಳು ಮಾಡುವದೇನು? ಹೇಗಾದರೂ ತಮ್ಮ ಮರ್ಯಾದೆ ಮುಚ್ಚಿಕೊಳ್ಳುವದಕ್ಕಾಗಿ:—ಮೌನಾ, ನೀನು ಇನ್ನೂ ಸಣ್ಣವನು. ಅದರ ಅರ್ಥವನ್ನು ಕೇಳುವ ಯೋಗ್ಯತೆಯು ನಿನ್ನದಲ್ಲ. ಸುಮ್ಮನೇ ನಾವು ಬರೆದು ಕೊಟ್ಟದ್ದನ್ನು ತೀಡು ಹೋಗು; ಎಂದು ಗಂಟುಮೋರೆಯನ್ನು ಹಾಕಿ ಹೇಳಿದರು.

ಮೌನೇಶನು:—ಗುರುಗಳೇ, ಅಕ್ಷರಗಳ ನಿಜವಾದ ಅರ್ಥವನ್ನು ತಿಳಿಯಲಿಕ್ಕೆ ಸಣ್ಣವರೇನು, ದೊಡ್ಡವರೇನು? ಅದಕ್ಕಾಗಿ ದೇಹವು ಮುಪ್ಪಾಗುವವರೆಗೂ ಓದಬೇಕೇ ಹೇಗೆ? ಮುಂದೆ ಹೇಳುವವನ್ನು ದಯಮಾಡಿ ಇಂದೇ ಹೇಳಿಬಿಡಿರಿ, ಎಂದನು.

ಗುರುಗಳು ಸಿಟ್ಟಿನಿಂದ:—ಅಧಿಕಪ್ರಸಂಗ ಮಾಡಬೇಡ. ಸುಮ್ಮನೆ ನಾವು ಬರೆದು ಕೊಟ್ಟದ್ದನ್ನು ತೀಡಬಾರದೇ? ಎಂದು ಬೆತ್ತವನ್ನು ಮೇಲಕ್ಕೆತ್ತಿ ಹೊಡೆಯಲಿಕ್ಕೆ ಹೋದರು.

ಅದನ್ನು ಕಂಡು ಜಗದ್ಗುರುವಾದ ಮೌನೇಶನು ಮುಗುಳ್ನಗೆಯಿಂದ:— ಗುರುಗಳೇ, ವಿದ್ಯಾರ್ಥಿಗಳು ತಮಗೆ ತಿಳಿಯದಿರುವ ವಿಷಯವನ್ನು ಗುರುಗಳಿಂದ ಕೇಳಿ ತಿಳಿದುಕೊಳ್ಳುವದು ಸ್ವಾಭಾವಿಕವಾಗಿದೆ. ಹೀಗಿದ್ದು ನಾನು ಕೇಳುವ ಮಾತಿಗೆ ಇಷ್ಟೇಕೆ ಸಿಟ್ಟಾಗುವಿರಿ? ನನ್ನ ವೆರಡು ಮಾತುಗಳನ್ನು ಲಕ್ಷ್ಯಗೊಟ್ಟು ಕೇಳಿರಿ:—

||ಶ್ಲೋಕ|| ನಿರಾಕಾರಂ ನಿರಾಲಂಬಂ ಸರ್ವಶೂನ್ಯಮಗೋಚರಂ |
ನಿಶ್ಯಬ್ದಮಸ್ಪೃಶಂ ರೂಪಂ ರಸಗಂಧ ವಿವರ್ಜಿತಂ ||

ಅಂದರೆ ಪರಾತ್ಪರನಾದ ವಿಶ್ವಕರ್ಮ ಪರಬ್ರಹ್ಮನು ಪ್ರಥಮದಲ್ಲಿ ಆಕಾರರಹಿತನಾಗಿಯೂ, ಆಶ್ರಯವಿಲ್ಲದವನಾಗಿಯೂ, ಸರ್ವಶೂನ್ಯನಾಗಿಯೂ, ಅಗೋಚರನಾಗಿಯೂ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳಿಂದ ವರ್ಜಿತನಾಗಿಯೂ ತಾನೇ ತಾನಾಗಿ ನಿರ್ಗುಣಸ್ವರೂಪದಿಂದ ಬೆಳಗುತ್ತಿದ್ದನು; ಮತ್ತು

||ಶ್ಲೋಕ|| 'ಶಿವಶಕ್ತ್ಯಾಚಸಂಯುಕ್ತ ವಿಶ್ವಕರ್ಮತದಾಬ್ರುವೀತ್|
ಜಾತಂಚ ಬೀಜಮೋಂಕಾರಂ ಬ್ರಹ್ಮಾಂಡಮಜನೀಧೃತಂ'||

ಅಂಥ ನಿರ್ಗುಣ ಪರಬ್ರಹ್ಮವೇ ಶಿವನಾಗಿ ಶಕ್ತಿಯಿಂದ ಕೂಡಿ, ಸಗುಣ ವಿಶ್ವಕರ್ಮನಾಗಿ ಸಾವಿರ ಶಿರಸ್ಸುಗಳಿಂದ ನಿಂತು:—'ಓಂ' ಎನ್ನುವ ಮೂಲ ಮಂತ್ರವನ್ನು ನುಡಿದನು. ಆ ಮಂತ್ರವೇ ಸ್ಥಾವರ ಜಂಗಮಾತ್ಮಕ ವಾದ ಈ ವಿಶ್ವಕ್ಕೆ ಬೀಜವಾಯಿತು. ಆ ಮೂಲ ಮಂತ್ರದಿಂದಲೇ ಪಿಂಡಜ, ಅಂಡಜ, ಸ್ವೇದಜ, ಉದ್ಭಿಜ ಮುಂತಾದ ಬ್ರಹ್ಮಾಂಡವೇ ಹುಟ್ಟಿತು; ಆದ್ದರಿಂದ ವಿಶ್ವಕರ್ಮ ಮುಖೋದ್ಭೂತವಾದ ಆ ಮಂತ್ರವೇ ವಿಶ್ವಕ್ಕೆ ಬೀಜ ವಾಯಿತು; ಮತ್ತು

''ಪ್ರಣವಃಸದ್ಗುರುಃ ಪ್ರೋಕ್ತಃ ಪ್ರಣವಃ ಪಂಚಮೂರ್ತಯಃ ||
ಪ್ರಣವೋಹಿ ಪರಬ್ರಹ್ಮಾ ಶ್ರುತ್ಯರ್ಥಃ ಪ್ರಣವೋಭವೇತ್ ||"

ಆ ಓಂಕಾರ ಪ್ರಣವವೇ ಸದ್ಗುರು ಸ್ವರೂಪವೂ, ಪಂಚಮೂರ್ತಿಗಳ ಸ್ವರೂಪವೂ, ಪರಬ್ರಹ್ಮ ಸ್ವರೂಪವೂ, ವೇದಗಳಲ್ಲಿ ಹೇಳುವ ಪರಮಾತ್ಮವೂ, ಜ್ಯೋತಿಃಸ್ವರೂಪವೂ, ಮೋಕ್ಷಕ್ಕೆ ಸಾಧನವೂ ಆಗಿರುವದು. ಈ ಓಂಕಾರದಲ್ಲಿಯೇ ಅಕಾರ, ಉಕಾರ, ಮಕಾರಗಳೆಂಬ ಮೂರು ಅಕ್ಷರಗಳು ಹುಟ್ಟಿದವು. ಅವುಗಳಲ್ಲಿ ಅಕಾರವೇ ಬ್ರಹ್ಮ ಸ್ವರೂಪವೂ, ಉಕಾರವೇ ವಿಷ್ಣು ಸ್ವರೂಪವೂ, ಮಕಾರವೇ ರುದ್ರಸ್ವರೂಪವೂ ಆಗಿರುವವು; ಮತ್ತು ಆ ಓಂಕಾರಕ್ಕೆ ಐದು ಕಲೆಗಳಿರುತ್ತವೆ. ''ನಮಃಶಿವಾಯ" ಎಂಬುವದೇ ಬಿಂದು, ಪಂಚಬ್ರಹ್ಮರೇ ನಾದವು. ಇವಲ್ಲದೆ ಆ ಶ್ರೇಷ್ಠವಾದ 'ಓಂ' ಎನ್ನುವ ಪ್ರಣವವೇ ಕಲೆಗಳಾಗಿಯೂ, ನಾದವಾಗಿಯೂ ಬಿಂದುವಾಗಿಯೂ, ಸಗುಣವಿಶ್ವಕರ್ಮನಾಗಿಯೂ ಹೀಗೆ ನಾಲ್ಕು ಪ್ರಕಾರವಾಗಿರುತ್ತದೆ. ಈ ನಿಖಿಲ ಬ್ರಹ್ಮಾಂಡ ಶ್ರುತಿ, ಸ್ಮೃತಿ. ಕದಂಬ, ನಿರ್ಮಾಣ ಬೀಜಾಯಮಾನ ವಾಗಿಯೂ, ವೇದ-ವೇದಾಂತ ಸಿದ್ಧಾಂತ ತತ್ವ ನಿರ್ಧಾರಣೀಯವಾದ ದ್ದಾಗಿಯೂ ಇರುವ ಆ ಬೀಜಮಂತ್ರವನ್ನೇ ಸಕಲರೂ ಜಪಿಸಿ ಕೃತಾರ್ಥ ರಾಗಲೆಂದು ಪ್ರಥಮದಲ್ಲಿ 'ಓಂ ನಮಃ ಶಿವಾಯ' ಎಂಬ ಪವಿತ್ರವಾದ ಈ ಬೀಜಾಕ್ಷರಗಳನ್ನು ಬರೆದುಕೊಡುತ್ತಿರುವರು. ತಿಳಿಯಿತೇ ಅಯ್ಯನವರೇ? ಎಂದು ಹೇಳಿದನು

ಇದೆಲ್ಲವನ್ನು ಕೇಳಿದ ಗುರುಗಳು ಬೆರಗಾಗಿ:—ಮೌನೇಶಾ, ನೀನು ಸಾಮಾನ್ಯನಲ್ಲ. ಶ್ರೀ ವಿಶ್ವಬ್ರಹ್ಮನ ಅವತಾರವೇ ನೀನಾಗಿರುವೆ ಅಜ್ಞಾನ

ದಿಂದ ನಾನು ಮಾಡಿದ ಅಪರಾಧಗಳನ್ನು ಕ್ಷಮಿಸು. ಸರ್ವಜ್ಞನಾದ ನಿನಗೆ ಹೇಳುವ ಯೋಗ್ಯತೆಯು ನನ್ನದಲ್ಲ. ಲೋಕೋದ್ಧಾರಕ್ಕಾಗಿಯೇ ನೀನು ಅವತರಿಸಿರುವೆ' ಎಂದು ಸಾಷ್ಟಾಂಗ ನಮಸ್ಕಾರ ಮಾಡಿದರು.

ಆಗ ಮೌನೇಶನು:—ಗುರುಗಳೇ, ಎಲ್ಲ ವಿದ್ಯಾರ್ಥಿಗಳು ಗುರುಗಳು ಬರೆಮುಕೊಟ್ಟಿದ್ದನ್ನು ಸುಮ್ಮನೆ ತೀಡುತ್ತ ಬಂದದ್ದರಿಂದಲೇ ಗುರುವರ್ಗದವರಿಗೆ ಈ ಮಹಾಮಂತ್ರದ ಗುರ್ತೇ ತಪ್ಪಿಹೋಗಿದೆ. ಇನ್ನಾದರೂ ಈ ಪವಿತ್ರ ಮಂತ್ರದ ಅರ್ಥವನ್ನು ಲಕ್ಷದಲ್ಲಿಟ್ಟು ಧ್ಯಾನಿಸುತ್ತ ಮೋಕ್ಷವೆಂಬ ಸಂಪತ್ತನ್ನು ಸಂಪಾದಿಸಿಕೊಳ್ಳಿರಿ, ಎಂದು ಹೇಳುತ್ತ ಅಧ್ಯಯನವನ್ನು ಮುಗಿಸಿಕೊಂಡು ಮನೆಗೆ ಬಂದನು.

ಆಗ ಆತನ ತಾಯಿಯು:—ತಮ್ಮಾ, ಇಷ್ಟು ಬೇಗನೆ ಸಾಲೆಯನ್ನೇಕೆ ಬಿಟ್ಟುಬಂದೆ? ಊಟದ ವೇಳೆಯು ಆಗಿದೆಯೋ? ಅಯ್ಯನವರು ಎಲ್ಲ ಹುಡುಗರನ್ನೂ ಬಿಟ್ಟರೇ? ಎಂದು ಕೇಳಿದಳು.

ಆ ಮಾತಿಗೆ ಮೌನೇಶನು:—ಅವ್ವಾ, ಗುರುಗಳು ಹೇಳಿಕೊಟ್ಟ ಎಲ್ಲ ವಿದ್ಯೆಯನ್ನು ಕಲಿತ ಮೇಲೆ ಅಲ್ಲೇಕೆ ನಿಲ್ಲಬೇಕು? ಅವರು ಅಪ್ಪಣೆ ಕೊಟ್ಟ ಮೇಲೆಯೇ ಹೊರಟು ಬಂದೆನು.

ಹಾವಕ್ಕ:— ಇಷ್ಟು ಬೇಗನೇ ಅಪ್ಪಣೆಯನ್ನೇಕೆ ಕೊಟ್ಟರು?

ಮೌನೇಶ:—ಸಕಲ ವಿದ್ಯೆಯನ್ನು ಕಲಿತ ಮೇಲೆ ಕೊಡದೆ ಏನು ಮಾಡುವರು?

ಹಾವಕ್ಕ:—ತಮ್ಮಾ, ಈ ದಿನವೇ ಸಾಲೆಗೆ ಹೋದ ನೀನು ಎಲ್ಲ ವಿದ್ಯೆಯನ್ನು ಹೇಗೆ ಕಲಿತೆ? ನಿಜವಾದ ಸಂಗತಿಯನ್ನು ಹೇಳು.

ಮೌನೇಶ:—ಅವ್ವಾ, ನಿನ್ನ ಮುಂದೆ ಸುಳ್ಳನ್ನೇಕೆ ಹೇಳಲಿ? ನಿಜ ಸಂಗತಿಯನ್ನೇ ಹೇಳುವೆನು ಕೇಳು. ನಾನು ಸಾಲೆಗೆ ಹೋದ ಕೂಡಲೆ ಗುರುಗಳು ಹಲಗೆಯ ಮೇಲೆ 'ಓಂ ನಮಃಶಿವಾಯ' ಎಂಬ ಅಕ್ಷರಗಳನು ಬರೆದು ಕೊಟ್ಟು ಅವುಗಳನ್ನು ತೀಡು, ಎಂದು ಹೇಳಿದರು. ಆಗ ನಾನು ಅಕ್ಷರಗಳ ಅರ್ಥವೇನೆಂದು ಕೇಳಲು, ಅಗಕ್ಕೆ ಅಯ್ಯನವರು ತೊಂದರೆಗೊಳಗಾಗಿ ಹಿಂದೆ-ಮುಂದೆ ನೋಡಲಿಕ್ಕೆ ಹತ್ತಿದರು. ಹೀಗಾದ ಅವರ ಸ್ಥಿತಿಯನ್ನು ನೋಡಿ ಇವರಿಗೆ ಅದರ ವಿಷಯದ ಗಂಧವೇ ಇಲ್ಲವೆಂದು ತಿಳಿದು,

ನಾನು ಆ ಬೀಜಾಕ್ಷರಗಳ ಅರ್ಥವನ್ನು ಗುರುಗಳಿಗೆ ಚೆನ್ನಾಗಿ ತಿಳಿಸಿ ಹೇಳಿದೆನು. ಅದನ್ನು ಕೇಳಿದ ವಿದ್ಯಾಗುರುಗಳು ನನ್ನನ್ನು ಕುರಿತು:- ಮೌನೇಶಾ, ನಿನಗೆ ವಿದ್ಯೆ ಹೇಳುವ ಸಾಮರ್ಥ್ಯವು ನಮ್ಮಲ್ಲಿಲ್ಲವೆಂದು ಮನೆಗೆ ಹೋಗಲಿಕ್ಕೆ ನನಗೆ ಅಪ್ಪಣೆ ಕೊಟ್ಟರು. ಆದ್ದರಿಂದಲೇ ನಾನು ಎಲ್ಲ ಹುಡುಗರಿಗಿಂತ ಮುಂಚಿತವಾಗಿ ಮನೆಗೆ ಬಂದೆನು.

ಹೀಗೆ ಹೇಳುವ ಮಗನ ಮಾತಿಗೆ ತಂದೆ-ತಾಯಿಗಳು ನಗುತ್ತ:— ಮೌನೇಶಾ, ಸರ್ವ ವಿದ್ಯೆಗಳ ಕರ್ತನಾದ ನಿನಗೆ ಯಾವ ಗುರುಗಳಿಂದ ಹೇಳಲು ಸಾಧ್ಯವಾದೀತು? ಎಂದು ಕಪೋಲಗಳನ್ನು ಚುಂಬಿಸುತ್ತ ಆನಂದ ಹೊಂದಿದರೆಂಬಲ್ಲಿಗೆ ಎರಡನೇ ಅಧ್ಯಾಯ ಸಂಪೂರ್ಣ.

---

ಶ್ರೀ ಗುರು ಮೌನಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ಮೂರನೆಯ ಅಧ್ಯಾಯ



## --ರಾಜಪುತ್ರನಿಗೆ ಪ್ರಾಣದಾನ –

ಶ್ರೀ ಪರಮಾತ್ಮ ಸ್ವರೂಪನಾದ ಮೌನೇಶನು ನರರೂಪಿನಿಂದ ಮಹಿಮಾಪುರುಷನಾಗಿ ಇರುತ್ತಿರಲು, ಒಂದು ದಿನ ಸುರಪುರದ ರಾಜಪುತ್ರನು ತನ್ನ ಓರಿಗೆಯ ಗೆಳೆಯರ ಕೂಡ ಚೆಂಡಿನ ಆಟವನ್ನು ಆಡುತ್ತಿದ್ದನು. ಆ ಆಟದಲ್ಲಿ ಮೌನೇಶನೂ ಕೂಡಿದ್ದನು. ಒಂದು ಕಡೆಯ ಹುಡುಗರ ಗುಂಪಿನಲ್ಲಿ ರಾಜಪುತ್ರನೂ ಮತ್ತೊಂದು ಕಡೆಯ ಹುಡುಗರ ಗುಂಪಿನಲ್ಲಿ ಮೌನೇಶನೂ ಮುಖ್ಯಸ್ಥರಾಗಿದ್ದರು. ಅವರಲ್ಲಿ ಮೊದಲು ರಾಜಪುತ್ರನ ಕಡೆಯವರು ಹೊಡೆಯುವವರೂ, ಮೌನೇಶನ ಕಡೆಯವರು ಹಿಡಿಯುವವರೂ ಆಗಿದ್ದರು. ಲಗ್ಗೆಗಳನ್ನು ಹೂಡಿ ಪ್ರತಿಯೊಬ್ಬರೂ ಮೂರು ಮೂರು ಸರತಿಯಂತೆ ಗುರಿ ನೋಡಿ ಹೊಡೆಯುತ್ತಿದ್ದರು. ಮೌನೇಶನು ಆಟದಲ್ಲಿ ಬಹು ಜಗಳಗಂಟ

ನಾದ್ದರಿಂದ ಎಲ್ಲರೂ ಮೌನೇಶನನ್ನು ಹೊಡೆಯಬೇಕೆಂಬ ಆಲೋಚನೆ ಯಲ್ಲಿಯೇ ಇದ್ದರು. ರಾಜಪುತ್ರನಂತೂ ಈ ಸಾರೆ ಲಗ್ಗೆ ಬಿದ್ದಾಕ್ಷಣವೇ ಮೌನೇಶನನ್ನು ಒಳಿತಾಗಿ ಹೊಡೆಯಬೇಕೆಂದು ಆತುರವುಳ್ಳವನಾಗಿದ್ದನು. ಅಷ್ಟರಲ್ಲಿ ರಾಜಪುತ್ರನ ಇಷ್ಟದಂತೆ ಅವನ ಕಡೆಯವರು ಲಗ್ಗೆಯನ್ನು ಹೊಡೆದು ಕೆಡಹಲು, ಆ ಕ್ಷಣವೇ ಚಂಡನ್ನು ತೆಗೆದುಕೊಂಡು ರಾಜಕುವರನು ಮೌನೇಶನನ್ನು ಬೆನ್ನಟ್ಟಿದನು.

ಆಗ ಮಾಯಗಾರನಾದ ಮೌನೇಶನು ಲಗ್ಗೆಗಳನ್ನು ಹೂಡಿರಿ, ಹೂಡಿರಿ ಎಂದು ಕೂಗುತ್ತ ಓಡಿ ಹೋಗುವವನಂತೆ ನಟಿಸಿ ಒಮ್ಮೆ ಕಾಣಿಸಿ ಕೊಳ್ಳುತ್ತಲೂ, ಒಮ್ಮೆ ಮಾಯವಾಗುತ್ತಲೂ ರಾಜಪುತ್ರನಿಗೆ ದಿಕ್ಕು ತೋರ ದಂತೆ ಮಾಡಿ ತನ್ನವರು ಲಗ್ಗೆ ಹೂಡಿದನಂತರ ಅವನಿಗೆ ಎದುರಾಗಿ ನಿಂತು: ರಾಜಪುತ್ರಾ, ನಮ್ಮವರು ಲಗ್ಗೆಯನ್ನು ಹೂಡಿದ್ದಾರೆ, ಈಗ ನೀನು ಹೊಡೆ ಯುವದು ಯೋಗ್ಯವಲ್ಲವೆಂದು ಹೇಳಿದನು. ರಾಜಪುತ್ರನು ಮೌನೇಶನನ್ನು ಹೊಡೆಯಲೇಬೇಕೆಂಬ ಕಾಂಕ್ಷೆಯುಳ್ಳವನಾದ್ದರಿಂದ ಕೈಯೊಳಗಿನ ಚಂಡಿ ನಿಂದ ಹೊಡೆದೇ ಬಿಟ್ಟನು.

ಮೌನೇಶನು ಗದ್ದಲವನ್ನು ಮಾಡುತ್ತ ಲಗ್ಗೆಹೂಡಿದ ನಂತರ ಹೊಡೆ ದನೆಂದು ಸಿದ್ಧಮಾಡಿ ತನ್ನ ಆಟವನ್ನು ತೆಗೆದುಕೊಂಡನು. ತಮ್ಮ ಕಡೆ ಯವರು ಲಗ್ಗೆಯನ್ನು ಹೊಡೆಯುವದೊಂದೇ ತಡ ಕೂಡಲೆ ಮೌನೇಶನು ಚಂಡನ್ನು ತೆಗೆದುಕೊಂಡು, ಓಡಿಹೋಗುತ್ತಿರುವ ರಾಜಪುತ್ರನನ್ನು ಹೊಡೆ ದನು ಅದು ಆಯಕಟ್ಟಿನ ಸ್ಥಳಕ್ಕೆ ಬೀಳಲು, ರಾಜಪುತ್ರನು ಸತ್ತೇ ಬಿದ್ದನು!

ಆಗ ಹೇಳುವದೇನು! ಒಮ್ಮಿಂದೊಮ್ಮೆಲೆ ಆಡುವ ಹುಡಗರೂ, ನೋಡುವ ಜನರೂ ಸ್ತಬ್ಧರಾಗಿ ಹೋದರು. ಎಲ್ಲರ ಮುಖಗಳು ರಾಹು ಮುಸುಕಿದ ಚಂದ್ರಮಂಡಲದಂತಾದವು. ಸರ್ವರೂ ದೀರ್ಘಶ್ವಾಸವನ್ನು ಬಿಡಲಿಕ್ಕೆ ಹತ್ತಿದರು. ಹೀಗೆ ಎಲ್ಲಿಯವರೆಗಿರುವದು? ಎಲ್ಲರೂ ನೆಲಕ್ಕುರು ಳಿದ ರಾಜಪುತ್ರನ ಬಳಿಗೆ ಹೋಗಿ ನೋಡುತ್ತಾರೆ, ಶ್ವಾಸವೇ ಇದ್ದಿಲ್ಲ. ಅದನ್ನು ಕಂಡು ಬವಳಿ ಬಂದು ಬಿದ್ದಿರಬಹುದೆಂದು ಕೆಲವರು ನೀರನ್ನು ತಂದು ಸುರುವಿದರು; ಕೆಲವರು ಕೈಕಾಲುಗಳಿಗೆ ಬೂದಿಯನ್ನು ತಿಕ್ಕಿದರು.

ಕೆಲವರು ಕೊಳವೆಯಿಂದ ಕಿವಿಗಳಲ್ಲಿ ಊದಿದರು. ಯಾರು ಏನು ಮಾಡಿದರೂ ಸತ್ತು ಹೋದವನು ಬದಕುವದುಂಟೇ? ಅವರ ಪ್ರಯತ್ನಗಳೆಲ್ಲ ನಿಷ್ಫಲವಾಗಿ ಹೋದವು. ನೆರೆದವರೆಲ್ಲರೂ:—ಅರಸುಮಗನ ಆಯುಷ್ಯ ಮಾತ್ರ ಮುಗಿಯಿತು; ಇದರಿಂದ ಮುಂದೇನು ಅನರ್ಥ ಘಟಿಸುವದೋ? ಎಂದು ಹೌಹಾರಿ ಕುಳಿತರು. ಆತನು ಬಹು ಸುಂದರನು, ಶದ್ಗುಣವುಳ್ಳವನು, ಮೇಲಾಗಿ ರಾಜಕುವರನು. ಇದಲ್ಲದೆ ರಾಜಪತ್ನಿಯು ಹೊಟ್ಟೆಯಲ್ಲಿ ಇವನೊಬ್ಬನೇ ಮಗನು. ಇಂಥವನು ಚಂಡಿನ ಹೊಡೆತದಿಂದ ಮರಣ ಹೊಂದಿದ ಮೇಲೆ ಯಾರಿಗೆ ತಾನೆ ಭಯವಾಗಲಿಕ್ಕಿಲ್ಲ? ಮಹಾರಾಜನಿಂದ ನಮಗೆ ನಿಶ್ಚಯವಾಗಿ ಕಠಿಣ ಶಾಸನವಾಗುವದೆಂದು ಸರ್ವರೂ ಭಾವಿಸಿದರು

ಅವರಲ್ಲಿ ಕೆಲವರು:—ಕಮ್ಮಾರ ಮೌನನೇ ಈ ರಾಜಪುತ್ರನ ಮರಣಕ್ಕೆ ಕಾರಣನು. ಮೊದಲು ಅವನನ್ನು ಹಿಡಿಯಿರಿ; ಇಲ್ಲದಿದ್ದರೆ ನಮ್ಮ ತಲೆ ತಿಂದೀತು? ಎಂದು ಎಲ್ಲರೂ ಅವನನ್ನು ಹುಡುಕಲಿಕ್ಕೆ ಹತ್ತಿದರು. ಇನ್ನೆಲ್ಲಿಯ ಮೌನನು? ಎತ್ತಲೋ ಮಾಯವಾಗಿ ಹೋಗಿದ್ದನು. ಅಯ್ಯೋ! ಘಾತವಾಯಿತು, ನಮ್ಮ ಮೇಲೆ ನಿಶ್ಚಯವಾಗಿ ಪೇಚು ಬರುವದು, ಎಂಬ ದುಃಖೋದ್ಗಾರಗಳು ಎಲ್ಲರ ಮುಖದಿಂದಲೂ ಹೊರಬೀಳಹತ್ತಿದವು. ಒಂದು ವೇಳೆ ಮಹಾರಾಜನಿಗೆ ಈ ಸಂಗತಿಯು ತಿಳಿದರೂ ಆತನು:—ಬಾಲಕನಾದ ಮೌನೇಶನ ಚಂಡಿನ ಹೊಡತಕ್ಕೆ ನನ್ನ ಮಗನು ಸಾಯುವದುಂಟೇ? ನೆರೆದವರಾರಾದರೂ ವಿರೋಧಿಗಳೇ ಕೊಂದಿರಬಹುದೆಂದು ತರ್ಕಿಸಿ ನಮ್ಮನ್ನು ಬಂಧನಕ್ಕೆಲ್ಲಿ ಗುರಿಮಾಡುವನೋ ತಿಳಿಯದು. ಶಿವ ಶಿವ! ಎಂಥ ಅನ್ಯಾಯವು ಘಟಿಸಿತಲ್ಲ! ಎಂದು ಎಲ್ಲರೂ ಮಿಡುಕಲಿಕ್ಕೆ ಹತ್ತಿದರು. ಒಳ್ಳೇ ವಾರ್ತೆಗಿಂತಲೂ ಕೆಟ್ಟ ವಾರ್ತೆಯು ಬಹು ಬೇಗನೆ ಹಬ್ಬುವದೆಂಬ ಮಾತು ಸುಳ್ಳಲ್ಲ. ಅದರಂತೆ ರಾಜಪುತ್ರನ ದುರ್ಮರಣದ ಸುದ್ದಿಯು ವಾಯುವೇಗದಿಂದ ಆತನ ತಂದೆ-ತಾಯಿಗಳ ಕಿವಿಯವರೆಗೂ ಹೋಯಿತು

ಇದನ್ನು ಕೇಳಿದ ಕೂಡಲೆ ಅತ್ಯಂತ ವ್ಯಾಕುಲದಿಂದ ಅವರು ಆ ಸ್ಥಳಕ್ಕೆ ಬಂದು, ಸತ್ತು ಬಿದ್ದಿರುವ ಮಗನನ್ನು ನೋಡಿದರು. ಆಗ ಅವರ ದುಃಖಕ್ಕೆ ನೆಲೆಯಿಲ್ಲದಂತಾಯಿತು.

ಮಹಾರಾಣಿಯು ತನ್ನ ಮಗನನ್ನು ತೊಡೆಯ ಮೇಲೆ ಹಾಕಿಕೊಂಡು ಸುಂದರವಾದ ಗಲ್ಲಗಳನ್ನು ಹಿಡಿದು:-ಹೇ ಕಂದಾ, ನೀನು ಹೀಗೇಕೆ ಕಣ್ಣು ಮುಚ್ಚಿಕೊಂಡು ಸುಮ್ಮನಿರುವೆ? ಈಗೋ, ನಿನ್ನ ತಾಯಿಯಾದ ನಾನು ಬಂದಿರುತ್ತೇನೆ. ಕಣ್ಣುಗಳನ್ನು ತೆರೆದು ನೋಡು. ಪ್ರತಿದಿನವೂ ನನ್ನನ್ನು ನೋಡಿದಾಕ್ಷಣವೇ:—ಅವ್ವಾ, ನನಗೆ ಏನಾದರೂ ಕೊಡು, ಎಂದು ಮೈ ಮೇಲೆ ಬಿದ್ದು ಹೊರಳಾಡುತ್ತಿದ್ದೆಯಲ್ಲ! ಹೇ ಮುದ್ದು ಕುಮಾರಾ, ಇವತ್ತಿನ ದಿವಸ ಮೌನವನ್ನೇಕೆ ಧರಿಸಿರುವೆ? ನನ್ನ ಮೇಲೆ ಸಿಟ್ಟಾಗಿರುವಿಯಾ ಹೇಗೆ? ಅಕಟಾ! ನನ್ನ ಮೋಹದ ಬಾಲಕನೇ, ಪ್ರೀತಿಯ ರನ್ನನೇ!! ನೀನಿಲ್ಲದ ಮೇಲೆ ಈ ಭೂಮಿಯಲ್ಲಿ ನಾನು ಜೀವದಿಂದಿರುವದಾದರೂ ಹೇಗೆ? ಹೀಗೆಂದು ನಾನಾರೀತಿಯಿಂದ ಮಗನ ಗುಣಗಳನ್ನು ನೆನೆನೆನೆದು ಪ್ರಲಾಪಿಸುತ್ತಿದ್ದಳು. ಇದನ್ನೆಲ್ಲ ನೋಡುತ್ತಿದ್ದ ಪಟ್ಟಣದ ಜನರ ಕಣ್ಣೀರು ತಮ್ಮಷ್ಟಕ್ಕೆ ತಾವೇ ಸುರಿಯತೊಡಗಿದವು.

ಇತ್ತ ರಾಜನಿಗೂ ಆಕಾಶವೇ ಕಳಚಿ ಬಿದ್ದಂತಾಗಿ ಆತನ ಒಡಲಲ್ಲಿ ಸಹಿಸಲಾರದಷ್ಟು ಶೋಕಾಗ್ನಿಯು ತುಂಬಿಕೊಂಡಿದ್ದರೂ ಹೆಂಡತಿಯಂತೆ ಹೊರಗೆಡವಲಿಲ್ಲ. ಆದರೂ ಪುತ್ರಶೋಕವನ್ನು ಸಹಿಸಿಕೊಳ್ಳುವದು ದುಸ್ತರವಾದದ್ದಲ್ಲವೆ? ಕಣ್ಣೀರು ಒಂದೇಸವನೇ ಧಾರೆಗಟ್ಟಿ ಇಳಿಯುತ್ತಿದ್ದವು. ನೆಲದ ಮೇಲೆ ಬಿದ್ದು ಉರಳಾಡುತ್ತಿರುವ ಹೆಂಡತಿಯನ್ನು ನೋಡಿಯಂತೂ ಆತನ ದುಃಖವು ಮೇರೆದಪ್ಪುತ್ತಿತ್ತು. ಸುಖವಾದರೂ, ದುಃಖವಾದರೂ ಮನುಷ್ಯನಿಗೆ ಸ್ಥಿರವಾದವುಗಳಲ್ಲವೆಂದು ಹೇಳುವ ಜ್ಞಾನಿಗಳ ಮಾತು ಸುಳ್ಳಲ್ಲ! ಅದರಂತೆ ಸ್ವಲ್ಪ ವೇಳೆಯ ಹಿಂದೆ ರಾಜವೈಭವದ ಆನಂದದಲ್ಲಿ ಲೋಲಾಡುತ್ತಿರುವ ಮಹಾರಾಜನೇ ಈಗ ಸಂಕಟವೆಂಬ ಸಮುದ್ರದಲ್ಲಿ ಮುಳುಗಿ ಹೋಗಿರುವನು. ಈ ದುಃಖವಾದರೂ ಎಲ್ಲಿಯವರೆಗಿರುವದು? ಅಲ್ಪಕಾಲವಲ್ಲಿಯೇ ನೀರನ್ನು ಸುರಿಸುತ್ತಿರುವ ಆತನ ಕಣ್ಣುಗಳು ಕೆಂಡವನ್ನು ಕಾರಲಿಕ್ಕೆ ಹತ್ತಿದವು. ಹುಬ್ಬುಗಳು ಗಂಟಿಕ್ಕಿದವು. ಶೋಕಮಯವಾಗಿರುವ ಆತನ ಹೃದಯವು ಕೋಪಾಗ್ನಿಯಿಂದ ತುಂಬಿಹೋಯಿತು. ಎಲ್ಲ ಜನರೂ ಆತನ ಉಗ್ರರೂಪವನ್ನು ನೋಡಿ ನಮಗಾವ ಸಂಕಟವು ಪ್ರಾಪ್ತಿಯಾಗುವದೋ, ಎಂದು ನಡುಗಹತ್ತಿದ್ದರು. ಒಬ್ಬರಿಗಾದರೂ ಸಿಟ್ಟಿಂದು

ಮಾತಾಡುವ ಧೈರ್ಯವಾಗಲಿಲ್ಲ. ಮಂತ್ರಿಯೇ ಮುಂತಾದ ಪ್ರಮುಖ ಜನರು ಸಹ ಅರಸನ ಬಾಯೊಳಗೆ ಹೊರಡುವ ಶಬ್ದವನ್ನೇ ನಿರೀಕ್ಷಿಸುತ್ತ ನಿಂತಿದ್ದರು.

ಆಗ ಮಹಾರಾಜನು ಸಿಟ್ಟಿನಿಂದ:—'ಎಲೈ ಮಂತ್ರಿಯೇ, ಕಾರ್ಯವಂತೂ ಕೈ ಮೀರಿ ಹೋಗಿದೆ. ಆಗಲಿ, ನನ್ನ ಮಗನನ್ನು ಕೊಂದಿರುವ ನೀಚನನ್ನು ಶೋಧಿಸಿ ಹಿಡಿತರಿಸು; ಅವನನ್ನು ನನ್ನ ಕುವರನ ಚಿತೆಯಲ್ಲಿ ಹಾಕಿ ಸುಡಿಸಿ ಬಿಡುವೆನು' ಎಂದು ಹೇಳಿದನು.

ಆ ಮಾತಿಗೆ ಮಂತ್ರಿಯು ಪ್ರತಿ ಮಾತನ್ನಾಡದೆ 'ಮಹದಾಜ್ಞೆ' ಎಂದು ಅನ್ನುತ್ತ, ರಾಜಪುತ್ರನನ್ನು ಕೊಂದವರಾರೆಂದು ಅಲ್ಲಿರುವ ಎಲ್ಲ ಜನರನ್ನು ಕೇಳಲು, ಅವರು:-ಕಮ್ಮಾರ ಮೌನನೇ ಚಂಡಿಸಿಂದ ಹೊಡೆದು ಕೊಂದನೆಂದು ಹೇಳಿದರು. ಆಗ ಮಂತ್ರಿಯು ಸೇವಕರನ್ನು ಕರೆದು:—ಅವನನ್ನು ಎಲ್ಲಿದ್ದರೂ ಹುಡಿಕಿಕೊಂಡು ಬನ್ನಿರಿ, ಎಂದು ಕಟ್ಟಪ್ಪಣೆ ಮಾಡಿ ಕಳಿಸಿದನು.

ರಾಜಾಜ್ಞೆಯಂತೆ ಚಾರರು ಪ್ರತಿಯೊಂದು ಕೇರಿಯ ಮನೆಗಳಲ್ಲೂ ತಪ್ಪದೆ ಶೋಧ ಮಾಡಿ ಬೇಸತ್ತು-ಮನೆಯವರೇ ಆ ಬಾಲಕನನ್ನು ಬಚ್ಚಿಟ್ಟಿರಬಹುದು; ಅಥವಾ ಪರವೂರಿಗಾದರೂ ಕಳಿಸಿರಬಹುದು, ಎಂದು ಆಲೋಚಿಸುತ್ತ ಅವರ ಮನೆಗೆ ಹೋಗಿ ಬೆದರಿಸಿ ಕೇಳಲು,

ಮೌನೇಶನ ತಂದೆ-ತಾಯಿಗಳು:—ಅಪ್ಪಗಳಿರಾ, ಇಂದು ಬೆಳಿಗ್ಗೆ ಮನೆ ಬಿಟ್ಟು ಹೋದವನು ಇದುವರೆಗೂ ಬಂದಿಲ್ಲ. ಅತನನ್ನು ನೀವೇಕೆ ಹುಡುಕುವಿರಿ? ಎಂದು ಕೇಳಿದರು.

ರಾಜಸೇವಕರು:—ಅವನನ್ನು ಹುಡುಕುವ ಕಾರಣವು ನಿಮಗೆ ಗೊತ್ತೇ ಇಲ್ಲವೇ? ರಾಜಪುತ್ರನನ್ನು ಚಂಡಿಸಿಂದ ಹೊಡೆದು ಕೊಂದಿರುವನಾದ್ದರಿಂದ ಎಲ್ಲಿದ್ದರೂ ಹುಡುಕಿ ತರಬೇಕೆಂದು ರಾಜಾಜ್ಞೆಯಾಗಿದೆ. ಕಾರಣ ಆ ಹುಡುಗನನ್ನು ಬೇಗನೆ ಹುಡುಕಿ ಕೊಡಿರಿ; ಇಲ್ಲವಾದರೆ ಅವನಿಗಾಗುವ ಶಾಸನವು ನಿಮಗಾಗುವದು, ಎಂದು ಹೇಳಿ ಮೌನೇಶನನ್ನು ಶೋಧಿಸುವ ಕೆಲಸಕ್ಕೆ ನಡೆದರು

ಇದನ್ನು ಕೇಳಿದ ಕೂಡಲೆ ಹಾವಪ್ಪನು ಹೌಹಾರಿ ಕುಳಿತನು. ಹಾವಕ್ಕ ಕಣ್ಣೀರು ಸುರಿಸುತ್ತ:—ದೇವಾ ನಿನ್ನ ಮಹಿಮೆಯು ಯಾರಿಗೆ ತಿಳಿಯು

ಬೇಕು? ಮೊದಲು ಈ ಅನಾಥಳಿಗೆ ಮಗನಾಗುವೆನೆಂದು ಅನುಗ್ರಹಿಸಿ ಅದ ರಂತೆ ಅವತರಿಸಿ ಇದುವರೆಗೂ ನಮ್ಮನ್ನು ಬಾಲಲೀಲೆಯಿಂದ ಆನಂದ ಸಾಗರದಲ್ಲಿ ಮುಳುಗಿಸಿ ಈಗ ರಾಜಕುಮಾರನನ್ನು ಕೊಂದು ದುಃಖ ವನ್ನುಂಟುಮಾಡಿರುವೆಯಾ? ಅಕಟಾ! ಸುಕುಮಾರನೇ, ನಿನ್ನ ಮುಖವನ್ನು ನೋಡದೇ ನಾವು ಇರುವದಾದರೂ ಹೇಗೆ? ತನ್ನ ಮಗನೊಡನೆ ಚಿತೆಯಲ್ಲಿ ಸುಡಿಸುವೆನೆಂದು ರಾಜನು ನಿನ್ನನ್ನು ಹುಡುಕಿಸುವನಂತೆ! ಮುಂದೇನು ಮಾಡುವಿಯೋ ಅದನ್ನು ನೀನೇ ಬಲ್ಲೆಯಲ್ಲದೆ ಪಾಮರರಾದ ನಮಗೆ ನಿನ್ನ ಮಹಿಮೆಯು ಏನು ಗೊತ್ತು? ಎಂದು ಅನ್ನಕ್ಕತ್ತ ಒಮ್ಮೆ ದೇವಭಾವನೆಯಿಂ ದಲೂ, ಒಕ್ಕೆ ಪುತ್ರಭಾವನೆಯಿಂದಲೂ ದುಃಖಿಸುತ್ತಿದ್ದಳು.

ಇತ್ತ ಚಾರರು ಎಷ್ಟು ಹುಡುಕಿದರೂ. ಮೌನೇಶನು ಸಿಗದ್ದರಿಂದ ಚಿಂತೆಗೊಳಗಾಗಿ:--ನಾವು ಹೀಗೆಯೇ ಹೋಗಿ ಮಹಾರಾಜನೆದುರಿಗೆ ನಿಂತು ಅಪರಾಧಿಯು ಸಿಗಲಿಲ್ಲವೆಂದು ಹೇಳಿದರೆ ನಮಗೆಲ್ಲಿ ಕಠಿಣ ಶಿಕ್ಷೆಯನ್ನು ವಿಧಿಸುವನೋ? ಎಂಬ ಹೆದರಿಕೆಯಿಂದ ಊರಹೊರಗೆ ಹೋಗಿ ಶೋಧಿಸ ಹತ್ತಿದರು.

ಆಗ ಮಹಾಮಹಿಮನಾದ ಮೌನೇಶನು ಗೋಪಾಲಕನ ವೇಷವನ್ನು ಧರಿಸಿ ಆಕಳುಗಳನ್ನು ಮೇಯಿಸುತ್ತ ಅವರು ಬರುವ ಮಾರ್ಗದಲ್ಲಿ ನಿಂತಿ ದ್ದನು. ಚಾರರು ಅವನನ್ನು ನೋಡಿ:—ಎಲೋ ಗೋಪಾಲಕನೇ, ಕಮ್ಮಾರ ಮೌನನನ್ನು ಕಂಡೆಯಾ? ಎಂದು ಕೇಳಿದರು.

ಆ ಮಾತಿಗೆ ಗೋಪಾಲಕನು:—ಇದುವರೆಗೂ ನನ್ನೊಡನೆ ಮಾತಾ ಡುತ್ತ ಇಲ್ಲಿಯೇ ಇದ್ದನು. ಇದೇ ಈಗ ಈ ಮಾರ್ಗವಾಗಿ ಹೋದನು ಬೇಗನೆ ಹೋಗಿರಿ, ಎಂದನು.

ರಾಜದೂತರು ಮೌನೇಶನನ್ನು ಹಿಡಿಯುವ ಆತುರದಿಂದ ಓಡತೊಡ ಗಿದರು. ಸ್ವಲ್ಪ ದೂರ ಹೋದನಂತರ ಅವರಿಗೆ ಒಬ್ಬ ಮುದುಕನು ಭೆಟ್ಟಿ ಯಾದನು. ಆತನ ಚರ್ಮವು ಹಾಗಲ ಹಣ್ಣಿನಂತೆ ಸುಕ್ಕುಗಟ್ಟಿತ್ತು; ನಡುವು ಬಾಗಿತ್ತು; ಬಾಯೊಳಗಿನ ಎಲ್ಲ ಹಲ್ಲುಗಳು ಬಿದ್ದು ಹೋಗಿದ್ದವು. ಜೊಲ್ಲು ಸುರಿಯುತ್ತಿತ್ತು. ಕಪೋಲಗಳೂ, ಕಣ್ಣುಗಳೂ ಒಳಸೇರಿದ್ದವು; ಹುಬ್ಬುಗಳು ನೆರೆಗೂದಲುಗಳಿಂದ ತುಂಬಿ ಹೋಗಿದ್ದವು; ತಲೆಯು ಒಂದೇಸವನೆ ನಡುಗು

ತ್ತಿತ್ತು. ದೇಹವು ಇಷ್ಟು ಹೀನಸ್ಥಿತಿಯಲ್ಲಿದ್ದರೂ ಆತನು ಹಿಡಿದಿರುವ ಬಿದಿರಿನ ಕೋಲು ಮಾತ್ರ ಗಟ್ಟಿಮುಟ್ಟಾಗಿತ್ತು. ನೋಡುವವರಿಗೆ ಆತನ ಆಯುಷ್ಯವು ನೂರು ವರುಷಗಳಿಗಿಂತ ಹೆಚ್ಚಾಗಿರಬಹುದೆಂದು ಒಡೆದು ಕಾಣುತ್ತಿತ್ತು. ಹೀಗೆ ಆ ವೃದ್ಧನ ವೇಷವನ್ನು ಧರಿಸಿದವನಾವನೂ ನಮ್ಮ ಹಾವಕ್ಕನ ಮುದ್ದು ಮಗನಾದ ಮೌನೇಶನೇ ಆಗಿದ್ದನು. ರಾಜದೂತರು ಆ ಮುದುಕನನ್ನು ನೋಡಿ:—ಅಜ್ಜಾ, ಕಮ್ಮಾರ ಮೌನೇಶನೆಂಬವನು ರಾಜಮಗನನ್ನು ಕೊಂದು ಎಲ್ಲಿಯೋ ಹೋಗಿರುವನು. ಅವನನ್ನು ನೀನೇನಾದರೂ ಕಂಡೆಯಾ? ಎಂದು ಕೇಳಿದರು.

ಆ ಮಾತಿಗೆ ಮುದುಕನು:—ತಮ್ಮಗಳಿರಾ, ಅದೇನು ಗಟ್ಟಿಯಾಗಿ ಹೇಳಿರಿ; ನೀವು ಮೆಲ್ಲಗೆ ಮಾತಾಡಿದರೆ ನನ್ನ ಕಿವಿಗಳೇನು ಕೇಳುವವೇ? ಎಂದನು.

ಪುನಃ ರಾಜಸೇವಕರು—ಅಜ್ಜಾ, ಕಮ್ಮಾರ ಮೌನನನ್ನು ಕಂಡೆಯಾ? ಎಂದು ಕೂಗಿ ಕೇಳಿದರು.

ಮುದುಕನು ಅವರ ಮಾತುಗಳನ್ನು ಕಿವಿಗೊಟ್ಟು ಕೇಳಿದವನಹಾಗೆ ನಟಿಸಿ—ಓಹೋ ಹಾವಪ್ಪನ ಮಗನೇನು? ನೋಡಿದೆ, ನೋಡಿದೆ. ಇದೇ ಮಾರ್ಗವಾಗಿ ನನಗೆ ಚೇಷ್ಟೆ ಮಾಡುತ್ತ ಹೋದನು.

ಹೀಗೆ ಹೇಳುವ ಮುದುಕನ ಮಾತನ್ನು ಕೇಳಿ, ರಾಜದೂತರು—ಇನ್ನೇನು ನಮಗೆ ಮೌನನು ನಿಜವಾಗಿಯೂ ಸಿಗುವನೆಂದು ತಿಳಿದು ಮತ್ತೆ ಧಾವಿಸಿ ಓಡತೊಡಗಿದರು. ಅವರು ತುಸ ದೂರ ಹೋದನಂತರ ಮಹಾತ್ಮನಾದ ಮೌನೇಶನು ಫಕೀರನ ವೇಷದಿಂದ ನಿಂತಿದ್ದನು. ಚಾರರೂ ಮುಸಲ್ಮಾನ ಧರ್ಮದವರಾದ ಕಾರಣ ಆ ಫಕೀರನಿಗೆ ನಮಸ್ಕರಿಸಿ—ಸ್ವಾಮಿ, ರಾಜಕುಮಾರನನ್ನು ಕೊಂದ ಮೌನೇಶನೆಂಬ ಹುಡುಗನು ಇದೇ ಮಾರ್ಗನಾಗಿ ಹೋದನಂತೆ ನೀವು ನೋಡಿದಿರಾ?

ಫಕೀರ:—ಛೀ ಹುಚ್ಚಪ್ಪಗಳಿರಾ! ಅವನನ್ನು ಹುಡಕಲಿಕ್ಕೆ ಇಷ್ಟು ದೂರ ಯಾಕೆ ಬಂದಿರಿ? ಅವನು ಇರುವದೊಂದು ಸ್ಥಳ, ನೀವು ಹುಡುಕುವದೊಂದು ಸ್ಥಳ. ಸುಮ್ಮನೆ ದಣಿದುಕೊಂಡಿರಿ. ವಿಚಾರವಿಲ್ಲದೆ ಹೀಗೆ ಹುಡುಕಿದರೆ ನಿಮಗೆ ಎಂದಿಗೆ ಸಿಕ್ಕಾನು? ಆತನನ್ನು ಹುಡಕಲಿಕ್ಕೆ ಬಹು ಬುದ್ಧಿ

ವಂತಿಕೆಯು ಬೇಕು. ನನ್ನ ಮಾತುಗಳನ್ನು ನಂಬಿ ತಿರುಗಿ ಹೋಗಿರಿ. ಅವನು ತನ್ನ ಕುಲುಮೆಯಲ್ಲಿ ಏನೋ ಕೆಲಸ ಮಾಡುತ್ತಿರುವನು.

ಈ ರೀತಿಯಾಗಿ ಹೇಳುವ ಫಕೀರನ ಮಾತಿನ ಮೇಲೆ ವಿಶ್ವಾಸವಿಟ್ಟು ಸೇವಕರು ಕುಲುಮೆಗೆ ಬಂದು ನೋಡುತ್ತಾರೆ, ಅಲ್ಲೇನಿದೆ? ಅಡಿಗಲ್ಲು-ತಿದಿಗಳ ಹೊರ್ತು ಮತ್ತಾರೂ ಇದ್ದಿಲ್ಲ. ಇದನ್ನು ನೋಡಿದ ರಾಜದೂತರು ಗಾಬರಿಯಾಗಿ:—'ಮೌನನು ಮಾತ್ರ ಎಲ್ಲಿ ಹುಡುಕಿದರೂ ಸಿಗಲಿಲ್ಲ. ವೇಳೆ ಬಹಳವಾಯಿತು. ಅಪರಾಧಿಯು ಸಿಗದೆ ರಾಜನೆದುರಿಗೆ ನಿಲ್ಲುವದ ದರೂ ಹೇಗೆ? ಹೋಗಲಿಕ್ಕೂ ಬಾರದು, ಬಿಡಲಿಕ್ಕೂ ಬಾರದು. ಹೀಗೆ ದ್ವಿಗುಣ ಸಂಕಟಪ್ರಾಪ್ತಿಯಾಗಿರುವದು' ಎಂದು ಚಿಂತಿಸುತ್ತ ಉಪಾಯಗಾಣದೆ ಬಾಡಿದ ಮುಖವುಳ್ಳವರಾಗಿ ರಾಜನ ಬಳಿಗೆ ಬಂದು ತಲೆಬಾಗಿ ಕೈಜೋಡಿಸಿ:. ಪ್ರಭುವೇ, ಅಪರಾಧಿಯಾದ ಮೌನನು ಎಲ್ಲಿ ಹುಡುಕಿದರೂ ಸಿಗಲಿಲ್ಲವೆಂದು ನಡುಗುತ್ತ ಹೇಳಿದರು.

ದೂತರ ಈ ಮಾತುಗಳನ್ನು ಕೇಳಿದ ಕೂಡಲೆ ಅರಸನ ಸಿಟ್ಟಿನ್ನುವ ಅಗ್ನಿಯು ಧಗಧಗಿಸಹತ್ತಿತ; ಕಣ್ಣುಗಳು ಕೆಂಪೇರಿದವು ಆತನು ಹಲ್ಲುಗಳನ್ನು ಕಡಿಯುತ್ತ:—ಎಲೈ ನೀಚರೇ, ಅಪರಾಧಿಯನ್ನು ಹಿಡಿತರದೆ ಹಾಗೆಯೇ ಬಂದು ಮುಖವನ್ನು ತೋರಿಸಲಿಕ್ಕೆ ನಿಮಗೆ ನಾಚಿಕೆ ಬರುವದಿಲ್ಲವೇ? ಇರಲಿ. ನನ್ನ ಮಗನನ್ನ ಕೊಂದಿರುವ ಮೂರ್ಖನ ವಂಶವನ್ನೇ ನಾಶಮಾಡಿಬಿಡುವೆನು! ಅವನ ತಂದೆ-ತಾಯಿಗಳಾಗಲಿ, ಬಂಧುಗಳಾಗಲಿ ಇದ್ದರೆ ಅವರನ್ನು ಬೇಗನೆ ಹಿಡಿದುಕೊಂಡು ಬನ್ನಿರಿ, ಎಂದು ಅಪ್ಪಣೆ ಮಾಡಿದನು.

ಆಗ ಕೇಳುವದೇನು? ಮೊದಲೇ ರಾಜದೂತರು; ಮೇಲಾಗಿ ಅರಸನ ಕಟ್ಟಪ್ಪಣೆ. ಅಂದಬಳಿಕ ಅವರನ್ನು ತಡೆಯುವವರಾರು? ಕೂಡಲೆ ನಿರಪರಾಧಿಗಳಾದ ಮೌನೇಶನ ತಂದೆ-ತಾಯಿಗಳನ್ನು ಹಿಡಿದು ಬಾಧಿಸುತ್ತ ಕರೆತಂದು ಅರಸನ ಸಮ್ಮುಖದಲ್ಲಿ ನಿಲ್ಲಿಸಿದರು.

ಆಗ ಮಹಾರಾಜನು:—ಎಲೈ ಘಾತುಕರೇ, ನನ್ನ ಮಗನ ಪ್ರಾಣಹರಣ ಮಾಡಿದ ನಿಮ್ಮ ಮಗನನ್ನು ಎಲ್ಲಿ ಬಚ್ಚಿಟ್ಟಿರುವಿರಿ? ಬೇಗನೆ ಹೇಳಿರಿ.

ಇಲ್ಲದಿದ್ದರೆ ನಿಮ್ಮಿಬ್ಬರನ್ನು ನನ್ನ ಮಗನೊಂದಿಗೆ ಚಿತೆಯಲ್ಲಿ ಹಾಕಿ ಸುಡಿಸಿ ಬಿಡುವೆನು, ಎಂದು ಸಿಟ್ಟಿನಿಂದ ಕೇಳಿದನು

ಅದಕ್ಕೆ ಆ ದಂಪತಿಗಳು:—'ಮಹಾಪ್ರಭುವೇ, ನಾವು ನಿಶ್ಚಯವಾಗಿ ನಮ್ಮ ಮಗನನ್ನು ಬಚ್ಚಿಟ್ಟಿರುವದಿಲ್ಲ ಮನೆ ಬಿಟ್ಟು ಹೋದಮೇಲೆ ತಿರುಗಿ ಅವನ ಮುಖವನ್ನೇ ನೋಡಿರುವದಿಲ್ಲ. ಇದರ ಮೇಲೆ ದೊರೆಗಳ ಚಿತ್ತ ಬಂದಂತೆ ಮಾಡಬಹುದು' ಎಂದು ಕಣ್ಣೀರು ಸುರಿಸುತ್ತ ಹೇಳಿದರು

ಮಗನು ಮಡಿದಿರುವ ಶೋಕಾಗ್ನಿಯಿಂದಲೂ, ಮೌನನು ಸಿಗಲಿಲ್ಲ ವೆಂಬ ಕೋಪಾಗ್ನಿಯಿಂದಲೂ ಕೂಡಿ ಪ್ರಳಯಾಗ್ನಿಯಂತೆ ಮೆರೆಯುತ್ತಿ ರುವ ಅರಸನಿಗೆ ಆ ಬಡಪ್ರಾಣಿಗಳು ಸಂಕಟದಿಂದ ಹೇಳುವ ಸಂಗತಿಯು ಸತ್ಯವಾದದ್ದೆಂದು ಹೇಗೆ ತಿಳಿಯಬೇಕು? ಉರಿಯುತ್ತಿರುವ ಅಗ್ನಿಯಲ್ಲಿ ಘೃತವನ್ನೆರೆದಂತೆ ಅವರ ಮಾತುಗಳನ್ನು ಕೇಳಿ ಅವನ ಸಿಟ್ಟು ಮತ್ತಿಷ್ಟು ಪ್ರಜ್ವಲಿಸಿ:—ಮೂರ್ಖರೇ, ಇನ್ನಾದರೂ ನಿಜ ಸಂಗತಿಯನ್ನು ಹೇಳಲಿಕ್ಕೆ ನಿಮ್ಮ ಮನಸ್ಸು ಒಡಂಬಡುವದಿಲ್ಲವೇ? ಎಲೈ ಸೇವಕರೇ, ಇವರನ್ನೇನು ನೋಡುವಿರಿ! ಹೆಡಮುರಿಗೆಗಟ್ಟಿ ನನ್ನ ಮಗನ ಶವದೊಡನೆ ಸ್ಮಶಾನಕ್ಕೆ ತೆಗೆದುಕೊಂಡು ನಡೆಯಿರಿ; ಎಂದು ಅಪ್ಪಣೆ ಮಾಡಿದನು.

ನೆರೆದವರೆಲ್ಲರೂ ಮಹಾರಾಜನ ಈ ಕಠಿಣೋಕ್ತಿಗಳನ್ನು ಕೇಳಿ:—ಶಿವ ಶಿವ! ಎಂಥ ಅನ್ಯಾಯವಿದು!! ಪ್ರತ್ಯಕ್ಷ ಭೂಪಾಲನೇ ಸತ್ಯಾಸತ್ಯ ಗಳನ್ನು ವಿಚಾರಿಸದೆ ನಿರಪರಾಧಿಗಳಾದ ಇವರಿಗೆ ಹೀಗೆ ಶಿಕ್ಷೆಯನ್ನು ವಿಧಿ ಸಿದ ಮೇಲೆ ಯಾರು ಮಾಡುವದೇನು? ಎಂದು ಮಿಡುಕುತ್ತಿದ್ದರು.

ಅರಸನ ಅಪ್ಪಣೆ ದೊರೆಯುವದೊಂದೇ ತಡ, ರಾಜದೂತರು ಮೌನೇ ಶನ ತಂದೆ-ತಾಯಿಗಳ ಕೈಗಳನ್ನು ಕಟ್ಟಿ ಹಿಡಿದುಕೊಂಡು, ಮರಣ ಹೊಂ ದಿದ ರಾಜಪುತ್ರನೊಡನೆ ಸ್ಮಶಾನಕ್ಕೆ ತೆರಳಿದರು ರಾಜಪತ್ನಿಯು ಸಹ ನೀವು ಬರಬೇಡಿರೆಂದು ಎಷ್ಟೋ ಜನರು ಹೇಳಿದರೂ ಕೇಳದೆ ಎದೆ-ಬಾಯಿ ಗಳನ್ನು ಹೊಡೆದುಕೊಂಡು ರೋದಿಸುತ್ತ ನಡೆದಳು.

ಆ ಜನ ಸಮೂಹದಲ್ಲಿ ಹಾವಪ್ಪನು ಹೆಂಡತಿಯನ್ನು ಕುರಿತು:—ಪ್ರಿಯೇ, ಮಗನಿಂದ ನಮಗೆ ಎಂಥ ವಿಪತ್ತು ಸಂಭವಿಸಿತು? ಎಂದು ಕಣ್ಣೀರು ಹಾಕಿದನು.

ಹಾವಕ್ಕನು:-ಪ್ರಿಯಕರಾ, ಈ ದೇಹವು ಎಂದಿದ್ದರೊಂದು ದಿನ ನಾಶವಾಗಿ ಹೋಗುವವಲ್ಲವೇ? ಎಂದ ಮೇಲೆ ಇದಕ್ಕೇತಕ್ಕೆ ವ್ಯಸನವು? ನಾವು ಪೂರ್ವದಲ್ಲಿ ಕಂದನನ್ನು ಕೊಡು, ಎಂದು ಕೇಳಿದಾಗ 'ನಾನೇ ಕಂದನಾಗಿ ರಕ್ಷಿಸುವೆನೆ'ಂದು ಹೇಳಿದ ಚಂದ್ರಶೇಖರನ ವಾಕ್ಯವನ್ನು ಮರೆತಿರುವಿರಾ ಹೇಗೆ? ಈಗಾದರೂ ಆ ಕಂದುಗೊರಳನೇ ನಮ್ಮ ದೃಢವನ್ನು ಪರೀಕ್ಷಿಸುವದಕ್ಕಾಗಿ ಇಂಥ ತೊಂದರೆಯನ್ನುಂಟುಮಾಡಿರುತ್ತಾನೆ. ನಾವು ಮಾತ್ರ ಆತನ ಚರಣಾರವಿಂದಗಳನ್ನು ನೆನೆಯುತ್ತ ನಿಶ್ಚಿಂತೆಯಿಂದಿದ್ದರಾಯಿತು. ಮುಂದಿನ ಕೆಲಸವು ಆ ದ ಮಾಘನನನ್ನೇ ಹೊಂದಿದೆ, ಎಂದು ಹೇಳಿದಳು.

ಹಾವಪ್ಪನು:— ಪ್ರಿಯೇ, ಸಂಕಟಕಾಲದಲ್ಲಿಯೂ ಸಹ ಈ ತರದ ಸದ್ಗುಣವು ಇರಬೇಕಾದರೆ ನೀನೇ ಪುಣ್ಯಶಾಲಿನಿಯು! ನಿನ್ನ ಸದ್ಬೋಧೆಯಿಂದ ನನ್ನ ದೇಹಾಭಿಮಾನವು ನಾಶವಾಗಿ ಹೋಯಿತು. ಇರಲಿ. ಆ ಮೌನಲಿಂಗನ ಮಹಿಮೆಯನ್ನು ನೋಡಿಬಿಡೋಣ, ಎಂದು ಸುಮ್ಮನಾದನು.

ಇತ್ತ ರಾಜಾಜ್ಞೆಯಂತೆ ಚಿತೆಯ ಸನ್ನಾಹವನ್ನು ಸಿದ್ಧಮಾಡಿ ಅದರಲ್ಲಿ ರಾಜಕುಮಾರನ ಶವವನ್ನೂ, ಮೌನೇಶನ ತಂದೆ-ತಾಯಿಗಳನ್ನೂ ಹಾಕಬೇಕೆನ್ನುವಷ್ಟರಲ್ಲಿಯೇ ಎಲ್ಲಿ ಹುಡುಕಿದರೂ ಸಿಗದಿರುವ ನಮ್ಮ ಮಾಯಗಾರನಾದ ಮೌನೇಶನು ಚಿತೆಯ ಹತ್ತರವೇ ಬಂದು ನಗುತ್ತ ನಿಂತಿದ್ದನು.

ಆತನನ್ನು ನೋಡಿದವರೆಲ್ಲರೂ:—ಇಗೋ, ಮೌನನು ಇಲ್ಲಿಯೇ ಇರುವನು. ಇದುವರೆಗೂ ಎಷ್ಟು ಹುಡುಕಿದರೂ ಸಿಗಲಿಲ್ಲ. ಬೇಗನೆ ಹಿಡಿಯಿರಿ-ಹಿಡಿಯಿರಿ, ಎಂದು ಅನ್ನುತ್ತ ಮೌನೇಶನನ್ನು ಸುತ್ತುಗಟ್ಟಿ ಹಿಡಿದು, ಮಂತ್ರಿಯ ಮುಂದೆ ನಿಲ್ಲಿಸಿದರು.

ಮಂತ್ರಿಯು ಆತನ ಸುಂದರ ಸ್ವರೂಪವನ್ನೂ, ಶಾಂತವೃತ್ತಿಯನ್ನೂ ನೋಡಿ ಅಂತಃಕರಣದಿಂದ:—'ತಮ್ಮಾ, ನಮ್ಮ ಅರಸನ ಮಗನನ್ನು ಏನು ಕಾರಣ ಕೊಂದೆ? ಇಗೋ ನೋಡು, ಮಹಾರಾಜರು ಸಿಟ್ಟಿನಿಂದ ನಿನ್ನ ತಂದೆ-ತಾಯಿಗಳನ್ನು ತಮ್ಮ ಮಗನ ಸಂಗಡ ಚಿತೆಯಲ್ಲಿ ಹಾಕಿ ಸುಡಿಸಿಬಿಡಬೇಕೆಂದು ಮಾಡಿರುವರು. ಕಾರಣ ನೀನು ನಿಜ ಸಂಗತಿಯನ್ನು ಹೇಳಿ ಅವರನ್ನು ಉಳಿಸು" ಎಂದು ಅಂದನು.

ಆ ಮಾತಿಗೆ ಮೌನನು:— ಮಂತ್ರೀಶಾ, ಅಪರಾಧಿಯನ್ನು ಹಿಡಿದು ಶಿಕ್ಷೆ ಮಾಡುವದು ಯೋಗ್ಯವಾದದ್ದು. ಅವನ್ನು ಬಿಟ್ಟು ನಿರಪರಾಧಿಗಳಾದ ಇವರನ್ನು ಕೊಲ್ಲುವದು ಅನ್ಯಾಯುವಲ್ಲವೇ? ಪ್ರಭುಗಳಾದವರಿಗೆ ಇದೇ ಏನು ಧರ್ಮ ಮಾರ್ಗವು? ಅರಸರಾದ ತಾವೇ ಇಂಥ ಅಧರ್ಮ ಮಾರ್ಗವನ್ನು ಹಿಡಿದರೆ ಪ್ರಜೆಗಳ ಗತಿಯೇನು? ಇರಲಿ; ನಾನು ಹೇಳುವ ಸತ್ಯ ವಾಕ್ಯವನ್ನು ಕೇಳು. ನಿಮ್ಮ ರಾಜಪುತ್ರನು ನಮ್ಮವರು ಲಗ್ಗೆಯನ್ನು ಹೊಡಿದ ನಂತರ ನನ್ನನ್ನು ಅನ್ಯಾಯುವಾಗಿ ಹೊಡೆದನು. ನಾನು ಮಾತ್ರ ಹಾಗೆ ಮಾಡದೆ ನಮ್ಮ ಆಟ ಬಂದಾಗ್ಗೆ ಲಗ್ಗೆಗಳನ್ನು ಹೊಡುವದಕ್ಕಿಂತ ಪೂರ್ವದಲ್ಲಿ ಚೆಂಡಿನಿಂದ ರಾಜಕುಮಾರನನ್ನು ಹೊಡೆದೆನು. ಆ ಹೊಡೆತವು ಆತನು ಕಟ್ಟಿನ ಸ್ಥಳಕ್ಕೆ ಬೀಳಲು ಆತನು ಮೃತಪಟ್ಟನು. ನಾನಾದರೂ ಆತನು ಸಾಯಬೇಕೆಂಬ ಇಚ್ಛೆಯಿಂದ ಹೊಡೆದವನಲ್ಲ; ಮತ್ತು ಇದರಲ್ಲಿ ನನ್ನ ಅಪರಾಧವು ಏನೂ ಇರುವದಿಲ್ಲ. ಈ ಮಾತಿನ ಸತ್ಯಾ-ಸತ್ಯತೆಯನ್ನು ತಿಳಿಯುವದಕ್ಕಾಗಿ ಮೃತಪಟ್ಟಿರುವ ರಾಜಕುಮಾರನನ್ನು ಕೇಳಿದರೆ ತಮ್ಮೆಲ್ಲರಿಗೂ ವಿದಿತವಾಗುವದು, ಎಂದು ಹೇಳಿದನು.

ಆ ಮಾತಿಗೆ ಮಂತ್ರಿಯು ನಗುತ್ತ:— ಹುಚ್ಚಾ, ಸತ್ತವನನ್ನು ಕೇಳಿದರೆ ಅವನು ಹೇಳುವದಾದರೂ ಹೇಗೆ? ನಿಮ್ಮ ಚೆಂಡಿನ ಆಟವನ್ನು ನೋಡಿದವರು ಯಾರಾದರೂ ಇದ್ದರೆ ಅವರ ಕೂಡ ಇದರಂತೆ ಹೇಳಿಸು. ಹಾಗಾದರೆ ನಿನ್ನನ್ನೂ, ನಿನ್ನ ತಂದೆ-ತಾಯಿಗಳನ್ನೂ ಬಂಧಮುಕ್ತರನ್ನಾಗಿ ಮಾಡುವೆವು.

ಮೌನೇಶ:— ಮಂತ್ರಿವರ್ಯಾ, ನನ್ನೊಡನೆ ಚೆಂಡನ್ನಾಡಿದ ರಾಜಪುತ್ರನೇ ಹತ್ತರವಿರಲಿಕ್ಕೆ ಮತ್ತೊಬ್ಬರಿಂದ ಹೇಳಿಸುವದೇತಕ್ಕೆ? ಆತನಿಂದ ಹೇಳಿಸದರೆ ನಿನಗೆ ಖಾತ್ರಿಯಾಗುವದಿಲ್ಲವೇ? ಎಂದು ರಾಜಕುಮಾರನ ಶವದ ಬಳಿಗೆ ಹೋಗಿ:— ಗೆಳೆಯಾ, ಅನ್ಯಾಯುವಾಗಿ ನೀನು ಹೊಡೆದವನೋ ಅಥವಾ ನಾನು ಹೊಡೆದವನೋ? ನಿಜ ಸಂಗತಿಯನ್ನು ಹೇಳು. ಎಂದು ಕೇಳಿದನು.

ಆಗ ನಡೆದ ಆಶ್ಚರ್ಯವನ್ನೇನು ಹೇಳಲಿ! ಲೋಕರಕ್ಷಕನಾದ ಮೌನೇಶನ ವಾಕ್ಯವು ತಾಕಿದ ಕೂಡಲೆ ರಾಜಪುತ್ರನ ಶವಕ್ಕೆ ಜೀವ ಬಂದು, ನಿದೆ

ಯಿಂದ ಎಚ್ಚತ್ತವನಂತೆ ಆವನು ಮೇಲಕ್ಕೆದ್ದು:—ದಯಾಘನಾ, ನಾನೇ ಮೊದಲು ಅನ್ಯಾಯವಾಗಿ ಹೊಡೆದೆನು. ಇದರಲ್ಲಿ ನಿನ್ನದೇನೂ ಅಪರಾಧ ವಿಲ್ಲ. ಪರಲೋಕದಲ್ಲಿದ್ದ ನನ್ನನ್ನು ಸತ್ಯವನ್ನು ಹೇಳೆಂದು ನೀನು ಕರೆ ತಂದಿರುವೆಯಾದ್ದರಿಂದ, ನಿನ್ನ ಮಹಿಮೆಯನ್ನು ಎಷ್ಟು ವರ್ಣಿಸಿದರೂ ತೀರ ದಾಗಿದೆ. ದೇವಾ! ನನ್ನ ತಪ್ಪುಗಳನ್ನು ಕ್ಷಮಿಸಿ ಉದ್ಧರಿಸು! ಎಂದು ರಾಜಪುತ್ರನು ಮೌನೇಶನ ಪಾದಗಳ ಮೇಲೆ ಬಿದ್ದನು.

ಆಗ ಮೌನೇಶನು:—ರಾಜಪುತ್ರಾ, ನಿನಗೆ ನೂರು ವರುಷ ಆಯುಷ್ಯ ವುಂಟಾಗಲಿ! ಎಂದು ಆಶೀರ್ವಾದ ಮಾಡಿದನು.

ಇದನ್ನು ನೋಡಿ ಎಲ್ಲಾ ಪರಮಾಶ್ಚರ್ಯದಿಂದ:—ಈತನು ನರನಲ್ಲ, ಪರಮಾತ್ಮನೆಂದು ಆತನ ಚರಣಗಳಿಗೆ ದೀರ್ಘದಂಡ ನಮಸ್ಕಾರ ಮಾಡಿ ದರು. ರಾಜನೂ-ರಾಜಪತ್ನಿಯೂ ತನ್ನ ಮಗನು ಬದುಕಿದ್ದನ್ನು ನೋಡಿ ಅತ್ಯಾನಂದದಿಂದ ಮೌನೇಶನನ್ನು ಕುರಿತು:-ಗುರುವರ್ಯ, ನೀನು ಮಹಾ ಮಹಿಮನೆಂದು ಅರಿಯದೆ ಅಜ್ಞಾನದಿಂದ ನಿನ್ನ ತಂದೆ-ತಾಯಿಗಳನ್ನು ಬಹು ತೊಂದರೆಬಡಿಸಿದೆವು. ಮದಾಂಧರಾದ ನಮ್ಮ ತಪ್ಪುಗಳನ್ನು ಕ್ಷಮಿಸಿ, ಕಾಪಾಡು" ಎಂದು ಪಾದಗಳ ಮೇಲೆ ಬಿದ್ದು ಬೇಡಿಕೊಳ್ಳಲು,

ಮೌನೇಶನು:—ರಾಜದಂಪತಿಗಳೇ, ಕಾರಣಕ್ಕನುಸರಿಸಿ ಕಾರ್ಯ ಗಳಾಗುತ್ತವೆ. ಇದರಲ್ಲಿ ನಿಮ್ಮ ತಪ್ಪೇನು? ಎಂದು ಸಂತೈಸಿದನು.

ಅನಂತರ ಆ ರಾಜದಂಪತಿಗಳು ಹಾವಪ್ಪನಿಗೂ, ಆತನ ಪತ್ನಿಯಾದ ಹಾವಕ್ಕನಿಗೂ ನಮಸ್ಕರಿಸಿ:—ಪುಣ್ಯಾತ್ಮರೇ, ಘನಮಹಿಮನಾದ ಈತನು ನಿಮ್ಮಗಳಿಗೆ ಮಗನಾಗಿರುವದರಿಂದ ಲೋಕದಲ್ಲಿ ನೀವೇ ಧನ್ಯರು, ಎಂದು ಕೊಂಡಾಡುತ್ತ ಉಡುಗರೆ-ಉತ್ಸವಗಳಿಂದ ಸಂತೋಷಗೊಳಿಸಿ, ಅವರಿಂ ದಲೂ, ಮೌನೇಶನಿಂದಲೂ ಆಶೀರ್ವಾದವನ್ನು ಪಡೆದು ಪರಿವಾರ ಸಹಿತ ತಮ್ಮ ಅರಮನೆಗೆ ತೆರಳಿದರು.

ಮೌನೇಶನ ತಂದೆ-ತಾಯಿಗಳು ಮಹದಾನಂದದಿಂದ ಮಗನನ್ನು ಕೂಡಿಕೊಂಡು ಮನೆಗೆ ಹೋದರೆಂಬಲ್ಲಿಗೆ ಮೂರನೇ ಅಧ್ಯಾಯ ಸಂಪೂರ್ಣ.

—o—

ಶ್ರೀ ಗುರು ಮೌನ ಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ನಾಲ್ಕನೆಯ ಅಧ್ಯಾಯ

—ಪರ್ವತಪ್ಪನಿಗೆ ಐಶ್ವರ್ಯ ಕೊಟ್ಟಿದ್ದು; ಮತ್ತು ರಾಚೋಟಿಯಲ್ಲಿ ವೀರಭದ್ರದೇವರಿಗೆ ಭೋಜನ ಮಾಡಿಸಿದ್ದು.—

ಶ್ರೀ ಮೌನೇಶ್ವರನು ಗೋನಾಲದಲ್ಲಿ ಅನೇಕ ಮಹಿಮೆಗಳನ್ನು ತೋರಿಸುತ್ತ ಲೀಲಾಮೂರ್ತಿಯಾಗಿ ಮೆರೆಯುತ್ತಿರಲು, ತಂದೆ-ತಾಯಿಗಳು ಮಗನ ಮೇಲಣ ಮಮತೆಯಿಂದ ಆತನನ್ನು ಅರಗಳಿಗೆ ಸಹ ಅಗಲಿರುತ್ತಿದ್ದಿಲ್ಲ. ಮೌನೇಶನು ಎಲ್ಲಾದರೂ ಹೋದರೆ ತಿರುಗಿ ಬರುವವರೆಗೂ ಅವರ ಮನಸ್ಸಿಗೆ ಸಮಾಧಾನವಾಗುತ್ತಿದ್ದಿಲ್ಲ. ಒಮ್ಮೊಮ್ಮೆ ಆತನು ಬೇಗ ಬಾರದಿದ್ದರೆ ತಮ್ಮ ಕೆಲಸ-ಬೊಗಸೆಗಳನ್ನು ಬಿಟ್ಟು ಓಣಿ-ಓಣಿ ತಿರುಗಿ ಹುಡುಕಿ ಮನೆಗೆ ಕರೆಕೊಂಡು ಬರುತ್ತಿದ್ದರು. ಕಾಮಧೇನುವು ಮನೆಯಲ್ಲಿದ್ದರೆ ಹಾಲಿನ ಕೊರತೆಯೇ? ಕಲ್ಪವೃಕ್ಷವು ಹಿತ್ತಲದಲ್ಲಿರಲು, ಅನ್ನ-ವಸ್ತ್ರದ ಅಭಾವವೇ? ಚಿಂತಾಮಣಿಯು ಕಟ್ಟೆಯ ಕಲ್ಲಾದರೆ ದ್ರವ್ಯದ ತೊಂದರೆಯೆ? ಅದರಂತೆ ಇಷ್ಟಾರ್ಥದಾಯಕನಾದ ಶ್ರೀಷ್ಟದೇವನೇ ಮಗನಾದ ಮೇಲೆ ತಂದೆ-ತಾಯಿಗಳಿಗೆ ಮತ್ತಾವ ಚಿಂತೆ? ಎಲ್ಲ ರೀತಿಯಿಂದಲೂ ಸುಖಸ್ವರೂಪಿಗಳೇ ಆಗಿದ್ದರು.

ಹೀಗಿರುವ ಹಾವಪ್ಪ-ಹಾವಕ್ಕ ಇವರ ಮನೆಯ ಸಮೀಪದಲ್ಲಿಯೇ ಪರ್ವತಪ್ಪ-ಮೇನಕಾದೇವಿಯರೆಂಬ ವೀರಶೈವ ಮತದ ದಂಪತಿಗಳಿದ್ದರು. ಅವರು ಅನ್ಯೋನ್ಯ ಪ್ರೀತಿಯಿಂದ ಗುರುಲಿಂಗ ಜಂಗಮಾರ್ಚನೆಯಲ್ಲಿ ತತ್ಪರರಾಗಿ ಸತ್ಯವೃತ್ತಿಯಿಂದ ಕಾಲಕಳೆಯುತ್ತಿದ್ದರು. ನೋಡಿರಿ, ಎಲ್ಲಾದರೂ ಒಳ್ಳೆಯ ಜನರಿಗೆ ತೊಂದರೆ ಬಹಳ. ಪರ್ವತಪ್ಪನು ಶಿವಭಕ್ತಿಯುಳ್ಳವನಾದರೂ ಅತ್ಯಂತ ಬಡವನಾಗಿದ್ದನು ಎಷ್ಟು ಕೆಲಸ ಮಾಡಿದರೂ ಆತನಿಗೂ ಆತನ ಕುಟುಂಬಕ್ಕೂ ಹೊಟ್ಟೆಗೆ ಸಾಲುತ್ತಿದ್ದಿಲ್ಲ ಸಾಲ ಕೊಟ್ಟ

ವರು ಬಂದು ಕೇಳಿದರೆ ತಿರುಗಿ ಕೊಡಲಿಕ್ಕೆ ಗತಿಯಿದ್ದಿಲ್ಲ. 'ಲೋಕೇಷು ನಿರ್ಧನೋ ದುಃಖಿ' ಎನ್ನುವ ಶಾಸ್ತ್ರವಚನದಂತೆ ಪರ್ವತಪ್ಪನ ಸ್ಥಿತಿಯಾಗಿತ್ತು. ಧನವಂತನನ್ನು ಎಲ್ಲರೂ ಮರ್ಯಾದೆಯಿಂದ ಕಾಣುವರು. ಆದರೆ ದರಿದ್ರನನ್ನು ಕಂಡರೆ ಯಾರು ಮನ್ನಿಸುವರು? ಕಣ್ಣಿದ್ದು ಕುರುಡರ ಹಾಗೆಯೂ, ಕಿವಿಗಳಿದ್ದು ಕಿವುಡರ ಹಾಗೆಯೂ, ಬಾಯಿದ್ದು ಮೂಕರ ಹಾಗೆಯೂ ಪರ್ವತಪ್ಪನನ್ನು ಕಂಡವರೆಲ್ಲರೂ ಮಾತಾಡಿಸಿದರೂ ಮಾತಾಡದಂತೆ ಓರೆಬಿದ್ದು ಹೋಗುತ್ತಿದ್ದರು. ಒಂದೊಂದು ದಿವಸ ನಮ್ಮ ಸಜ್ಜನ ಶಿರೋಮಣಿಯಾದ ಪರ್ವತಪ್ಪನಿಗೂ ಪರ್ವತಪ್ಪನ ಕುಟುಂಬಕ್ಕೂ ಉಪವಾಸ ಬೀಳುವ ಪ್ರಸಂಗವೂ ಬರುತ್ತಿತ್ತು. ಆತನಿಗೆ ತನ್ನ ಕುಟುಂಬ ಸಂರಕ್ಷಣೆ ಮಾಡುವದು ಬಹಳೇ ತ್ರಾಸಾಗಿ ಶಿವ-ಶಿವ! ಭಕ್ತವತ್ಸಲ!! ಇನ್ನಾದರೂ ನಿನಗೆ ದಯೆಬಾರದೇ ಹೋಯಿತೇ? ನೀನು ಕರುಣಾಸಾಗರನೂ, ಅನಾಥ ರಕ್ಷಕನೂ, ಎಂದು ಹೇಳುವ ವೇದ ವಾಕ್ಯವನ್ನು ಸಾರ್ಥಕ ಮಾಡದೆ ಹೋದೆಯಾ?' ಎಂದು ಆಗಿಂದಾಗ್ಗೆ ದೇವರನ್ನು ಪ್ರಾರ್ಥಿಸುತ್ತಿದ್ದನು.

ಹೀಗೆ ದಾರಿದ್ರ್ಯಾವಸ್ಥೆಯಲ್ಲಿ ಬಳಲುತ್ತಿದ್ದ ಪರ್ವತಪ್ಪನು ಮೌನೇಶನ ಮೇಲೆ ಬಹು ಪ್ರೀತಿ ಮಾಡುತ್ತಿದ್ದನು. ಮೌನೇಶನು ಹಾವಕ್ಕನಿಗೆ ಮಗನಾದಂದಿನಿಂದ ಆತನನ್ನು ಎತ್ತಿ ಆಡಿಸುವದು ಈತನದೊಂದು ಕೆಲಸವೇ ಆಗಿತ್ತು. ಹೀಗಿರುವ ಪರ್ವತಪ್ಪನಿಗೆ ಹಾವಕ್ಕನು ಚಿಕ್ಕಪ್ಪನೆಂತಲೂ ಮೌನೇಶನು ಅಜ್ಜನೆಂತಲೂ ಕರೆಯುತ್ತಿದ್ದರು. ಪರ್ವತಪ್ಪನು ಮೌನೇಶನನ್ನು ಮೊಮ್ಮಗನ ಸಮಾನನೆಂದು ತಿಳಿದು ಬಹು ಅಕ್ಕರತೆಯಿಂದ:— ಒಮ್ಮೆ ಮೌನನೆಂತಲೂ, ಒಮ್ಮೆ ಮೌನೇಶನೆಂತಲೂ, ಮತ್ತೊಮ್ಮೆ ಮೌನಲಿಂಗನೆಂತಲೂ ಸಂಬೋಧಿಸುತ್ತಿದ್ದನು. ಇತ್ತಿತ್ತ ಆತನು ರಾಜಪುತ್ರನನ್ನು ಬದುಕಿಸಿದ್ದನ್ನು ನೋಡಿ ಅವನನ್ನು ಮೃತ್ಯುಂಜಯನೆಂತಲೇ ಭಾವಿಸಿದ್ದನು. ಮೌನೇಶನಾದರೂ ಪರ್ವತಪ್ಪನನ್ನು ಕಂಡಾಕ್ಷಣವೇ:—ಅಜ್ಜಾ, ಎಂದು ಓಡಿ ಹೋಗಿ ಆತನ ಮೈ ಮೇಲೆ ಬಿದ್ದು ಆನಂದಗೊಳಿಸುತ್ತಿದ್ದನು. ಒಮ್ಮೊಮ್ಮೆ ತಂದೆ-ತಾಯಿಗಳು ಕರೆದರೂ ಬರದಂತೆ ಲೀಲೆಯಿಂದ ಮುಂದಕ್ಕೆ ಹೋಗುತ್ತಿದ್ದನು; ಆದರೆ ಪರ್ವತಪ್ಪನು ಕರೆದರೆ ಮಾತ್ರ ಆ ಕ್ಷಣವೇ ಹಿಂದಿರುಗಿ ಬರುತ್ತಿದ್ದನು.

ಈ ರೀತಿಯಾಗಿ ಮೌನೇಶನೂ ಪರ್ವತಪ್ಪನೂ ಬಹು ಪ್ರೇಮದಿಂದಿರುತ್ತಿರಲು, ಒಂದು ದಿನ ಪರ್ವತಪ್ಪನು ರಾತ್ರಿಯಲ್ಲಿ ಕೋಣೆಯ ಬಾಗಿಲನ್ನು ಮುಚ್ಚಿಕೊಂಡು ಮನಸ್ಸಿನಲ್ಲಿ:—ಶಿವ ಶಿವ! ಈ ದಾರಿದ್ರ್ಯಾವಸ್ಥೆಯಿಂದ ಎಷ್ಟು ದಿನ ಕಾಲಹರಣ ಮಾಡಬೇಕು? ಸಾಕು, ಸಾಕು! ನನಗೆ ಮರಣವನ್ನಾದರೂ ಕೊಟ್ಟು ಈ ಕಷ್ಟವನ್ನು ತಪ್ಪಿಸು, ಎಂದು ಚಿಂತಿಸುತ್ತ ಒಬ್ಬನೇ ಕುಳಿತಿದ್ದನು.

ಅಷ್ಟರಲ್ಲಿ ಮಾಯಾ ಮಹಿಮನಾದ ಮೌನೇಶನು ಪರ್ವತಪ್ಪನ ಹತ್ತರವೇ ಹೋಗಿ ನಿಂತು:—ಅಜ್ಜಾ, ಇದು ರಾತ್ರಿಯ ವೇಳೆಯಾದ್ದರಿಂದ ಸರ್ವರೂ ನಿದ್ರೆ ಎಂಬ ಮಹಾಸುಖವನ್ನು ಅನುಭವಿಸುತ್ತಿದ್ದಾರೆ. ಅದನ್ನು ಬಿಟ್ಟು ನೀನು ಹೀಗೇಕೆ ಎದ್ದು ಕುಳಿತಿರುವೆ? ರಾತ್ರಿಯಲ್ಲಿ ನಿದ್ದೆಗೆಡುವದೂ ಹಗಲಿನಲ್ಲಿ ಮಲಗುವದೂ ರೋಗೋತ್ಪತ್ತಿಗೆ ಕಾರಣವಲ್ಲವೇ? ಇಂಥ ಅನೇಕ ವಿಷಯಗಳನ್ನು ಅರಿತವನಾದ ನೀನು ಇದುವರೆಗೂ ಮಲಗದೇ ಇರುವದಕ್ಕೆ ಕಾರಣವೇನು? ಎಂದು ಅಂದನು

ಆಗ ಚಿಂತಾಮಗ್ನನಾಗಿದ್ದ ಪರ್ವತಪ್ಪನು ಗಾಬರಿಯಾಗಿ:—ಆಹಾ! ಈಗ 'ಆರು ತಾಸು ರಾತ್ರಿಯಾಗಿರಬಹುದು; ಇದಲ್ಲದೆ ನಾನು ಈ ಕೋಣೆಯ ಕದವನ್ನು ಮುಚ್ಚಿ ಅಗಳಿಯನ್ನು ಸಹ ಹಾಕಿದ್ದೆನು. ಇಂಥ ಪ್ರಸಂಗದಲ್ಲಿ ಮೌನೇಶನು ಹೇಗೆ ಬಂದನು? ಈತನು ಬಂದಿರುವ ಕಾರಣವಾದರೂ ಏನಿರಬಹುದು? ಎಂದು ತಲೆ ಎತ್ತಿ ನೋಡಲು, ಎದುರಿಗೆ ಕೋಟಿ ಸೂರ್ಯ ಪ್ರಕಾಶನಾದ ಪರಮಾತ್ಮನು ಪಂಚ ಮುಖಗಳಿಂದಲೂ, ದಶ ಭುಜಗಳಿಂದಲೂ, ಸೂರ್ಯ, ಚಂದ್ರ, ಅಗ್ನಿಗಳೆಂಬ ಮೂರು ಕಣ್ಣುಗಳಿಂದಲೂ, ನಾಗಾಭರಣಗಳಿಂದಲೂ, ಗಂಗಾ ಪಾರ್ವತಿಯರಿಂದಲೂ, ನಂದಿವಾಹನದಿಂದಲೂ ಕೂಡಿ ನಿಂತಿದ್ದನು.

ಕೂಡಲೇ ಪರ್ವತಪ್ಪನು ದೀರ್ಘದಂಡ ನಮಸ್ಕಾರ ಮಾಡಿ, ಎದ್ದು ನಿಂತು ಕೈ ಜೋಡಿಸಿ:—'ದೇವಾ! ನೀನು ರಾಜಪುತ್ರನನ್ನು ಬದುಕಿಸಿದ್ದನ್ನು ನೋಡಿದರೂ ನಿನ್ನ ಮಹಿಮೆಯನ್ನು ತಿಳಿಯದೆ, ಅಜ್ಞಾನದಿಂದ ಜಗಜ್ಜನಕನಾದ ನಿನ್ನನ್ನು ಪೋಷ್ಯಗನೆಂದು ಅನ್ನುತ್ತ ನನ್ನ ಅಧಿಕಾರವನ್ನು ತೋರಿಸಿದೆನು. ಕೃಪಾನಿಧೇ! ನೀನು ನನ್ನ ಯಾವ ತಪ್ಪುಗಳನ್ನೂ ಮನಸ್ಸಿ

ನಲ್ಲಿ ಹಿಡಿಯುವೆ ನನಗೆ ಮೋಕ್ಷಸುಖವನ್ನು ದಯಪಾಲಿಸಿ ರಕ್ಷಿಸು.' ಎಂದು ಬೇಡಿಕೊಂಡನು.

ಆದಕ್ಕೆ ಶಂಕರನು:— ಪರ್ವತಪ್ಪಾ, ಭಕ್ತರು ಕುಣಿಸಿದ ಹಾಗೆ ಕುಣಿಯುವದೇ ನನ್ನ ಕರ್ತವ್ಯವಾಗಿರುವದು. ಯಾವಾಗಲೂ ಅವರ ಸಂಗಡಲೇ ಇರುವೆನು. ಭಕ್ತರು ನನ್ನನ್ನು ನಿರ್ಗುಣನೆಂದರೆ ನಿರ್ಗುಣನೂ, ಸಗುಣನೆಂದರೆ ಸಗುಣನೂ ಆಗಿರುವೆನು. ನಿಜಭಕ್ತರು ನನ್ನನ್ನು ಶಿವನೆಂದು ಧ್ಯಾನಿಸಿದರೆ ಶಿವರೂಪದಿಂದಲೂ, ವಿಷ್ಣುವೆಂದು ಧ್ಯಾನಿಸಿದರೆ ವಿಷ್ಣುರೂಪಿನಿಂದಲೂ, ಶಕ್ತಿಯೆಂದು ಧ್ಯಾನಿಸಿದರೆ ಶಕ್ತಿರೂಪಿನಿಂದಲೂ ಪ್ರಕಟನಾಗಿ ಅವರ ಅಭೀಷ್ಟೆಯನ್ನು ಪೂರ್ಣ ಮಾಡುವೆನು. ನಾನು ಅನೇಕ ರೂಪಗಳನ್ನು ಧರಿಸುವ ಹಾಗೆ ಮಾಡುವವರು ಭಕ್ತರೇ ಆಗಿರುವರು. ಅದರಂತೆ ಹಾವಕ್ಕನು ನನ್ನನ್ನು ಮೌನಲಿಂಗನೆಂದು ಪೂಜಿಸಿದ ಕಾರಣ ಮೌನರೂಪಿನಿಂದ ಅವತರಿಸಿರುವೆನು. ನೀನಾದರೂ ಶಿವನೆಂದು ಧ್ಯಾನಿಸಿದ ಕಾರಣ ಈ ರೂಪಿನಿಂದ ಪ್ರಸನ್ನನಾಗಿರುವೆನು. ಭಕ್ತಶಿರೋಮಣಿ, ನೀನು ಮೋಕ್ಷಾಪೇಕ್ಷೆಯಿಂದ ನನ್ನನ್ನು ಧ್ಯಾನಿಸಿದವನಲ್ಲ. ಐಶ್ವರ್ಯಾಪೇಕ್ಷೆಯಿಂದ ಧ್ಯಾನಿಸಿದವನು. ಆದಕಾರಣ ಸದ್ಯಕ್ಕೆ ನಿನಗೆ ಐಶ್ವರ್ಯವನ್ನೇ ಕೊಡುವೆನು ನಂತರ ನೀನು ಮೋಕ್ಷಾಪೇಕ್ಷೆಯಿಂದ ನನ್ನನ್ನು ಧ್ಯಾನಿಸಿದರೆ ಮೋಕ್ಷಸುಖವನ್ನು ಕೊಡುವೆನು, ಎಂದು ಹೇಳಿ, ತಿರುಗಿ ಪರ್ವತಪ್ಪನು ಮಾತಾಡಬೇಕೆನ್ನುವಷ್ಟರಲ್ಲಿಯೇ ಮೌನೇಶರೂಪಿನಿಂದ ಅವನೆದುರಿಗೆ ನಿಂತಿದ್ದನು.

ಪರ್ವತಪ್ಪನು ಮೌನೇಶನ ಚರಣಗಳಿಗೆರಗಿ:—ಸದ್ಗುರೋ! ನಾನು ನಿನ್ನನ್ನು ಮೋಕ್ಷಸುಖವನ್ನೇ ಯಾಚಿಸುತ್ತಿರಲು, ಅಸ್ಥಿರವಾದ ಐಶ್ವರ್ಯವನ್ನು ಕರುಣಿಸುವೆಯಲ್ಲ! ನಿಜಭಕ್ತರು ನಿನ್ನ ಪಾದಾರವಿಂದಗಳನ್ನು ಹೊಂದುವದೇ ಪರಮೈಶ್ವರ್ಯವೆಂದು ಭಾವಿಸುವರು. ನಾನು ಮಾತ್ರ ಹಾಗೆ ಮಾಡದೆ ಅಜ್ಞಾನದಿಂದ ಮೊದಲು ಐಶ್ವರ್ಯವನ್ನು ಅಪೇಕ್ಷಿಸಿದ್ದು ನಿಜವು. ಮುಂದಾದರೂ ನಿಜ ಮೋಕ್ಷವನ್ನು ಕೊಟ್ಟು ಉದ್ಧರಿಸುವದು ನಿನ್ನನ್ನೇ ಹೊಂದಿರುವದು, ಎಂದು ಪ್ರಾರ್ಥಿಸಿದನು.

ಮೌನೇಶನು: – ತಥಾಸ್ತು, ಎಂದು ಅನ್ನುತ್ತ ಅದೃಶ್ಯನಾದನು.

ಪರ್ವತಪ್ಪನು ಮೌನೇಶನ ಮಹಿಮೆಯನ್ನು ಕೊಂಡಾಡುತ್ತ ಆನಂದ ನಿದ್ರೆಯಲ್ಲಿ ಅಂದಿನ ರಾತ್ರಿಯನ್ನು ಕಳೆದು ಎಂದಿನಂತೆ ಬೆಳಗಿನ ಝಾವ ದಲ್ಲೆದ್ದು ನೋಡುತ್ತಾನೆ, ಅವನ ಮೊದಲಿದ್ದ ಸಣ್ಣದಾದ ಮುರುಕ ಮನೆ ಇಲ್ಲದಂತಾಗಿ ಭವ್ಯವಾದ ಅರಮನೆಯು ಶೋಭಿಸುತ್ತಿತ್ತು. ಅದರಲ್ಲಿ ನಾನಾ ತರದ ಧಾನ್ಯ ತುಂಬಿದ ಚೀಲಗಳು ಮನೋಹರವಾಗಿ ಕಾಣಿಸುತ್ತಿದ್ದವು!!

ಹೀಗೆ ಐಶ್ವರ್ಯಮಯವಾಗಿರುವ ಮನೆಯನ್ನು ನೋಡಿ ಪರ್ವತ ಪ್ಪನು ಆಶ್ಚರ್ಯಭರಿತನಾಗಿ–ಅಹಾ! ಪರಮಾತ್ಮಸ್ವರೂಪನಾದ ಮೌನೇಶಾ, ನಿನ್ನ ಮಹಿಮೆಯು ಅಗಾಧವಾದದ್ದು. ನಿತ್ಯದಲ್ಲಿಯೂ ದರಿದ್ರಾವಸ್ಥೆಯಿಂದ ಬಳಲುತ್ತಿರುವ ಅನಾಥನಾದ ನನಗೆ ಅಪಾರವಾದ ಸಂಪತ್ತನ್ನು ಕರುಣಿಸಿದೆ; ಆದ್ದರಿಂದ ನಿನ್ನ ಭಕ್ತವಾತ್ಸಲ್ಯತೆಯನ್ನು ಎಷ್ಟು ವರ್ಣಿಸಿದರೂ ತೀರದಾಗಿದೆ, ಎಂದು ಹೊಗಳುತ್ತ ಹೆಂಡತಿಗೆ ಈ ಸಮಾಚಾರವನ್ನು ತಿಳಿಸಬೇಕೆಂದು ಅರ ಮನೆಯ ಕೋಣೆಯೊಳಗೆ ಪ್ರವೇಶ ಮಾಡಿ ನೋಡಲು, ಮೇನಕಾದೇವಿಯು ಅಮೌಲ್ಯವಾದ ವಸ್ತ್ರಾಭರಣಗಳಿಂದ ಭೂಷಿತಳಾಗಿ ತೂಗುಮಂಚದ ಮೇಲೆ ಮಲಗಿದ್ದಳು. ಪರ್ವತಪ್ಪನು ಮೌನೇಶ್ವರನನ್ನು ಮನಸ್ಸಿನಲ್ಲಿ ಸಮುಸ್ಕರಿ ಸುತ್ತ ಆನಂದದಿಂದ ಹೆಂಡತಿಯನ್ನು ಕುರಿತು:—ಪ್ರಿಯೇ, ಏಳು-ಏಳು. ನಿನ್ನ ದಾರಿದ್ರ್ಯಾವಸ್ಥೆಯನ್ನು ನಾಶಮಾಡಿದ ಪರಮೇಶ್ವರನನ್ನು ಧ್ಯಾನಿಸು, ಎಂದು ಕರೆದನು.

ಪತಿಯ ಈ ವಾಕ್ಯವು ಕಿವಿಗೆ ಬಿದ್ದಾಕ್ಷಣವೇ ಮೇನಕಾದೇವಿಯು: ಎಷ್ಟು ಹೊತ್ತು ಮಲಗಿದೆನಲ್ಲ! ಎಂದು ಗಾಬರಿಯಿಂದ ಮೇಲಕ್ಕೆದ್ದಳು. ಆಗ ತಾನು ಬಂಗಾರದ ಸರಪಳಿಯಿಂದ ತೂಗು ಹಾಕಿದ ಮಂಚದ ಮೇಲೆ ಮಲ ಗಿರುವದನ್ನೂ, ತನ್ನ ಮೈ ಮೇಲೆ ಝಗ ಝಗಿಸುತ್ತಿರುವ ರತ್ನಖಚಿತವಾದ ಆಭರಣಗಳು ಇರುವದನ್ನೂ, ಜರತಾರೀ ಅಂಚಿನ ರೇಶಿಮೆಯ ಸೀರೆ ಯನ್ನು ಉಟ್ಟಿರುವದನ್ನೂ ಕಂಡು ಹೌಹಾರಿ ಹುಚ್ಚಳಂತೆ ಅತ್ತಿತ್ತ ನೋಡ ಹತ್ತಿದಳು!

ಹೆಂಡತಿಯ ಈ ಸ್ಥಿತಿಯನ್ನು ನೋಡಿ ಪರ್ವತಪ್ಪನು:—ಪ್ರಿಯೇ, ಕರುಣಾಸಾಗರನಾದ ಮೌನೇಶನು ನಮಗೆ ಸ್ಥಿರಸಂಪತ್ತನ್ನು ಕೊಟ್ಟಿರುವನು. ಇದುವರೆಗೂ ನಾವು ಆ ಮಹಿಮನನ್ನು ಮನುಷ್ಯನೆಂದು ತಿಳಿದಿದ್ದೆವು. ಆತ

ಸಾಕ್ಷಾತ್ ಪರಮೇಶ್ವರನಿರುವನು, ಎಂದು ನಡೆದ ಸಂಗತಿಯನ್ನೆಲ್ಲ ಹೇಳಿ, ಸಮಾಧಾನಗೊಳಿಸಿ ಸುಖದಿಂದ ಕಾಲಕಳೆಯುತ್ತಿದರು.

ಅವನ್ನು ಕಂಡು ಊರೊಳಗಿನ ಜನರೆಲ್ಲರೂ ಪರಮಾಶ್ಚರ್ಯ ಭರಿತರಾಗಿ:—ಅಹಾ! ಪರ್ವತಪ್ಪನು ಬಹು ದರಿದ್ರನು. ಇಂಥವನು ಒಮ್ಮಿಂದೊಮ್ಮೆಲೆ ಎಷ್ಟು ಐಶ್ವರ್ಯವಂತನಾದನಲ್ಲ!! ಇದಕ್ಕೆ ಕಾರಣವೇನಿರಬಹುದ? ಈತನ ಸದ್ವರ್ತನನವೇ ಹೀಗೆ ಮಾಡಿಸಿರಬಹುದಲ್ಲವೇ? ಎಂದು ಮಾತಾಡುತ್ತಿದ್ದರು.

ಬರಬರುತ್ತ ಪರ್ವತಪ್ಪನ ಐಶ್ವರ್ಯಕ್ಕೆ ಕಳೆಯೇರಿ ಎಲ್ಲಿ ನೋಡಿದರೂ ಪರ್ವತಪ್ಪನ ಹೊಲಗಳೇ, ಎಲ್ಲಿ ನೋಡಿದರೂ ಪರ್ವತಪ್ಪನ ಮನೆಗಳೇ, ಎಲ್ಲಿ ನೋಡಿದರೂ ಪರ್ವತಪ್ಪನ ಆಳುಗಳೇ, ಎಲ್ಲಿ ನೋಡಿದರೂ ಪರ್ವತಪ್ಪನ ದನಕರುಗಳೇ ಕಾಣಿಸುತ್ತಿದ್ದವು!

ಈ ಮೇರೆಗೆ ಸಕಲ ಸಂಪತ್ತುಗಳಿಂದ ಕೂಡಿ ಮೆರೆಯುತ್ತಿರುವ ಪರ್ವತಪ್ಪನು ಒಂದು ದಿನ ತನ್ನ ಮನಸ್ಸಿನಲ್ಲಿ:—ನನಗೆ ದೇವರ ದಯೆಯಿಂದ ಇಷ್ಟು ಐಶ್ವರ್ಯ ಪ್ರಾಪ್ತಿಯಾಗಿದ್ದರೂ ನಮ್ಮ ಮನೆದೇವರಾದ ರಾಚೋಟಿಯ ಶ್ರೀ ವೀರಭದ್ರದೇವರ ರಥೋತ್ಸವಕ್ಕೆ ಕುಟುಂಬಸಹಿತವಾಗಿ ಹೋಗಲಿಲ್ಲ, ಇನ್ನಾದರೂ ಹೋಗಿ ದೇವರಿಗೆ ಹರಕೆಯನ್ನೊಪ್ಪಿಸಿ ಜಂಗಮಾರ್ಚನೆ ಮಾಡಿ ಮೃಷ್ಟಾನ್ನದಿಂದ ತೃಪ್ತಿಪಡಿಸಿ ಬರಬೇಕೆಂದು ಯೋಚಿಸಿ, ಎಲ್ಲ ಸಾಹಿತ್ಯವನ್ನು ಸಿದ್ಧಪಡಿಸಿ ಇನ್ನೂರು ಎತ್ತುಗಳಿಂದಲೂ, ಐದು ನೂರು ಜನ ಸೇವಕರಿಂದಲೂ, ತನ್ನ ಬಂಧು-ಬಾಂಧವರಿಂದಲೂ ಭೇರಿ, ನಗಾರೆ, ಚಿನ್ನಾಳೆ ಮೊದಲಾದ ವಾದ್ಯಗಳಿಂದಲೂ ಕೂಡಿ ಬಂಡಿಗಳಲ್ಲಿ ಸಕಲಸನ್ನಾಹಗಳನ್ನು ಹೇರಿಸಿಕೊಂಡು ಕುಟುಂಬ ಸಹಿತವಾಗಿ ಹೊರಟನು.

ಸ್ವಲ್ಪ ದೂರ ಹೋದನಂತರ ಮೌನೇಶನ ನೆನಪಾಗಿ:—ಅಹಾ! ಸಕಲ ಸಂಪದವನ್ನು ಕರುಣಿಸಿರುವ ಮೌನದೇವನನ್ನೇ ಮರೆತು ಬಂದೆನಲ್ಲ! ಆತನನ್ನು ಬಿಟ್ಟು ಹೋಗುವದು ನನಗೆ ಭೂಷಣವಲ್ಲ. ಹೀಗೆಂದು ತಿರುಗಿ ಬಂದು:—ಮೌನೇಶಾ, ರಾಚೋಟಿಯ ಶ್ರೀ ವೀರಭದ್ರದೇವರ ಜಾತ್ರೆಗೆ ಕುಟುಂಬ ಸಹಿತವಾಗಿ ಹೊರಟಿರುವೆನು ನೀನಾದರೂ ಆ ಕ್ಷೇತ್ರಕ್ಕೆ ಬಂದು ನಾನು ಮಾಡುವ ಸೇವೆಯನ್ನು ಕೈಕೊಳ್ಳಬೇಕು, ಎಂದು ಹೇಳಿದನು.

ಆ ಮಾತಿಗೆ ಮೌನೇಶನು:-ಅಜ್ಜಾ, ಶ್ರೀವೀರಭದ್ರದೇವರ ರಥೋತ್ಸವವು ಇನ್ನೂ ಒಂದು ತಿಂಗಳು ಇರುವದು. ಇಷ್ಟು ಮುಂಚಿತವಾಗಿ ಏಕೆ ಬರಬೇಕು? ರಥೋತ್ಸವದ ದಿವಸ ಬರುತ್ತೇನೆ. ನೀನು ನನ್ನ ಮಾತುಗಳನ್ನು ನಂಬಿ ಹೋಗು, ಎಂದು ಹೇಳಿದನು.

ಆಗ ಮೌನನ ತಂದೆ ತಾಯಿಗಳು:—ತಮ್ಮಾ, ರಾಚೋಟಿಯ ಕ್ಷೇತ್ರ ಇಲ್ಲಿಗೆ ಮೂವತ್ತು ಗಾವುದ ದೂರವಿದೆ. ಇಷ್ಟು ದೂರವಿರುವ ಆ ಕ್ಷೇತ್ರಕ್ಕೆ ನೀನೊಬ್ಬನೇ ನಡೆದು ಹೋಗುವದಾದರೂ ಹೇಗೆ? ನಿಮ್ಮ ಅಜ್ಜನ ಸಂಗತ ಬಂಡಿಯ ಮೇಲೆ ಕುಳಿತುಕೊಂಡು ಹೋಗು ಶಿವಸುತನಾದ ಆ ವೀರಭದ್ರ ಸ್ವಾಮಿಯೇ ನಮ್ಮ ಮನೆದೇವರು. ಆತನಿಗೆ ಪ್ರತಿ ವರುಷ ಮೊಸಲ ತುಪ್ಪವನ್ನೊಯ್ದು ಅಲ್ಲಿ ಪರವ ನ್ನವನ್ನು ಮಾಡಿ ನೈವೇದ್ಯ ಸಮರ್ಪಣ ಮಾಡುವದು ನಮ್ಮ ನಿಯಮವು. ಆದಕಾರಣ ಈಗ ನೀನು ಮೊಸಲ ತುಪ್ಪವನ್ನು ತೆಗೆದುಕೊಂಡು ಹೋಗಿ, ದಕ್ಷಾರಿಗೆ ಒಪ್ಪಿಸಿ ತಿರುಗಿ ಬಾ, ಎಂದು ಅಂದರು.

ಆದಕ್ಕೆ ಮೌನೇಶನು:—ನಾನು ಮಾತ್ರ ಇವತ್ತಿನ ದಿವಸ ಹೋಗುವದಿಲ್ಲ. ರಥೋತ್ಸವದ ದಿವಸ ಖಂಡಿತವಾಗಿ ಹೋಗುತ್ತೇನೆ, ಎಂದೆನ್ನಲು,

ತಂದೆ-ತಾಯಿಗಳು:—ಆಯಿತು. ಮೌನೇಶಾ, ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡು, ಎಂದಂದು ಸುಮ್ಮನಾದರು.

ಪರ್ವತಪ್ಪನು:—ಮೌನೇಶಾ, ನೀನು ಸಾಕ್ಷಾತ್ ಪರಮೇಶ್ವರನಿರುವೆಯಾದ್ದರಿಂದ ಹೆಚ್ಚಿಗೆ ಹೇಳಲಿಕ್ಕೆ ನನಗೆ ಶಕ್ತಿ ಸಾಲದು. ಈ ಸೇವಕನ ಮೇಲೆ ಕೃಪೆಯಿಟ್ಟು ನೀನು ಮಾತ್ರ ನಿಶ್ಚಯವಾಗಿ ಬರಬೇಕು, ಎಂದು ಕೈ ಮುಗಿದು, ತನ್ನ ಪರಿಶೆಯನ್ನು ಕರೆದುಕೊಂಡು ಹೆಜ್ಜೆಹೆಜ್ಜೆಗೆ:-ಮಹಾತ್ಮನಾದ ವೀರಭದ್ರೇಶಾ, ಉಘೆ, ಉಘೆ; ಎಂದು ಅನ್ನುತ್ತ, ಮನಸ್ಸಿಗೆ ನಿರ್ಮಲವಾದ ಸ್ಥಳಗಳಲ್ಲಿ ವಸತಿಯನ್ನು ಮಾಡುತ್ತ, ರಾಚೋಟಿಯ ಕ್ಷೇತ್ರಕ್ಕೆ ಹೋಗಿ ವೀರಭದ್ರದೇವರ ಗುಡಿಯ ಸಮೀಪದಲ್ಲಿ ಗುಡಾರಗಳನ್ನು ಹೊಡೆಸಿ ತನ್ನ ಪರಿವಾರವನ್ನೆಲ್ಲ ಇಳಿಸಿದನು.

ಇತ್ತ ಮೌನೇಶನು ,ಗೋನಾಲದಲ್ಲಿಯೇ ಇಪ್ಪತ್ತೊಂಬತ್ತು ದಿವಸ ಕಾಲ ಕಳೆದು ಮೂವತ್ತನೇ ದಿವಸ ತಂದೆ-ತಾಯಿಗಳನ್ನು ಕುರಿತು—ನಾನು ಈ ದಿವಸ ರಾಚೋಟಿಯ ವೀರಭದ್ರದೇವರ ರಥೋತ್ಸವಕ್ಕೆ ಹೊರ

ಡುವೆನು. ನಿಮ್ಮ ಮೀಸಲ ತುಪ್ಪವನ್ನು ಕೊಡಿರಿ. ಅದನ್ನು ದೇವರಿಗೆ ಅರ್ಪಿಸಿ ಬರುತ್ತೇನೆ, ಎಂದನು.

ಆ ಮಾತಿಗೆ ತಂದೆ-ತಾಯಿಗಳು:— ಮೌನೇಶಾ, ಶ್ರೀ ವೀರೇಶ್ವರನ ರಥೋತ್ಸವವು ಇಂದೇ ಇರುವದು; ಇದಲ್ಲದೆ ಮೂವತ್ತು ಯೋಜನ* ದೂರ ವಿರುವ ಆ ಕ್ಷೇತ್ರಕ್ಕೆ ನೀನು ಇಂದೇ ಹೇಗೆ ಹೋಗುವಿ? ಎಂದೆನ್ನಲು,

ಮೌನೇಶನು:— ಜನ್ಮದಾತೃಗಳೇ, ದಕ್ಷಾರಿಯಾದ ಶ್ರೀ ವೀರಭದ್ರ ದೇವನ ಕೃಪಾಕಟಾಕ್ಷವು ನನ್ನ ಮೇಲಿರುವದರಿಂದ ಎಷ್ಟು ದೂರವಿದ್ದರೂ ಆಯಾಸವಿಲ್ಲದೆ ಇಂದಿನ ದಿನವೇ ರಥೋತ್ಸವದ ವೇಳೆಗೆ ಸರಿಯಾಗಿ ನಾನು ಅಲ್ಲಿಗೆ ಹೋಗುವೆನು ನೀವು ಮಾತ್ರ ಯಾವುದನ್ನೂ ಯೋಚಿಸದೆ ಮೀಸಲ ತುಪ್ಪವನ್ನು ಕೊಡಿರಿ, ಎಂದನು.

ತಂದೆ-ತಾಯಿಗಳು:— ಮೌನೇಶಾ, ಜಗದೊಡೆಯನಾದ ನಿನಗೆ ಹೇಳುವದಾದರೂ ಏನಿದೆ? ನಿನ್ನ ಮನಬಂದ ಹಾಗೆ ಮಾಡು, ಎಂದು ತುಪ್ಪ ತುಂಬಿದ ತಂಬಿಗೆಯನ್ನು ಮೌನೇಶನ ಕೈಯಲ್ಲಿ ಕೊಡಲು, ಮೌನೇಶ್ವರನು ತಂಬಿಗೆಯ ಹಗ್ಗವನ್ನು ಹಿಡಿದುಕೊಂಡು ಹೊರಟನು.

ಸೃಷ್ಟಿ-ಸ್ಥಿತಿ-ಲಯ ಇವುಗಳ ಕಾರಣಕರ್ತನಾದ ಮೌನೇಶ್ವರನಿಗೆ ರಾಚೋಟಿಯ ಕ್ಷೇತ್ರಕ್ಕೆ ಹೋಗಲಿಕ್ಕೆ ಎಷ್ಟು ದಿವಸ ಬೇಕು? ನಿಮಿಷ ಮಾತ್ರವಲ್ಲಿಯೇ ಅವನು ಆ ಕ್ಷೇತ್ರಕ್ಕೆ ಹೋಗಿ, ಜಾತ್ರೆಯನ್ನೆಲ್ಲ ನೋಡಿ ಶ್ರೀ ವೀರಭದ್ರದೇವರ ದರ್ಶನ ಮಾಡಿಕೊಂಡು, ಪರ್ವತಪ್ಪನಿದ್ದ ಸ್ಥಳಕ್ಕೆ ಬಂದನು.

ಪರ್ವತಪ್ಪನು ಮೌನೇಶನನ್ನು ನೋಡಿ ಪ್ರೀತಿಯಿಂದ ಬಿಗಿವಪ್ಪಿ:— ಮೌನಲಿಂಗಾ, ನೀನು ಎಂದು ಹೊರಟಿದ್ದಿ? ಎಂದು ಕೇಳಲು,

ಮೌನೇಶನು:— ಅಜ್ಜಾ, ಇಂದೇ ಹೊರಟಿದ್ದೆನು, ಎಂದು ಹೇಳಿದನು

ಆ ಮಾತಿಗೆ ಪರ್ವತಪ್ಪನು ಬೆರಗಾಗಿ:-ದೇವಾ! ನಿನ್ನ ಮಹಿಮೆಯನ್ನು ಪಾಮರನಾದ ನನ್ನಿಂದ ತಿಳಿಯಲು ಸಾಧ್ಯವೇ? ಎಂದು ಹೊಗಳಿದನು.

ಆಗ ಮೌನೇಶನು:— ಅಜ್ಜಾ, ನಾನು ಶ್ರೀ ವೀರಭದ್ರದೇವರಿಗೆ ಪರ ಮಾನ್ನದ ನೈವೇದ್ಯವನ್ನೂ, ತಂದೆ-ತಾಯಿಗಳು ಕೊಟ್ಟಿರುವ ಈ ಮೀಸಲ ತುಪ್ಪವನ್ನೂ ಅರ್ಪಿಸಬೇಕಾಗಿದೆ, ಎಂದು ಅನ್ನುತ್ತ ಒಂದು ಪಾತ್ರೆಯಲ್ಲಿ

ಸೀರನ್ನು ಹಾಕಿ ತಾಳಿಯು ಮೇಲಿಟ್ಟು ಅದರಲ್ಲಿ ಒಂದು ಅಕ್ಕೀಕಾಳನ್ನು ಹಾಕಲು ಅವರ ತುಂಬ ಪರಮಾನ್ನವಾಗಿ ಘಮಘಮಿಸಹತ್ತಿತು.

ಕೂಡಲೆ ಅದನ್ನು ತೆಗೆದುಕೊಂಡು ಪರ್ವತಪ್ಪನೊಡನೆ ದೇವಾಲಯಕ್ಕೆ ಬರಲು ಅಷ್ಟರಲ್ಲಿ ಪೂಜಾರಿಯು ಗುಡಿಯ ಕದವನ್ನಿಕ್ಕಿ ಕೀಲಿಯನ್ನು ಹಾಕಿಕೊಂಡು ಹೋಗಿದ್ದನು ಅದನ್ನು ನೋಡಿ ಮೌನೇಶನು:- "ಜನ್ನಿಗನಾದ ಕಾಚಕೋಟಿಯ ಶರಭನೇ, ನಿನ್ನ ಸಲುವಾಗಿ ಪರಮಾನ್ನದ ನೈವೇದ್ಯವನ್ನು ತಂದಿರುವೆನು; ನೀನು ಬೇಗನೆ ಕದವನ್ನು ತೆರೆದು ಇದನ್ನು ಸಲ್ಲಿಸು" ಎಂದು ಅಂದನು.

ದೇವಾಧಿದೇವನೂ, ಜಗನ್ನಿಯಾಮಕನೂ, ಅಪಾರ ಮಹಿಮನೂ ಆದ ಮೌನದೇವನು ಹೀಗೆ ಅಂದಾಕ್ಷಣವೇ ದೇವಾಲಯದ ಕೀಲಿಯು ಚಟ್ಟೆಂದು ಮುರಿದು ಬಿದ್ದು ಕದವು ತೆರೆಯಿತು

ಒಳಗಿನ ಶಿಲಾವಿಗ್ರಹವಾದ ವೀರಭದ್ರದೇವನು:-"ಸ್ವಾಮಿ! ಜಾತ್ರೆಯ ಜನರೆಲ್ಲರೂ ಕೊಟ್ಟ ನೈವೇದ್ಯದಿಂದ ನನಗೆ ತೃಪ್ತಿಯಾಗಲಿಲ್ಲ; ಆದ ಕಾರಣ ನಿನ್ನ ಪ್ರಸಾದವನ್ನು ಉಣಿಸಿ ನನ್ನ ಹಸಿವೆಯನ್ನು ನಿವಾರಣ ಮಾಡು" ಎಂದು ಕೈ ಮುಗಿದು ಹೇಳಿದನು.

ಆಗ ಮೌನೇಶನು ತಾನು ತಂದಿರುವ ಪರಮಾನ್ನವನ್ನೂ, ಮೊಸಲ ತುಪ್ಪವನ್ನೂ ಕೈ ಮುಟ್ಟಿ ಉಣಿಸಿದನು. ಜಗದ್ಗುರುವು ಅಮೃತಹಸ್ತದಿಂದ ಉಣಿಸಿದ ಪರಮಾನ್ನವನ್ನುಂಡು ಶರಭಮೂರ್ತಿಯು ಹೊಟ್ಟೆ ತುಂಬಿ ತೇಗಿದನು.

ಇದನ್ನು ನೋಡಿದ ಜನರೆಲ್ಲರೂ ಬೆರಗಾಗಿ ಅಹಾ! ಈ ಮಹಾತ್ಮನು ಎಲ್ಲದೇವ ದೇವನಾದ ಮಲ್ಲಿಕಾರ್ಜುನನೇ ಸರಿ!! ಆದ್ದರಿಂದಲೇ ಕಲ್ಲ ದೇವರನ್ನು ಮಾತಾಡಿಸಿ ಕೈಮುಟ್ಟಿ ಉಣಿಸಿದನು, ಎಂದು ಅನ್ನುತ್ತ ಮೌನೇಶನ ಚರಣಾರವಿಂದಗಳಿಗೆ ದೀರ್ಘದಂಡ ನಮಸ್ಕಾರ ಮಾಡುತ್ತಿದ್ದರು.

ಪರ್ವತಪ್ಪನು ಮೌನಪರಮಾತ್ಮನ ಪಾದಗಳಿಗೆರಗಿ—ಸದ್ಗುರೋ! ತ್ರಾಹಿ-ತ್ರಾಹಿ!! ನೀನು ದೇವರ ದೇವನೂ, ಪಂಚಾಕ್ಷರ ರೂಪನೂ, ಪರಮ ಪವಿತ್ರನೂ ಆಗಿರುವೆ. ನಿನ್ನ ಘನಮಹಿಮೆಯನ್ನು ಎಷ್ಟು ವರ್ಣಿಸಿದರೂ ತೀರದಾಗಿದೆ. ಕೃಪಾಘನಾ, ನಿನ್ನ ಅವತಾರವು ಭಕ್ತರನ್ನು ಉದ್ಧರಿಸಲಿಕ್ಕಾ

ಗಿಯೇ ಆಗಿದೆ. ಇರಲಿ. ನನ್ನ ಬಿನ್ನಹವನ್ನು ಚಿತ್ತವಿಟ್ಟು ಲಾಲಿಸಬೇಕು. ಅದೇನಂದರೆ—ಒಂದು ಲಕ್ಷ ಸಂಖ್ಯೆಯ ಜಂಗಮ ಸಮೂಹಕ್ಕೆ ಅನ್ನ ಸಂತರ್ಪಣೆ ಮಾಡಿಸಬೇಕೆಂಬ ಉದ್ದೇಶದಿಂದ ಎಲ್ಲ ಅಡಿಗೆಯನ್ನು ಸಿದ್ಧ ಮಾಡಿರುವೆನು ಕಾರಣ ತಾವು ಅಲ್ಲಿಗೆ ದಯಮಾಡಿಸಿ ಈ ಸೇವಕನ ಅಭೀಷ್ಟೆಯನ್ನು ಪೂರ್ಣ ಮಾಡಬೇಕು, ಎಂದು ಬೇಡಿಕೊಂಡನು. ಮೌನೇಶನು-ಅಜ್ಞಾ, ನಿನ್ನ ಮಾತಿಗೆ ನಾನೆಲ್ಲಿ ಒಲ್ಲೆನೆನ್ನುತ್ತೇನೆ? ಎಲ್ಲ ಗಣಸಮೂಹವನ್ನು ಕರೆದು ಅವರಿಗೆ ಪೂಜೆಯ ಸಾಮಾನ ಗಳನ್ನು ಸಿದ್ಧಪಡಿಸು; ಅಷ್ಟರಲ್ಲಿ ನಿನ್ನ ಇಷ್ಟದಂತೆ ನಾನೂ ಬರುತ್ತೇನೆ, ಎಂದು ಹೇಳುತ್ತ ತಿರುಗಿ ಪರ್ವತಪ್ಪನು ಮಾತಾಡಬೇಕೆನ್ನುವಷ್ಟರಲ್ಲಿಯೇ ಅದೃಶ್ಯನಾದನು. ಆಗ ಪರ್ವತಪ್ಪನು ಗುರ್ವಾಜ್ಞೆಯಂತೆ ತನ್ನ ಬಿಡಾರಕ್ಕೆ ತೆರಳಿದನೆಂಬಲ್ಲಿಗೆ ನಾಲ್ಕನೇ ಅಧ್ಯಾಯ ಸಂಪೂರ್ಣವು.

——

ಶ್ರೀ ಮೌನಗುರು ಪರಬ್ರಹ್ಮಣೇ ನಮಃ॥

ಶ್ರೀ ಗಣೇಶಾಯ ನಮಃ॥

# ಐದನೆಯ ಅಧ್ಯಾಯ



— ರಾಚೋಟಿಯಲ್ಲಿ ಲಿಂಗಮಹಾತ್ಮೆಯನ್ನು ತೋರಿಸಿದ್ದು. —

ಭಕ್ತಾಗ್ರಣಿಯಾದ ಪರ್ವತಪ್ಪನು ಒಂದು ಲಕ್ಷ ಜಂಗಮರಿಗೆ ಅನ್ನ ಸಂತರ್ಪಣೆ ಮಾಡಬೇಕೆಂಬ ಉದ್ದೇಶದಿಂದ ರಾಚೋಟಿಯ ಕ್ಷೇತ್ರವನ್ನೆಲ್ಲ ತಿರುಗಿ ಅಲ್ಲಿರುವ ಜಂಗಮ ಸಮೂಹಕ್ಕೆ ಬಿನ್ನಹ ಮಾಡಿ ಕರೆತಂದು ಲಕ್ಷಕ್ಕೆ ಭರ್ತಿ ಮಾಡಿ, ಮಲ್ಲಿಗೆ, ಮಂದಾರ, ಪಾರಿಜಾತ, ಜಾಜಿ, ಕೇತಕಿ, ಸಂಪಿಗೆ, ಕಣಗಲು. ಬಿಲ್ವ, ಗಂಧ, ಅಕ್ಷತೆ, ನಿರ್ಮಲೋದಕ ಮೊದಲಾದ ಪೂಜಾ ಸಾಹಿತ್ಯಗಳನ್ನೆಲ್ಲ ಸಿದ್ಧಗೊಳಿಸಿ ಗಣಸಮೂಹವನ್ನು ಕುರಿತು-

ಮಹಾಸ್ವಾಮಿಗಳೇ, ಅಡಿಗೆಯು ಸಿದ್ಧವಾಗಿದೆ. ಇನ್ನು ತಡವೇತಕ್ಕೆ? ಸ್ನಾನಕ್ಕೇಳಿರಿ, ಎಂದು ಹೇಳಲು, ಗಣಸಮೂಹವು ಜಳಕವನ್ನು ಮಾಡಿ ಮಡಿ ಬಟ್ಟೆಗಳನ್ನು ಧರಿಸಿಕೊಂಡು, ತಮ್ಮ ವಸ್ತ್ರಗಳಲ್ಲಿಯೂ, ಕರಡಿಗೆಗಳಲ್ಲಿಯೂ ಇರುವ ಶಿವಲಿಂಗಗಳನ್ನು ಹಸ್ತದಲ್ಲಿರಿಸಿಕೊಂಡು ನಿರ್ಮಲೋದಕದಿಂದ ಮಜ್ಜನ ಮಾಡಿ, ಭಸ್ಮ, ಗಂಧ, ಅಕ್ಷತೆ, ಪತ್ರ, ಪುಷ್ಪ, ಧೂಪ, ದೀಪ, ನೈವೇದ್ಯ ಮೊದಲಾದ ಉಪಚಾರಗಳಿಂದ ಪೂಜಿಸುತ್ತ, ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿದ್ದಿತು.

ಈ ಮೇರೆಗೆ ಜಂಗಮಸಮೂಹದ ಲಿಂಗಪೂಜೆಯು ನಡೆದಿರಲು, ಪರ್ವತಪ್ಪನು ತನ್ನ ಮನಸ್ಸಿನಲ್ಲಿ—ಅಹಾ! ಸದ್ಗುರುವಾದ ಮೌನಲಿಂಗನು ಬರುವೆನೆಂದು ವಚನಕೊಟ್ಟು ಇದುವರೆಗೂ ಯಾಕೆ ಬಂದಿರಲಿಕ್ಕಿಲ್ಲ? ಆತನು ಪರಮ ದಯಾಳುವೂ, ಐಶ್ವರ್ಯದಾತೃವೂ, ಗುರುವಿನ ಗುರುವೂ ಆಗಿರುವನು. ಇಂಥ ಮಹಾಮಹಿಮನಾದ ಸ್ವಾಮಿಯು ಈಗಿನ ಆಯತ ವೇಳೆಯಲ್ಲಿ ಇಲ್ಲದೆ ಹೋದನಲ್ಲ! ಆತನು ಒರದಿದ್ದರೆ ಈ ಕಾರ್ಯವಾದರೂ ಹೇಗೆ ಸಫಲವಾಗುವದು? ಹೀಗೆಂದು ಚಿಂತಿಸುತ್ತಿದ್ದನು.

ಅಷ್ಟರಲ್ಲಿಯೇ ನೆನಸಿದವರ ಮನಸಿನಲ್ಲಿರುವನೆಂಬ ಬಿರುದುಳ್ಳ ಮೌನ ಪರಮಾತ್ಮನು ಪರ್ವತಪ್ಪನ ಹತ್ತಿರವೇ ಬಂದು ನಿಂತು—ಅಜ್ಜಾ, ಇಷ್ಟು ಗಣಸಮೂಹವು ನಿನ್ನ ಅನ್ನಸಂತರ್ಪಣೆಯ ಕಾರ್ಯಕ್ಕಾಗಿ ಕೂಡಿರಲು, ನನ್ನೊಬ್ಬನ ಸಲುವಾಗಿ ಇಷ್ಟೇಕೆ ಕಳಕಳಿಯು? ನಾನಿಲ್ಲದಿದ್ದರೆ ನಡೆಯು ವಂತೆಯೇ ಇಲ್ಲವೇನು? ಎಂದು ನುಡಿದನು.

ಪರ್ವತಪ್ಪನು ಮೌನೀಶನನ್ನು ಕಂಡಾಕ್ಷಣವೇ ಆನಂದಸಾಗರದಲ್ಲಿ ಮುಳುಗಿ—ಗುರುವರ್ಯಾ! ಜಗಚ್ಚಾಲಕನಾದ ನೀನಿಲ್ಲದೆ ನನ್ನ ಮನಸ್ಸಿನ ಬಯಕೆಯಾದರೂ ಹೇಗೆ ಪೂರ್ಣವಾಗಬೇಕು? ಎಂದು ನಮಸ್ಕರಿಸಿ ಲಿಂಗಾರ್ಚನೆಗೆ ಕುಳಿತಿರುವ ಜಂಗಮ ಸಮೂಹದ ಬಳಿಗೆ ಕರೆದೊಯ್ದನು.

ಅವರಲ್ಲಿ ಹಿರಿಯ ಚರಮೂರ್ತಿಯು ಮೌನೇಶನನ್ನು ನೋಡಿ—ನಿಮ್ಮ ಬಗೆಯಾವದು? ಎಂದು ಕೇಳಲು,

ಮೌನೇಶನು – ಜಗವ ಜಂಗಮನೆಂಬುವದೇ ನಮ್ಮ ಬಗೆಯು, ಎಂದು ಹೇಳಿದನು.

ಚರಮೂರ್ತಿಯು-ನೀನು ಜಂಗಮನಾದರೆ ಲಿಂಗವೆಲ್ಲಿದೆ? ತೋರಿಸು.

ಮೌನೇಶನು—ಚರಮೂರ್ತಿಗಳೇ, ಲಿಂಗವು ನನ್ನ ಪಾದಾಂಗುಷ್ಟದಲ್ಲಿರುವದು.

ಚರಮೂರ್ತಿ:— ಹೀಗೆ ಚೇಷ್ಟೆ ಮಾಡಬೇಡ. ಅಂಗದಲ್ಲಿ ಲಿಂಗವಿಲ್ಲದ ನಿನ್ನನ್ನು ಜಂಗಮನೆಂದು ಹೇಗೆ ನಂಬಬೇಕು?'

ಮೌನೇಶ—ಚರಮೂರ್ತಿಗಳೇ, ಚರಿಸುತ್ತಿರುವ ನನ್ನ ಪಾದಗಳೇ ಜಂಗಮವು; ಅಂಗುಷ್ಟವೇ ಲಿಂಗವು. ಲಿಂಗ-ಜಂಗಮಗಳ ರೀತಿಯು ಹೀಗಿರುವದು. ಇದಕ್ಕೆ ಬದಲಾಗಿ ಬೇರೆ ಲಿಂಗವನ್ನು ಎಲ್ಲಿಂದ ತರಲಿ?

ಹೀಗೆ ಹೇಳುವ ಮೌನೇಶನ ಮಾತುಗಳನ್ನು ಕೇಳಿ, ಜಂಗಮ ಸಮೂಹವು ಸಿಟ್ಟಿಗೆದ್ದು:—'ಇವನು ಎಷ್ಟು ದುರಹಂಕಾರಿಯು? ಪಾದಾಂಗುಷ್ಟದಲ್ಲಿ ಲಿಂಗವಿರುವದಂತೆ! ಅಂಗದಲ್ಲಿ ಲಿಂಗವಿಲ್ಲದ ಈ ಭವಿಯು ಒಳಗೆ ನುಗ್ಗಿ ನಮ್ಮ ಸಮೂಹದಲ್ಲಿ ಹೇಗೆ ಬಂದನು? ಇವನನ್ನು ಇಲ್ಲಿ ನಿಲ್ಲಗೊಡಬೇಡಿರಿ, ಹೊರಗೆ ನೂಕಿರಿ" ಎಂದು ಸುತ್ತಲೂ ಮುತ್ತಿಕೊಂಡು ಚರಿಗ್ಗಿಡಿದು ದೂಡಿಬಿಟ್ಟರು.

ಮೌನೇಶನು ಮುಗುಳುನಗೆಯಿಂದ— ನನಗೆ ಭವಿಯೆಂದು ನುಡಿದ ಕಾರಣ ನೀವೆಲ್ಲರೂ ಭವಿಗಳಾಗಿರಿ, ಎಂದು ಅನ್ನುತ್ತ, ಪರ್ವತಪ್ಪನನ್ನು ಕುರಿತು:—ಅಜ್ಜಾ ಬರುತ್ತೇನೆ, ಎಂದು ಹೇಳುತ್ತ, ಹೊರಟು ಹೋದನು.

ಪರ್ವತಪ್ಪನು:— ಅಹಾ! ಸದ್ಗುರುವಾದ ಮೌನಸ್ವಾಮಿಯ ಮನಸ್ಸು ನೊಂದುಹೋಯಿತಾದ್ದರಿಂದ ಮುಂದೇನು ಅನರ್ಥವು ಘಟಿಸುವದೋ, ಎಂದು ಚಿಂತಿಸುತ್ತಿದ್ದನು. ಜಂಗಮ ಸಮೂಹವು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತು ಇಷ್ಟ ಲಿಂಗಗಳನ್ನು ಗಂಧದ ಕರಡಿಗೆ, ಚೌಕ ವಸ್ತ್ರಗಳಲ್ಲಿ ಮೊದಲಿನಂತೆ ಇರಿಸಬೇಕೆಂದು ಮುಚ್ಚಿರುವ ಎಡಗೈಗಳನ್ನು ತೆರೆದು ನೋಡುತ್ತಾರೆ, ಅಲ್ಲೇನಿದೆ? ಲಿಂಗಗಳು ಒಬ್ಬರ ಕೈಯಲ್ಲಾದರೂ ಇದ್ದಿಲ್ಲ. ಆ ಕ್ಷಣವೇ ಜಂಗಮಸ್ತೋಮವು ಕಂಗೆಟ್ಟು:—ಅಹಾ! ನಾವು ಭವಿಯೆಂದು ನುಡಿದವನು ಮಹಾಪುರುಷನಾಗಿರಬಹುದು; ಆದ್ದರಿಂದಲೇ ಆತನು ಅಂದಹಾಗೆ ನಾವು ಭವಿಗಳಾಗಿ ಹೋದೆವು, ಎಂದು ತಮ್ಮ ಮನಸ್ಸಿನಲ್ಲಿ ಮಿಡುಕುತ್ತಿದ್ದರು.

ಅವರಲ್ಲಿ ಕೆಲವರು:—ಈಗ ಬಂದವನು ಬಹು ಗಾರುಡಿಗನಿರ ಬಹುದು. ಆದ್ದರಿಂದಲೇ ನಮ್ಮ ಲಿಂಗಗಳನ್ನು ಇಲ್ಲದಂತೆ ಮಾಡಿರುವನು, ಎಂದು ಅಂದರು.

ಮತ್ತೆ ಕೆಲವರು:—ಇದೇನು ನಿಮಗೆ ಹುಚ್ಚು ಹಿಡಿದಿದೆಯೋ ಹೇಗೆ? ತ್ರಿಪುರ ಸಂಹಾರನಾದ ಶ್ರೀ ರುದ್ರನ ಅವತಾರವಾದ ಶಿವಲಿಂಗಕ್ಕೆ ನರರು ಮಾಡುವ ಮಂತ್ರ-ಯಂತ್ರಗಳು ನಾಟುವವೇ? ಇದು ದೇವರ ತಂತ್ರದಿಂ ದಾಗಿದೆಯೋ ಹೊರ್ತು ಮನುಷ್ಯರಿಂದಾದದ್ದಲ್ಲ, ಎಂದು ನುಡಿದರು.

ಭಕ್ತಶ್ರೇಷ್ಠನಾದ ಪರ್ವತಪ್ಪನು ಮೌನಗುರುವಿನ ಮಹಿಮೆಯನ್ನು ಅರಿತವನಾದ್ದರಿಂದ ಗಣಸಮೂಹವನ್ನು ಕುರಿತು:—ಮಹಾಸ್ವಾಮಿಗಳೇ, ಇಲ್ಲಿಗೆ ಬಂದಿದ್ದ ಗುರುವರನು ಸಾಕ್ಷಾತ್ ಪರಮೇಶ್ವರನಿರುವನು. ಆತನ ಮಹಿಮೆಯನ್ನು ಅರಿಯದೆ ಭವಿ, ಎಂದು ಹೊರಗೆ ದೂಡಿ ನೀವೆಲ್ಲರೂ ಭವಿ ಗಳಾಗಿ ಹೋದಿರಿ. ಮುಂದಾದರೂ ಆ ಮೌನೇಶನನ್ನು ಮೊರೆ ಹೊಗದೆ ನಿಮ್ಮ ಲಿಂಗಗಳು ದೊರೆಯಲಾರವು, ಎಂದು ಹೇಳಿದನು.

ಆ ಮಾತಿಗೆ ಗಣ ಸಮೂಹವು:—ಪರ್ವತಪ್ಪಾ, ದರಿದ್ರನ ಹತ್ತರ ಹೋಗಿ ದ್ರವ್ಯವನ್ನು ಕೇಳಿದರೆ ಆಗುವ ಪ್ರಯೋಜನವೇನು? ಅದರಂತೆ ಭವಿಯನ್ನು ಮೊರೆಹೊಕ್ಕು ಶಿವಲಿಂಗಗಳನ್ನು ಕೇಳಿದರೆ ಎಲ್ಲಿಂದ ಕೊಡು ವನು? ಮರುಳನಂತೆ ಹೀಗೆ ಮಾತಾಡಬೇಡ; ಬೇಗನೆ ಶಿವಸುತನಾದ ಶ್ರೀ ವೀರಭದ್ರದೇವರ ಗುಡಿಗೆ ಹೋಗಿ ಸ್ತೋತ್ರ ಮಾಡಿದರ ಆತನು ತನ್ನ ಭಕ್ತರ ದೇಹದಲ್ಲಿ ಪ್ರವೇಶಿಸಿ ನಮ್ಮ ಲಿಂಗಗಳು ಸಿಗುವ ಉಪಾಯವನ್ನು ಸೂಚಿಸುವನು. ಕಾರಣ ನಾವೆಲ್ಲರೂ ಅಲ್ಲಿಗೆ ಹೋಗೋಣ ನಡೆಯಿರಿ, ಎಂದು ಅಂದರು.

ಪರ್ವತಪ್ಪನು:—ನಾನು ಮೌನೇಶನ ವಿಷಯವಾಗಿ ಎಷ್ಟು ಹೇಳಿ ದರೂ ಇವರಿಗೆ ಸತ್ಯವಾಗಲಾರದು ಇವರ ಇಷ್ಟದಂತೆ ದೇವಾಲಯಕ್ಕೆ ಹೋಗೋಣ. ಆ ಶ್ರೇಷ್ಠ ಮೂರ್ತಿಯೇ ಏನಾದರೂ ಮಾಡಲಿ, ಎಂದು ಅನ್ನುತ್ತ, ಜಂಗಮ ಸಮೂಹವನ್ನು ಕೂಡಿಕೊಂಡು ದೇವಾಲಯಕ್ಕೆ ಬಂದು ದೇವರೆದುರಿಗೆ ನಮಸ್ಕರಿಸಿ ಕುಳಿತನು.

ಜಂಗಮ ಸಮೂಹವು ದೇವಾಲಯದ ಒಳಗೂ ಹೊರಗೂ ತಮಗೆ ಯೋಗ್ಯ ಕಂಡ ಸ್ಥಳದಲ್ಲಿ ಮಂಡಿಸಿತು. ಆಗ ಪರ್ವತಪ್ಪನು ದೇವರಿಗೆ ಕೈ ಮುಗಿದು:— ಮಹಾಸ್ವಾಮೀ, ನೀನು ಅನಂತನೂ, ಅವ್ಯಯನೂ, ಅನೇಕ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸುವ ಸಾಮರ್ಥ್ಯವುಳ್ಳವನೂ, ಸಾಕಾರ ಮೂರ್ತಿಯೂ, ಸರ್ವಾಧಾರನೂ, ದುಷ್ಟ ಶಿಕ್ಷಕನೂ, ಶಿಷ್ಟ ರಕ್ಷಕನೂ, ದಯಾ ಸಮುದ್ರನೂ, ವೇದಾಗಮಗಳಿಗೆ ಅಗೋಚರನೂ ಆಗಿರುವೆ. ದೇವಾ! ಪೂರ್ವದಲ್ಲಿ ಅಹಂಕಾರಿಯಾದ ದಕ್ಷಬ್ರಹ್ಮನು ಶಿವನನ್ನೇ ನಾಶ ಮಾಡಬೇಕೆಂಬ ಕುಯುಕ್ತಿಯಿಂದ ಯಜ್ಞವನ್ನು ಮಾಡಲು, ಅದರ ಉರಿ ಕೈಲಾಸವನ್ನೆಲ್ಲ ವ್ಯಾಪಿಸಿತು. ಆಗ ಶಂಕರನು ಸಿಟ್ಟಿನಿಂದ ತನ್ನ ಹಣೆಯ ಬೆವರನ್ನು ತೆಗೆದು ಭೂಮಿಗಪ್ಪಳಿಸಿದನು ಆ ಕ್ಷಣವೇ ಭಯಂಕರ ಸ್ವರೂಪನಾದ ನೀನು ಮೂವತ್ತೆರಡು ಆಯುಧಗಳನ್ನು ಹಿಡಿದು ಅವತರಿಸಿ ಘೋರ ಎಂದು ಆರ್ಭಟಿಸುತ್ತ ಶಿವಾಜ್ಞೆಯಿಂದ ದಕ್ಷಲೋಕಕ್ಕೆ ಹೋಗಿ, ಯಜ್ಞಕ್ಕೆ ಬಂದಿರುವ ಸಮಸ್ತ ದೇವತೆಗಳನ್ನು ಹೊಡೆದೋಡಿಸಿ, ದೀಕ್ಷಾಬದ್ಧನಾಗಿ ಕುಳಿತಿರುವ ದಕ್ಷಬ್ರಹ್ಮನನ್ನು ನೋಡಿ, ಹಲ್ಲುಗಳನ್ನು ಕಡಿಯುತ್ತ:— ಎಲೈ ಶಿವದ್ರೋಹಿಯೇ, ನಿನ್ನ ದುಷ್ಕಾರ್ಯದ ಫಲವನ್ನು ಅನುಭವಿಸು, ಎಂದು ಕೈ ಹಿಡಿದು ಮುಂದಕ್ಕೆಳೆದು, ಖಡ್ಗದಿಂದ ತಲೆಯನ್ನು ಕಡಿದು ಹೋಮ ಕುಂಡದಲ್ಲಿ ಹಾಕಿಬಿಟ್ಟೆ. ಇಷ್ಟಾದರೂ ನಿನ್ನ ಸಿಟ್ಟು ಶಾಂತವಾಗದೆ ಅತ್ತಿತ್ತ ನೋಡುತ್ತಿರಲು, ಆಕಾಶದಲ್ಲಿರುವ ನಿನ್ನ ಉಗ್ರರೂಪವನ್ನು ನೋಡಿದವರೆಲ್ಲರೂ ಗದಗುಟ್ಟಿ ನಡುಗುತ್ತ ಪಲಾಯನಸೂಕ್ತವನ್ನು ಪಠಿಸುತ್ತಿದ್ದರು.

ಅಷ್ಟರಲ್ಲಿ ದಕ್ಷಬ್ರಹ್ಮನ ಹೆಂಡತಿಯು ಮುಂದೇನು ಗತಿ, ಎಂದು ದುಃಖಿಸುತ್ತ ತನ್ನ ಕಿವಿಯೋಲೆಗಳನ್ನು ಬಿಚ್ಚಿ ಸುವರ್ಣ ಪಾತ್ರೆಯಲ್ಲಿಟ್ಟು ಕೊಂಡು ಪ್ರಳಯ ರುದ್ರನಂತಿರುವ ನಿನ್ನನ್ನು ನೋಡಿದರೂ ಹೆದರದೆ ಓಡಿ ಬಂದು ನಿನ್ನ ಪಾದಾರವಿಂದಗಳಿಗೆ ದೀರ್ಘದಂಡ ನಮಸ್ಕಾರ ಮಾಡಿ:— ದೇವಾಧಿದೇವಾ! ಕೃಪಾನಿಧೆ, ಭಕ್ತವತ್ಸಲಾ! ನನಗೆ ಬಂದಿರುವ ವಿಪತ್ತನ್ನು ಪರಿಹರಿಸು! ಎಂದು ಬೇಡಿಕೊಂಡಳು ದಯಾನಿಧೆ, ಆ ಕ್ಷಣವೇ ನಿನ್ನ ಭಯಂಕರವಾದ ಕೋಪವು ಒಮ್ಮೆಲೆ ಶಾಂತವಾಗಿ ನಮಸ್ಕರಿಸುವ ದಕ್ಷಪತ್ನಿಯನ್ನು ನೋಡಿ, ಅಂತಃಕರಣದಿಂದ:— ಅಮ್ಮಾ, ಸೌಮಂಗಲೆ!

ಯಾಗು. ಮೇಲಕ್ಕೇಳು. ನಿನಗೆ ಬಂದಿರುವ ಕಷ್ಟವಾದರೂ ಏನು? ಬೇಗನೆ ಹೇಳು, ಎಂದು ಅನ್ನಲು, ದಕ್ಷಪತ್ನಿ ಯು ಮೇಲಕ್ಕೆದ್ದು ಕೈಜೋಡಿಸಿ:— 'ಕೃಪಾಘನಾ, ಪತಿಯು ಮರಣಹೊಂದಿದ ಮೇಲೆ ಸತಿಯು ಸುಮಂಗಲೆ ಎಂತಾಗುವಳು? ಆದರೂ ನಿನ್ನ ಅಮೃತವಾಣಿಯನ್ನು ಸತ್ಯಮಾಡುವ ದಕ್ಕಾಗಿ ಸತ್ತಿರುವ ನನ್ನ ಗಂಡನನ್ನು ಬದುಕಿಸು, ಮುತ್ತೈದೆ ಯನ್ನುಮಾಡಿ ಕಾಪಾಡು' ಎಂದು ಬೇಡಿಕೊಂಡಳು.

ಆಗ ಕರುಣಾಬ್ಧಿಯಾದ ನೀನು ಇವಳು ದಕ್ಷಪತ್ನಿ, ಎಂದು ತಿಳಿದು ಸತ್ತುಬಿದ್ದಿರುವ ದಕ್ಷಬ್ರಹ್ಮನ ದೇಹಕ್ಕೆ ಹೋಮಕುಂಡದ ಹತ್ತರ ಕತ್ತರಿಸಿ ಹಾಕಿರುವ ಕುರಿದಲೆಯೊಂದನ್ನು ಜೋಡಿಸಿಟ್ಟು ಪ್ರಾಣದಾನ ಮಾಡಲು, ಕೂಡಲೆ ದಕ್ಷಬ್ರಹ್ಮನು ಮೇಲಕ್ಕೆದ್ದು ಕೈಜೋಡಿಸಿ:—ದಯಾಘನಾ, ನಾನು ಅಹಂಕಾರವೆಂಬ ಆನೆಯನ್ನೇರಿ ಅಜ್ಞಾನವೆಂಬ ಅರಣ್ಯದಲ್ಲಿ ಸಂಚರಿಸುತ್ತ ಸರ್ವಜ್ಞನಾದ ಶಂಭುವಿನ ಮೇಲೆಯೇ ವಿರೋಧವನ್ನು ಮಾಡಿದೆನು. ಅಂಥ ಅಧಮನಾದ ನನ್ನನ್ನು ನೀನು ಶಿಕ್ಷಿಸಿ, ಗರ್ವಹರಣಮಾಡಿ, ಪುನಃ ರಕ್ಷಿಸಿದೆಯಾದ್ದರಿಂದ, ನಿನ್ನ ಪಾದಾರವಿಂದಗಳಿಗೆ ನನ್ನ ಅನಂತ ಪ್ರಣಾಮ ಗಳಿರಲಿ, ಎಂದು ಪ್ರಾರ್ಥಿಸುತ್ತ ಸಾಷ್ಟಾಂಗ ನಮಸ್ಕಾರ ಮಾಡಿದನು. ಆಗ ನೀನು ದಕ್ಷನಿಗೂ, ದಕ್ಷ ಪತ್ನಿಗೂ ಆಶೀರ್ವಾದ ಮಾಡಿ ಕಳಿಸಿದೆ. ಮೋಕ್ಷ ಧಾಯಕಾ, ನೀನು ದುಷ್ಟ ಶಿಕ್ಷಕನೆಂದು ಹೇಳಲಿಕ್ಕೆ ದಕ್ಷಬ್ರಹ್ಮನೂ, ಶಿಷ್ಟ ರಕ್ಷಕನೆಂದು ಹೇಳಲಿಕ್ಕೆ ದಕ್ಷಪತ್ನಿಯೂ ಸಾಕ್ಷಿಯಾಗಿರುವರು. ಆದಕಾರಣ ನಿನ್ನ ಭಕ್ತ ವಾತ್ಸಲ್ಯತೆಯನ್ನು ಎಷ್ಟು ಹೊಗಳಿದರೂ ತೀರದು. ಕೃಪಾ ಘನಾ, ನಾನು ನಿನ್ನ ಯಾತ್ರೆಗಾಗಿ ಬಂದು, ಅನ್ನಸಂತರ್ಪಣೆ ಕಾರ್ಯ ವನ್ನು ನಡೆಸಿರುವ ಕಾಲಕ್ಕೆ ಜಂಗಮ ಸಮೂಹದ ಲಿಂಗಗಳು ಒಮ್ಮಿಂ ದೊಮ್ಮೆಲೆ ಇಲ್ಲದಂತಾಗಿರುವವು. ಇದೆಲ್ಲವೂ ನಿನ್ನಮಾಯಾಮಹಿಮೆ ಎಂತಲೇ ತಿಳಿದಿರುವೆನಾದ್ದರಿಂದ, ಇವರೆಲ್ಲರಿಗೂ ಲಿಂಗಗಳನ್ನು ಕೊಟ್ಟು ನಾನು ಮಾಡುವ ಕಾರ್ಯವನ್ನು ಸಾಂಗಗೆಳಿಸಿ, ಭಕ್ತವತ್ಸಲನೆಂಬ ನಿನ್ನ ಬಿರುದನ್ನು ಮೆರೆಯಿಸು, ಎಂದು ಬೇಡಿಕೊಂಡನು.

ಆಗ ಜಂಗಮ ಸಮೂಹವು ಸಹ ಪರ್ವತಪ್ಪನಂತೆ ದೇವರನ್ನು ಕುರಿತು:— ಮಹಾಸ್ವಾಮಿ, ಒಬ್ಬ ವಿಶ್ವಬ್ರಹ್ಮವಂಶದ ಮಹಾತ್ಮನು ನಮ್ಮ

ಸಮೂಹದಲ್ಲಿ ಜಂಗಮನೆಂದು ಬಂದ ಕಾರಣ ನಾವು ಅವನನ್ನು ಭವಿ ಎಂದು ಹೊರಗೆ ದೂಡಿದೆವಾದ್ದರಿಂದ ಆತನು ನೀವೆಲ್ಲರೂ ಭವಿಗಳಾಗಿರಿ, ಎಂದು ಶಪಿಸಿ ಹೊರಟು ಹೋದನು. ಆ ಕ್ಷಣವೇ ನಮ್ಮ ಲಿಂಗಗಳು ಇಲ್ಲದಂತಾಗಿ ಅನ್ನವಿಲ್ಲದೆ ಕಂಗೆಟ್ಟು ಹೋಗಿರುವೆವು. ಈ ಕಾರ್ಯವು ಆತನಿಂದಾಗಿರುವದೋ ಮತ್ತಾವ ಕಾರಣದಿಂದಾಗಿರುವದೋ ತಿಳಿಯದಾಗಿದೆ. ಕಾರಣ ಕರುಣಾಸಮುದ್ರನಾದ ನೀನು ನಮಗೆ ಲಿಂಗಗಳನ್ನು ಕೊಟ್ಟು ಕಾಪಾಡು, ಎಂದು ಪ್ರಾರ್ಥಿಸಿದರು.

ಆಗ ಭಕ್ತೋದ್ಧಾರಕನಾದ ವೀರಭದ್ರದೇವನಿಗೆ ಕೃಪೆ ಹುಟ್ಟಿ ಪೂಜಾರಿಯ ದೇಹದಲ್ಲಿ ಪ್ರವೇಶಿಸಿ:—ಜಂಗಮ ಸಮೂಹವೇ, ನಿಮ್ಮ ಲಿಂಗಾರ್ಚನ ಕಾಲದಲ್ಲಿ ಬಂದಿದ್ದ ಮೌನೇಶನು ಗುರುವಿನ ಗುರುವೂ, ದೇವರ ದೇವನೂ; ತ್ರಿಲೋಕ ಜನಕನೂ ಆಗಿರುವನು; ಮತ್ತು ನಾನು ದೇಹವು, ಆತನು ಪ್ರಾಣವು. ಅಂಥ ನನ್ನ ತಂದೆಯಾದ ಆ ಮಹಾಮಹಿಮನನ್ನು ಭವಿ ಎಂದು ಹೊರಗೆ ದೂಡಿ ನೀವೆಲ್ಲರೂ ಭವಿಗಳಾಗಿ ಅನ್ನವಿಲ್ಲದೆ ಬಳಲುವ ಪ್ರಸಂಗವನ್ನು ತಂದುಕೊಂಡಿರುವಿರಿ. ಆ ಮಹಾಮಹಿಮಾ ಮೂರ್ತಿ ತೆಗೆದುಕೊಂಡಿರುವ ಲಿಂಗಗಳನ್ನು ಕೊಡಲಿಕ್ಕೆ ನಾನಾದರೂ ಹೇಗೆ ಸಮರ್ಥನಾಗುವೆನು? ಆ ಮೌನಗುರುವನ್ನೇ ಹುಡುಕಿ ನಿಮ್ಮ ಲಿಂಗಗಳನ್ನು ಪಡೆಯಿರಿ, ಎಂದು ಹೇಳಿದನು.

ಅರ್ಚಕನ ಈ ವಾಕ್ಯವನ್ನು ಕೇಳಿ, ಇದು ದೇವರ ವಾಕ್ಯವೆಂದು ನಂಬಿ, ಜಂಗಮ ಸಮೂಹವೂ ಪರ್ವತಪ್ಪನೂ ದೇವರಿಗೆ ನಮಸ್ಕರಿಸಿ, ಜಾತ್ರೆಯಲ್ಲಿ ಮೌನೇಶ್ವರನನ್ನು ಶೋಧಿಸಲಿಕ್ಕೆ ಹತ್ತಿದರು. ಗುರುಸ್ಥಲದವರೂ, ವಿರಕ್ತರೂ, ಪಟ್ಟದವರೂ, ಚರಮೂರ್ತಿಗಳೂ, ಮಠಪತಿಗಳೂ ಮುಂತಾದ ಎಲ್ಲ ಗಣಸಮೂಹವು ಒಂದೇ ಸವನೆ ಜಾತ್ರೆಯನ್ನೆಲ್ಲ ತಿರುಗಿ ಹುಡುಕಿದರೂ ಮೌನೇಶನು ಸಿಗಲಿಲ್ಲ. ಯಾರನ್ನು ಕೇಳಿದರೂ ನೋಡಿದೆವೆಂಬ ಶಬ್ದವು ಒಬ್ಬರ ಬಾಯಿಂದಲೂ ಹೊರಬೀಳಲಿಲ್ಲ, ಆದ್ದರಿಂದ ಜಂಗಮಸಮೂಹವು ಬೇಸತ್ತು ಹೋಗಿ:—ಪರ್ವತಪ್ಪಾ, ಕಳೆದ ಮೂರು ದಿವಸಗಳಿಂದರೂ ನಮಗೆ ಅನ್ನವಿಲ್ಲದ್ದರಿಂದ ಮುಂದಕ್ಕೆ ಹೆಜ್ಜೆಯ

ಸ್ನಿ ಡದ ಹಾಗೆ ನಿತ್ರಾಣರಾಗಿ ಹೋಗಿರುವೆವು. ಇಷ್ಟಾದರೂ ಮೌನೇಶನಿಗೆ ದಯೆ ಹುಟ್ಟಲಿಲ್ಲ. ಮುಂದೇನು ಗತಿ! ಎಂದು ಚಿಂತಿಸುತ್ತಿದ್ದರು.

ಆ ಮಾತಿಗೆ ಪರ್ವತಪ್ಪನು:—ಗುರುಗಳೇ, ಗರ್ವವೆಂಬ ಪರ್ವತವನ್ನೇರಿ ಮೆರೆಯುವಾಗ ನಾವು ಎಂಥವರಿಗಾದರೂ ನಿಂದ್ಯ ವಾಕ್ಯಗಳನ್ನಾಡಲಿಕ್ಕೆ ಹಿಂಜರಿಯುತ್ತಿರುವದಿಲ್ಲ. ಅಂಥ ಗರ್ವವು ನಾಶವಾದ ಕಾಲದಲ್ಲಿ ಮಾತ್ರ ಪಶ್ಚಾತ್ತಾಪಪಡಬೇಕಾಗುತ್ತದೆ. ಇರಲಿ. ಪರಮಾತ್ಮನು ಕಷ್ಟದಿಂದ ಸಾಧ್ಯನಾಗುವನೇ ಹೊರತು ಸುಖದಿಂದ ಸಾಧ್ಯನಾಗುವದಿಲ್ಲ. ನಮ್ಮ ದೃಢಭಕ್ತಿಯು ಆತನ ಮೇಲೆ ಕುಳಿತರೆ ಆತ ಎಲ್ಲಿ ಹೋಗುವನು? ಭಕ್ತರನ್ನು ರಕ್ಷಿಸುವದಕ್ಕಾಗಿ ತಾನೇ ನಾವಿದ್ದಲ್ಲಿಗೆ ಬರುವನು ಆದರೂ ನಾವು ಈ ಪರಿಶೆಯನ್ನು ಬಿಟ್ಟು ಊರ ಹೊರಗೆ ಹೋಗಿ ಶೋಧಿಸೋಣ ನಡೆಯಿರಿ, ಎಂದು ಜಂಗಮ ಸಮೂಹವನ್ನು ಕೂಡಿಕೊಂಡು ಊರ ಹೊರಗೆ ಹೋಗಿ, ಬಯಲ ಪ್ರದೇಶವನ್ನು ಪ್ರವೇಶಿಸಿ ಅಲ್ಲಿ ಹುಡುಕುತ್ತ ಮುಂದೆ ಕಾಣುವ ಅರಣ್ಯವನ್ನು ಹೊಕ್ಕು ನದಿ, ಸರೋವರ, ಹಳ್ಳ ಕೊಳ್ಳ ಮುಂತಾದ ಸ್ಥಳಗಳಲ್ಲಿ ಹುಡುಕಿದರೂ ಮೌನೇಶನ ಪತ್ತೆ ಹತ್ತಲಿಲ್ಲ.

ಜಂಗಮ ಸಮೂಹವು ಕಂಗೆಟ್ಟು:—ಅಕಟಾ! ನಾವು ಯಾಕಾದರೂ ಆ ಮಹಾತ್ಮನನ್ನು ಭವಿ ಎಂದು ದೂಡಿದೆವೋ ಎಂದು ದುಃಖಿಸುವಷ್ಟರಲ್ಲಿ ಒಬ್ಬ ಬ್ರಾಹ್ಮಣನು ಅವರ ದೃಷ್ಟಿಗೆ ಬಿದ್ದನು. ಆತನ ಗಡ್ಡಗಳು ಬಹು ಉದ್ದವಾಗಿ ಬೆಳೆದಿದ್ದವು. ಮೀಸೆಗಳು ತುಟಿಯನ್ನು ಮುಚ್ಚಿದ್ದವು. ತಲೆಗೂದಲುಗಳು ಸೊಂಟದವರೆಗೂ ಇಳಿಬಿದ್ದಿದ್ದವು; ಅವುಗಳನ್ನು ತಿರುವಿ ಮೇಲಕ್ಕೆ ಗಂಟು ಹಾಕಿದರೆ ಬಹು ದಿವಸ ತಪಸ್ಸು ಮಾಡಿದ ಋಷಿಶ್ರೇಷ್ಠನ ಜಟಾಮುಕುಟದಂತೆ ಕಾಣಿಸುವ ಹಾಗಿದ್ದವು. ಆತನು ಉಟ್ಟಿರುವ ಮತ್ತು ಹೊದ್ದಿರುವ ಮಡಿ ವಸ್ತ್ರಗಳು ಅಷ್ಟು ಸ್ವಚ್ಛವಾಗಿರದೆ ಸ್ವಲ್ಪ ಮಾಸಿದ ಹಾಗೆ ಕಾಣಿಸುತ್ತಿದ್ದವು. ತಲೆಯ ಮೇಲೆ ಪವಿತ್ರ ತೀರ್ಥದ ಕಾವಡಿಯನ್ನು ಹೊತ್ತಿದ್ದನು. ಆ ಭೂಸುರನ ತೇಜಃಪುಂಜವಾದ ಮುಖವನ್ನೂ, ಕೈ-ಕಾಲುಗಳನ್ನೂ ಪರೀಕ್ಷಿಸಿ ನೋಡುವದೆ ಆತನು ವೇಷಧಾರಿಯಾದ ಮಹಾಪುರುಷನಿರಬಹುದೆಂದು ಒಡೆದು ಕಾಣಿಸುವ ಹಾಗಿತ್ತು.

ಹೀಗಿರುವ ಆ ಬ್ರಾಹ್ಮಣನನ್ನು ನೋಡಿ ಜಂಗಮ ಸಮೂಹವು:—ಆಹಾ! ಇದುವರೆಗೂ ಈ ಕಾನನದಲ್ಲಿ ಮನುಷ್ಯರ ಸುಳುವೇ ಕಾಣಿಸಲಿಲ್ಲ. ಈಗ ಮಾತ್ರ ಒಬ್ಬ ಬ್ರಾಹ್ಮಣನು ತೀರ್ಥದ ಕಾವಡಿಯನ್ನು ಹೊತ್ತುಕೊಂಡು ಬರುತ್ತಿರುವನು ಆತನನ್ನು ಕೇಳಿ. ನೋಡೋಣವೆಂದು ಅನ್ನುತ್ತ ಬ್ರಾಹ್ಮಣನನ್ನು ಕುರಿತು:—ಭೂಸುರೋತ್ತಮಾ, ನೀನು ಯಾರು? ಎಲ್ಲಿಂದ ಬಂದೆ? ನಿನ್ನ ತಲೆಯ ಮೇಲಿರುವ ತೀರ್ಥದ ಕಾವಡಿಯನ್ನು ಎಲ್ಲಿಗೊಯ್ಯುವೆ? ಎಂದು ಕೇಳಿದರು.

ಆ ಮಾತಿಗೆ ಬ್ರಾಹ್ಮಣನು:—'ಮಹನೀಯರೇ, ನಾನೊಬ್ಬ ಬಡ ಬ್ರಾಹ್ಮಣನು. ಕಾಶಿಯಿಂದ ಬಂದೆನು ರಾಮಲಿಂಗನ ಅಭಿಷೇಕಕ್ಕಾಗಿ ಭಾಗೀರಥಿಯ ತೀರ್ಥವನ್ನು ತಂದಿರುವೆನು. ಪೂಜೆಯ ವೇಳೆಗೆ ಸರಿಯಾಗಿ ಈ ತೀರ್ಥವನ್ನು ತೆಗೆದುಕೊಂಡು ಹೋಗಬೇಕಾಗಿದೆ ಈಗ ನನ್ನಿಂದ ಆಗುವ ಕೆಲಸವಾದರೂ ಏನಿದೆ? ಬೇಗನೆ ಹೇಳಿರಿ' ಎಂದು ಅಂದನು.

ಜಂಗಮ ಸಮೂಹವು:—ಬ್ರಾಹ್ಮಣಶ್ರೇಷ್ಠಾ, ನಾವು ಒಬ್ಬ ಪಂಚಾನನ ವಂಶದ ಮಹಾತ್ಮನನ್ನು ಭವಿ ಎಂದು ಹೊರಗೆ ದೂಡಿದೆವಾದ ಕಾರಣ ನಮ್ಮ ಲಿಂಗಗಳು ಇಲ್ಲದ ಹಾಗಾಗಿ ಈಗ ಮೂರು ದಿವಸ ಅನ್ನವಿಲ್ಲದೆ ಉಪವಾಸ ಸಾಯುತ್ತಿರುವೆವು. ಶಿವಸುತನಾದ ವೀರೇಶ್ವರನು ಸಹ ಪೂಜಾರಿಯ ದೇಹದಲ್ಲಿ ಪ್ರವೇಶಿಸಿ ಆ ಮೌನೀಶನೇ ಲಿಂಗಗಳನ್ನು ಕೊಡುವನೆಂದು ಹೇಳಿದನು. ಆತನ ಅಪ್ಪಣೆಯಂತೆ ಆ ಮಹಾತ್ಮನು ಎಲ್ಲಿ ಹುಡುಕಿದರೂ ಸಿಗಲೊಲ್ಲನು. ನೀನು ಕಂಡಿದ್ದರೆ ಹೇಳು. ನಿನಗೆ ರಾಮಲಿಂಗನು ಕಲ್ಯಾಣ ಮಾಡುವನು, ಎಂದರು

ಬ್ರಾಹ್ಮಣನು:—ಅಯ್ಯೋ! ಪಾಪ-ಪಾಪ!! ಎಷ್ಟು ಕಷ್ಟಪಟ್ಟಿರಿ!!! ನಾನು ಬರುವಾಗ ಸ್ವಲ್ಪ ದೂರದ ಹಿಂದೆ ದಕ್ಷಿಣ ದಿಕ್ಕಿನಲ್ಲಿ ಒಬ್ಬ ಪಂಚಾನನ ತರುಣನನ್ನು ಕಂಡೆನು. ನೀವು ಹೇಳುವ ಗುರುತಿನ ಮೇಲೆ ನೋಡಲಾಗಿ, ನಿಮ್ಮ ಲಿಂಗಗಳನ್ನು ಇಲ್ಲದಂತೆ ಮಾಡಿದ ಮಹಿಮನು ಆತನೇ ಆಗಿರಬಹುದೆಂದು ತೋರುತ್ತದೆ. ಬೇಗನೇ ಈ ಶೀಳುದಾರಿಯನ್ನು ಹಿಡಿದುಕೊಂಡು ಹೋಗಿರಿ. ಆತನು ನಿಶ್ಚಯವಾಗಿ ಸಿಗುವನು, ಎಂದು ಹೇಳಿದನು.

ಬ್ರಾಹ್ಮಣನ ಈ ವಾಕ್ಯವನ್ನು ಕೇಳಿ ಜಂಗಮ ಸಮೂಹಕ್ಕೆ ಸ್ವಲ್ಪ ಧೈರ್ಯ ಬಂದಂತಾಗಿ ಬ್ರಾಹ್ಮಣನು ತೋರಿಸಿದ ಶೀಳುದಾರಿಯನ್ನು ಹಿಡಿದು ಮುಂದಕ್ಕೆ ತೆರಳಿದರು. ತುಸ ದೂರ ಹೋದ ಮೇಲೆ ಅವರಿಗೆ ಮಾವಿನ ಮರಗಳ ಗುಂಪು ಕಾಣಿಸಲು, ಮೌನೇಶನು ಆ ಸ್ಥಳದಲ್ಲಿಯೇ ಇರಬಹುದೆಂದು ತರ್ಕಿಸಿ, ಅಲ್ಲಿಗೆ ಹೋಗಿ ಶೋಧಿಸಲಿಕ್ಕೆ ಹತ್ತಿದರು.

ಅಲ್ಲಿ ಒಬ್ಬ ಎಂಟು ವರ್ಷದ ಬಾಲಕನು ಭೆಟ್ಟಿಯಾಗಿ—ಓಹೋ! ಗಣಸಮೂಹವೇ, ನೀವೆಲ್ಲರೂ ಈ ಅಡವಿಯಲ್ಲಿ ಹೀಗೇಕೆ ಸಂಚರಿಸುತ್ತಿರುವಿರಿ? ನಿಮ್ಮ ಮುಖಗಳು ಇಷ್ಟೇಕೆ ಕಳೆಗುಂದಿರುವವು? ನಾನು ಬಾಲಕನೆಂದು ಅಲಕ್ಷ್ಯ ಮಾಡದೆ ನಿಮ್ಮ ವ್ಯಸನದ ಕಾರಣವನ್ನು ನನ್ನ ಮುಂದೆ ಹೇಳಿರಿ. ಕೈಲಾದಮಟ್ಟಿಗೆ ನಿಮಗೆ ಸಹಾಯ ಮಾಡುವೆನು, ಎಂದನು.

ಜಂಗಮಸಮೂಹವು—ತಮ್ಮಾ, ನೀನು ಬಾಲಕನು. ನಿನ್ನೊಡನೆ ನಮ್ಮ ಸಂಕಟವನ್ನ ಹೇಳಿದರೆ ತೀರುವ ಬಗೆಯಾದರೂ ಹೇಗೆ? ನಮ್ಮ ಗೊಡವೆಯು ನಿನಗೇತಕ್ಕೆ? ಸುಮ್ಮನೆ ನಿನ್ನ ಮಾರ್ಗವನ್ನು ಹಿಡಿದುಕೊಂಡು ಹೋಗು, ಎಂದು ಹೇಳಿದರು.

ಬಾಲಕನು:—ಗಣಸಮೂಹವೇ, ನಾನು ಹುಡುಗನಾದರೂ ನನ್ನೊಡೆಯನಾದ ಮೌನೇಶನು ಸರ್ವಜ್ಞನಾಗಿರುವನು. ಆತನ ದಯೆಯಿಂದಲೇ ನಿಮ್ಮ ವ್ಯಸನವನ್ನು ನಿವಾರಣಮಾಡುವೆನು. ಸಂದೇಹ ಮಾಡದೆ ನಿಮಗೆ ಬಂದಿರುವ ತೊಂದರೆಯನ್ನು ಬೇಗನೆ ಹೇಳಿರಿ, ಎಂದನು.

ಗಣಸಮೂಹವು: ಅಹಾ! ಈ ಬಾಲಕನು ಮೌನೇಶನು ತನ್ನೊಡೆಯನೆಂದು ಹೇಳುವ ಕಾರಣ ಆ ಮೌನಗುರುವಿನ ಶಿಷ್ಯನೇ ಇವನಾಗಿರಬಹುದು. ಆದ್ದರಿಂದ ಈ ಹುಡುಗನ ಕೂಡ ನಡೆದ ಸಂಗತಿಯನ್ನು ಹೇಳಿಬಿಡೋಣವೆಂದು ಬಾಲಕನನ್ನು ಕುರಿತು:—ತಮ್ಮಾ, ಪರ್ವತಪ್ಪನೆಂಬ ಈ ಸದ್ಭಕ್ತನು ರಾಚೋಟಿಯ ವೀರಭದ್ರದೇವರ ಜಾತ್ರೆಗೆ ಕುಟುಂಬಸಹಿತವಾಗಿ ಬಂದು, ಅಲ್ಲಿ ಒಂದು ಲಕ್ಷ ಜಂಗಮರಿಗೆ ಅನ್ನಸಂತರ್ಪಣೆ ಮಾಡಿಸಬೇಕೆಂಬ ಸಂಕಲ್ಪವುಳ್ಳವನಾಗಿ ನಮ್ಮೆಲ್ಲರಿಗೂ ಬಿನ್ನಹ ಮಾಡಿ ಕರೆತಂದಿದ್ದನು. ನಾವು ಲಿಂಗಾರ್ಚನೆಗೆ ಕುಳಿತ ವೇಳೆಯಲ್ಲಿ ಒಬ್ಬ ವಿಶ್ವಬ್ರಹ್ಮವಂಶದ ಮಹಾತ್ಮನು ನಾನೂ ಜಂಗಮನೆಂದು ಒಳಗೆ ಬರಲು, ನಾವು ಭವಿ, ಎಂದು ಹೊರಗೆ

ಮಾಡಿದೆವಾದ್ದರಿಂದ ಆತನು—ನೀವೆಲ್ಲರೂ ಭವಿಗಳಾಗಿರಿ, ಎಂದು ಶಪಿಸಿ ಹೊರಟು ಹೋದನು. ಕೂಡಲೆ ನಮ್ಮ ಲಿಂಗಗಳು ಇಲ್ಲದಂತಾಗಿರುವವು. ನೀನು ಸಹಾಯ ಮಾಡುವದಾದರೆ, ನಿಮ್ಮ ಗುರುವಾದ ಮೌನೇಶನನ್ನು ತೋರಿಸಿ ನಮ್ಮ ಲಿಂಗಗಳನ್ನು ಕೊಡಿಸು, ಎಂದು ಕೇಳಿದರು.

ಅದನ್ನು ಕೇಳಿ ಬಾಲಕನು:—ಜಂಗಮ ಸಮೂಹವೇ, ಮೊದಲು ಭವಿ ಎಂದು ಹೊರಗೆ ದೂಡಿದವರೂ ನೀವೇ; ಈಗ ಲಿಂಗದ ಸಲುವಾಗಿ ಆತನನ್ನು ಹುಡುಕುವವರೂ ನೀವೇ. ಅಂದಮೇಲೆ ಭವಿಯಾದ ನನ್ನ ಗುರುವು ನಿಮ್ಮ ಲಿಂಗಗಳನ್ನು ಎಲ್ಲಿಂದ ಕೊಡುವನು? ಇದು ಹಾಗಿರಲಿ. ನಿರೂಪನೂ, ನಿರ್ಗುಣನೂ, ನಿರಾಮಯನೂ, ನಿತ್ಯಾನಂದನೂ ಆದ ಪರಬ್ರಹ್ಮನೇ ಸಗುಣಕ್ಕೆ ಬಂದು ವಿಶ್ವಕರ್ಮನೆನಿಸಿ ಲೀಲೆಯಿಂದ ಅನೇಕ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸಿ ಅವುಗಳ ಪಾಲನೆಗಾಗಿ ಶಿವ-ವಿಷ್ಣು-ಬ್ರಹ್ಮ-ಇಂದ್ರ-ಸೂರ್ಯರೆಂಬ ಪಂಚ ಮೂರ್ತಿಗಳನ್ನು ತನ್ನ ಪಂಚಮುಖಗಳಿಂದ ನಿರ್ಮಿಸಿದನು. ಆ ಪಂಚಬ್ರಹ್ಮರೇ ಲೋಕೋದ್ಧಾರದ ಸಲುವಾಗಿ ಕ್ರಮವಾಗಿ ಮನು-ಮಯ-ತ್ವಷ್ಟ-ಶಿಲ್ಪಿ-ವಿಶ್ವಜ್ಞರೆಂಬ ಪಂಚಾಚಾರ್ಯರಾಗಿ ಅವತರಿಸಿ, ಕಬ್ಬಿಣ-ಕಟ್ಟಿಗೆ-ಕಂಚು-ಕಲ್ಲು-ಬಂಗಾರ ಇವುಗಳಿಂದ ಲೋಕಕ್ಕೆ ಉಪಯುಕ್ತವಾದ ಸಾಮಾನುಗಳನ್ನೂ, ಶಿವಲಿಂಗ ಮುಂತಾದ ಮೂರ್ತಿಗಳನ್ನೂ ಸೃಷ್ಟಿ ಮಾಡುತ್ತ ಲೋಕಸಂರಕ್ಷಣೆ ಮಾಡುತ್ತಿರುವರು. ಇಂಥ ಶ್ರೇಷ್ಠವಾದ ಬ್ರಹ್ಮವಂಶದಲ್ಲಿ ಅವತರಿಸಿದ ಪರಮಾತ್ಮನು ನಿಮ್ಮ ಶಿವಪೂಜೆಯ ವೇಳೆಯಲ್ಲಿ ತಾನಾಗಿಯೇ ಬಂದಿರಲು, ಅಂಥವನನ್ನು ನೀವು ಭವಿ, ಎಂದು ಹೇಗೆ ದೂಡಿದಿರೋ ತಿಳಿಯದಾಗಿದೆ. ಗಣಸಮೂಹವೇ, ನೀವು ಆ ಮಹಾತ್ಮನನ್ನು ಹೊರಗೆ ದೂಡಿದ್ದು ಹೇಗಾಯಿತೆಂದರೆ, ಕಾಮಧೇನುವನ್ನು ಕಾಡಾಕಳೆಂತಲೂ, ಕಲ್ಪವೃಕ್ಷವನ್ನು ಕಡು ಮರವೆಂತಲೂ, ಚಿಂತಾಮಣಿಯನ್ನು ಕಾಗಲ್ಲೆಂತಲೂ, ಅಮೃತವನ್ನು ವಿಷವೆಂತಲೂ ನಿರಾಕರಿಸಿದ ಹಾಗಾಗಿದೆ. ಇಂಥ ಮಹಾಪರಾಧವು ನಿಮ್ಮಿಂದಲೇ ಆಗಿರಲು, ಇದರಲ್ಲಿ ನಾನು ಮಾಡುವದಾದರೂ ಏನಿದೆ? ಎಂದು ಅಂದನು.

ಜಂಗಮ ಸಮೂಹವು:—ತಮ್ಮಾ, ನೀನು ಸಣ್ಣವನಾದರೂ ಸಕಲ ಶಾಸ್ತ್ರಗಳಲ್ಲಿ ನಿಪುಣನಾಗಿರುವೆಯಾದ್ದರಿಂದ ನೀನೇ ಪುಣ್ಯಶಾಲಿಯು.

ನೀನು ಆ ಮೌನಗುರುವಿನ ಶಿಷ್ಯನಾದ್ದರಿಂದಲೇ ನಿನ್ನಲ್ಲಿ ಇಷ್ಟು ಪಾಂಡಿತ್ಯವು ನೆಲೆಗೊಂಡಿರುವದು. ಇರಲಿ. ನಾವು ಅಜ್ಞಾನದಿಂದ ಮಾಡಿದ ಅಪರಾಧಗಳನ್ನು ಕ್ಷಮಿಸಿ, ನಿಮ್ಮ ಗುರುವಿನಿಂದ ನಮ್ಮ ಲಿಂಗಗಳನ್ನು ಕೊಡಿಸಿ ಕಾಪಾಡು" ಎಂದು ಹೇಳಿಕೊಂಡರು.

ಆಗ ಆ ಬಾಲಕನು:— ಅಕಟಾ! ಗಣಸಮೂಹವೇ, ನೀವು ಬಳಲುವದನ್ನು ನೋಡಿ ನನಗೂ ಸಂಕಟನಾಗುತ್ತಿದೆ; ನನ್ನ ಸಂಗಡ ಬರುವಂಥವರಾಗಿರಿ. ನನ್ನ ಗುರುವನ್ನು ತೋರಿಸಿ ನಿಮ್ಮ ಲಿಂಗಗಳನ್ನು ಕೊಡಿಸುತ್ತೇನೆ, ಎಂದು ಹೇಳುತ್ತ ಮುಂದಕ್ಕೆ ಹೋಗುವವನಂತೆ ನಟಿಸಿ, ಅಲ್ಲಿಯೇ ಮಾಯವಾಗಿ ಹೋದನು.

ಜಂಗಮ ಸಮೂಹವು ಹತಾಶವಾಗಿ:— ಆಹಾ! ಈ ಬಾಲಕನು ಎಂಥ ಮೋಸಗಾರನು? ತನ್ನ ಗುರುವನ್ನು ತೋರಿಸುವೆನೆಂದು ಹೇಳಿ ಇಲ್ಲಿಯೇ ಮಾಯವಾದನು. ಸದ್ಯಕ್ಕೆ ಮೌನಗುರುವಂತೂ ದೊರೆಯುವಂತೆ ಕಾಣಲಿಲ್ಲ. ಇದಕ್ಕೆ ಮುಂದೇನು ಮಾಡೋಣವೆಂದು ಚಿಂತಿಸುತ್ತಿದ್ದಿತು.

ಅವರನ್ನು ನೋಡಿ ಪರ್ವತಪ್ಪನು:— ಗಣಸಮೂಹವೇ, ಮೌನನೆಂದರೆ ಸಾಮಾನ್ಯ ಮಹಿಮನಲ್ಲ. ಆತನ ಮಮೆಯಾಟದಿಂದಲೇ ಸೃಷ್ಟಿ-ಸ್ಥಿತಿ-ಲಯಗಳೆಂಬ ಕಾರ್ಯಗಳು ನಡೆಯುವವು; ಮತ್ತು ಮೌನ ಶಬ್ದವು ನಿರಾಕಾರವೂ, ನಿರ್ಗುಣವೂ, ನಿಶ್ಶಬ್ದವೂ ಆಗಿರುವದು. ಪರಬ್ರಹ್ಮವೆಂದು ಜ್ಞಾನಿಗಳು ಅದಕ್ಕೆ ಹೇಳುವರು. ವೇದಗಳು ಸಹ ಅಗೋಚರವೆಂದು ಹೇಳುವವು. ಶ್ರೀ ರುದ್ರನು ದಕ್ಷಬ್ರಹ್ಮನನ್ನು ಕೊಲ್ಲಲು, ಆ ಬ್ರಹ್ಮಹತ್ಯಾ ದೋಷವು ಭಯಂಕರ ರೂಪದಿಂದ ಶಂಕರನನ್ನು ಬಾಧಿಸಲಿಕ್ಕೆ ಹತ್ತಿತು. ಅದರ ನಿವಾರಣಕ್ಕಾಗಿ ಹಿಮವತ್ಪರ್ವತದಲ್ಲಿ ಕುಳಿತು ಮೌನವೃತ್ತಿಯನ್ನು ಧರಿಸಿ ಆ ಮೌನರೂಪ ಪರಮಾತ್ಮನನ್ನೇ ಕುರಿತು ತಪಸ್ಸು ಮಾಡಿ, ಆ ಬಾಧೆಯನ್ನು ಕಳೆದುಕೊಂಡನು. ಅದರಂತೆ ಎಲ್ಲ ದೇವತೆಗಳು ಬ್ರಹ್ಮಹತ್ಯಾ ದೋಷವು ಬಂದ ಕಾಲದಲ್ಲಿ ಮೌನಪರಮಾತ್ಮನನ್ನೇ ಧ್ಯಾನಿಸಿ, ದೋಷನಿವೃತ್ತಿ ಮಾಡಿಕೊಂಡರು. ಬ್ರಹ್ಮ ಋಷಿಗಳಾಗಲಿ, ದೇವಋಷಿಗಳಾಗಲಿ ಪರಬ್ರಹ್ಮನನ್ನು ಕುರಿತು ತಪಸ್ಸು ಮಾಡುವ ಕಾಲದಲ್ಲಿ ಮೌನ ವೃತ್ತಿಯನ್ನೇ ಧರಿಸಬೇಕಾಗುತ್ತದೆ. ಅಂಥ ದೃಢವಾದ ಮೌನವೃತ್ತಿಯೇ ಇವರ

ಇಷ್ಟದೈವತನಾಗಿ ಮನೋಭೀಷ್ಟೆಯನ್ನು ಕೊಡುವದು; ಕಾರಣ ಅಂಥ ಸದ್ಗುರುವಾದ ಮೌನ ಪರಮಾತ್ಮನೇ ನಮ್ಮ ದೃಢವನ್ನು ಪರೀಕ್ಷಿಸಲಿಕ್ಕಾಗಿ ಅನೇಕ ರೂಪಿನಿಂದ ಬರುತ್ತಿರುವನು. ಮೊದಲು ಬ್ರಾಹ್ಮಣನಾಗಿ ಬಂದು ಶೀಳ ಹಾದಿಯನ್ನು ತೋರಿಸಿದಾತನೂ, ಪುನಃ ಬಾಲಕನಾಗಿ ಬಂದು ಸಚ್ಛಾಸ್ತ್ರದ ಸಾರವನ್ನು ಹೇಳಿ, ಈಗ ಅದೃಶ್ಯನಾದವನೂ ಆತನೇ ಆಗಿರುವ ನೆಂದು ನನಗೆ ತಿಳಿಯುತ್ತದೆ.

ಹೀಗೆ ರೂಪಾಂತರ ಹೊಂದಿ, ಬರುತ್ತಿರುವ ಭಗವಂತನನ್ನು ಅರಿಯುವ ಸಾಮರ್ಥ್ಯವು ನಮ್ಮಲ್ಲಿಲ್ಲದ್ದರಿಂದ ಆತನು ತಪ್ಪಿಸಿಕೊಳ್ಳುವನು. ಅರಿತವರಿಗೆ ಮಾತ್ರ ದೊರೆಯುವನು ಇದಕ್ಕೊಂದು ದೃಷ್ಟಾಂತವನ್ನು ಹೇಳುವೆನು ಕೇಳಿರಿ. ಒಂದು ದಿನ ಪ್ರಭುದೇವರು ಬಸವೇಶ್ವರನ ಭಕ್ತಿಯನ್ನು ನೋಡಲಿಕ್ಕಾಗಿ ಒಂದು ಸತ್ತ ಕರುವನ್ನು ಹೆಗಲ ಮೇಲೆ ಹೊತ್ತುಕೊಂಡು ಕೈಯಲ್ಲಿ ಹೆಂಡದ ಗಡಿಗೆಯನ್ನು ಹಿಡಿದು, ಕೀವೂ, ಮತ್ತು ರಕ್ತವೂ ಸೋರುತ್ತಿರುವ ಗಾಯಗಳುಳ್ಳ ದೇಹದಿಂದ ಕೂಡಿ ಕಲ್ಯಾಣ ಪಟ್ಟಣಕ್ಕೆ ಬಂದನು.

ಆಗ ಆತನು ಮತ್ತಾವ ಓಣಿಯಲ್ಲಿಯೂ ಹೋಗದೆ ಸತ್ಯಸಿದ್ಧಿಯಾದ ಬಸವೇಶ್ವರನ ಅರಮನೆಯ ಬಾಗಿಲಲ್ಲಿ ಬಂದು ನಿಂತನು. ದ್ವಾರಪಾಲಕರು ಆತನನ್ನು ನೋಡಿದ ಕೂಡಲೆ ಮನಸ್ಸಿನಲ್ಲಿ ಹೇಸಿಕೊಂಡು ಕೈಯೊಳಗಿರುವ ಕೋಲಿನಿಂದ ಚನ್ನಾಗಿ ಹೊಡೆದರು. ಆ ಪೆಟ್ಟು ಲಿಂಗಾರ್ಚನೆ ಮಾಡುತ್ತಿರುವ ಬಸವೇಶ್ವರನಿಗೆ ತಗಲಿ ಬಾಸಾಳುಗಳೇಳಲು, ಆತನು ಇದೇನೆಂದು ಬೆರಗಾಗಿ ಕೈಯೊಳಿರುವ ಶಿವಲಿಂಗವನ್ನು ನೋಡಲು, ಪ್ರಭುವು ಕಾಣಿಸಿದನು. ಆ ಕ್ಷಣವೇ ಬಸವೇಶ್ವರನು ಹೊರಗೆ ಬಂದು ಮಾಯಗಾರನಾದ ಪ್ರಭುವಿನ ಚರಣಾರವಿಂದಗಳಿಗೆ ದೀರ್ಘದಂಡ ನಮಸ್ಕಾರ ಮಾಡಿ ಪಲ್ಲಕ್ಕಿಯಲ್ಲಿ ಕೂಡ್ರಿಸಲಿಕ್ಕೆ ಹೋಗಲು, ಬಸವೇಶ್ವರನ ಮೈಯೆಲ್ಲವೂ ಕೀವು-ರಕ್ತಗಳಿಂದ ತುಂಬಿಹೋಯಿತು. ಹಾಗಾದರೂ ಆ ಭಕ್ತಶ್ರೇಷ್ಠನು ಪ್ರಭುವನ್ನು ಎತ್ತಿ ಪಲ್ಲಕ್ಕಿಯಲ್ಲಿ ಕೂಡ್ರಿಸಿ ಒಳಗೆ ಕರೆದುಕೊಂಡು ಹೋಗಿ ಸಿಂಹಪೀಠದಲ್ಲಿ ಕುಳ್ಳಿರಿಸಿ ಪಾದಪೂಜೆಯನ್ನು ಮಾಡಿದನು. ಆತನ ಪತ್ನಿಯಾದ ನೀಲಾಂಬಿಕೆಯು ತನ್ನ ಪೀತಾಂಬರದ ಸೆರಗಿನಿಂದ ಪ್ರಭುವಿನ

ಗಾಯುಗಳಲ್ಲಿ ಸುರಿಯುವ ಕೀವು-ರಕ್ತಗಳನ್ನು ಒರೆಸುತ್ತಿದ್ದಳು. ನೋಡಿರಿ. ಸದ್ಗುರುವಿನ ನಿಜಸ್ಥಿತಿಯನ್ನು ಸದ್ಭಕ್ತರೇ ಬಲ್ಲರಲ್ಲದೆ ಅಜ್ಞರೇನು ಬಲ್ಲರು? ಆ ನಿರ್ಮಲ ಮನಸ್ಸಿನ ದಂಪತಿಗಳು ಭಕ್ತಿಪೂರ್ವಕವಾಗಿ ಪ್ರಭುವಿನ ಪಾದ ಪೂಜೆ ಮಾಡುವದನ್ನು ನೋಡಿ ಅಲ್ಲಿದ್ದ ಜಂಗಮ ಸಮೂಹದಲ್ಲಿ ಕೆಲವರು: ಬಸವೇಶ್ವರನು ಎಂಥ ಹುಚ್ಚನು! ಭವಿಯಾದ ಈ ಘನರೋಗಿ ಯನ್ನು ತಂದು ಪೀಠದಲ್ಲಿ ಕುಳ್ಳಿರಿಸಿ ಶಿವನೆಂದು ಪೂಜಿಸುತ್ತಿರುವನು. ಈತ ಬರಬರುತ್ತ ಬಹು ಅನಾಚಾರ ಮಾಡಲಿಕ್ಕೆ ಹತ್ತಿದನು. ಇನ್ನು ಮಾತ್ರ ಇವನ ಹತ್ತಿರ ಇರುವದು ಯೋಗ್ಯವಲ್ಲವೆಂದು ಅನ್ನುತ್ತ ಪ್ರಭುವಿನ ದೇಹದ ದುರ್ವಾಸ ನೆಗೆ ಹೇಸಿಕೊಂಡು ಹೊರಗೆ ಹೋದರು ಕೂಡಲೆ ಅವರ ಲಿಂಗಗಳು ನಿಮ್ಮ ಹಾಗೆಯೇ ಇಲ್ಲದಂತಾಗಿ ಭವಿಗಳಾಗಿ ಹೋದರು.

ಆಗ ಜಂಗಮ ಸಮೂಹವು ಹೆದರಿ ತಿರುಗಿ ಬಂದು ಪ್ರಭುವಿನ ಚರಣಾರವಿಂದಗಳಿಗೆರಗಿ—ಮಹಾಪ್ರಭೋ, ನಾವು ನಿನ್ನ ಮಹಿಮೆಯನ್ನು ತಿಳಿಯದೆ ಮನ ಬಂದ ಹಾಗೆ ಮಾತಾಡಿ ಭವಿಗಳಾಗಿ ಹೋದೆವು. ನೀನು ಮಾತ್ರ ನಮ್ಮ ಅಪರಾಧವನ್ನು ಮನಸ್ಸಿನಲ್ಲಿ ಹಿಡಿಯದೆ ಕ್ಷಮಿಸಿ ಲಿಂಗ ಗಳನ್ನು ಕೊಟ್ಟು ಉದ್ಧರಿಸು! ಎಂದು ಬೇಡಿಕೊಂಡರು. ಪ್ರಭುವು ಅಂತಃ ಕರಣದಿಂದ ತನ್ನ ಹತ್ತರ ರಾಶಿಯಂತಿರುವ ಅವರ ಲಿಂಗಗಳನ್ನು ಕೊಟ್ಟು ತನ್ನ ನಿಜಸ್ವರೂಪವನ್ನು ತೋರಿಸಿ ಜಂಗಮ ಸಮೂಹಕ್ಕೂ, ಬಸವೇಶ್ವರ ನಿಗೂ ಆಶೀರ್ವಾದ ಮಾಡಿದನು.

ಗಣಸಮೂಹವೇ, ಚಾಂಡಲನ ವೇಷದಿಂದ ಬಂದ ಪ್ರಭುವಿನ ನಿಜ ಸ್ಥಿತಿಯನ್ನು ಕಂಡು ಹಿಡಿಯಬೇಕಾದರೆ ಬಸವೇಶ್ವರನಂಥ ಸಾಮರ್ಥ್ಯವು ನಮಗೆ ಹೇಗೆ ಬರಬೇಕು? ಆದಕಾರಣದಿಂದಲೇ ಮೌನಸದ್ಗುರುವು ಶ್ರೀಷ್ಟ ವರ್ಣದವನಾಗಿ ಬಂದಿದ್ದನು. ಆದರೂ ನಾವು ಆತನನ್ನು ಗುರ್ತ ಹಿಡಿಯ ಲಿಲ್ಲ. ಅಂದ ಮೇಲೆ ನಮ್ಮ ಅಜ್ಞಾನವನ್ನು ಎಷ್ಟೆಂದು ಹೇಳಬೇಕು? ಎಂದು ಉಸುರ್ಗರೆಯುತ್ತ ಕುಳಿತನು.

ಅಷ್ಟರಲ್ಲಿ ಆಕಾಶವು —'ಗಣಸಮೂಹವೇ, ಮೊದಲು ಬ್ರಾಹ್ಮಣನಾಗಿ ತೀರ್ಥವ ಕಾವಡಿಯನ್ನು ಹೊತ್ತುಕೊಂಡು ಬಂದವನೂ, ಪುನಃ ವಿಶ್ವ ಬ್ರಾಹ್ಮಣ ವಂಶದ ಬಾಲಕನಾಗಿ ಬಂದು ಶಾಸ್ತ್ರಾರ್ಥವನ್ನು ಹೇಳಿದವನೂ

ಆ ಮೌನ ಗುರುವೇ ಆಗಿದ್ದನು. ನೀವು ಅಜ್ಞಾನದಿಂದ ಆತನನ್ನು ತಿಳಿಯದೇ ಹೋದಿರಿ. ಈಗ ಮಾತ್ರ ಆ ಪರಮ ಗುರುವು ನಿಜ ರೂಪದಿಂದ ಪ್ರಕಟನಾಗುವನು ಆತನ ಚರಣಾರವಿಂದಗಳನ್ನು ಮೊರೆ ಹೊಕ್ಕು ನಿಮ್ಮ ವ್ಯಸನವನ್ನು ಪರಿಹರಿಸಿಕೊಳ್ಳಿರಿ' ಎಂದು ಹೇಳಿತು.

ಆಗ ಎಲ್ಲರೂ ಪರಮಾಶ್ಚರ್ಯದಿಂದ ನಭೋವಚನವು ಎಂದಿಗೂ ಸುಳ್ಳಾಗಲಾರದು. ಗುರುದರ್ಶನವು ನಮಗೆ ನಿಶ್ಚಯವಾಗಿ ಆಗುವದು. ಎಂದು ಮಾತಾಡುತ್ತಿರಲು,

ಅಷ್ಟರಲ್ಲಿಯೇ ಸ್ವಯಂಭುವಾದ ಮೌನೇಶನು ಎಲ್ಲರ ಮಧ್ಯದಲ್ಲಿ ಪ್ರಕಟನಾಗಿ ನಗುತ್ತ ನಿಂತಿದ್ದನು. ಆಗ ಗಣಸಮೂಹಕ್ಕೆ ಹೊಸ ಜೀವನ ಬಂದಂತಾಗಿ ಗುರುಪಾದಾರವಿಂದಕ್ಕೆ ನಮಸ್ಕರಿಸಿ—ಪರಮಾತ್ಮಾ, ನಿನ್ನ ಮಹಿಮೆಯನ್ನು ಅರಿಯದೆ ಭವಿ ಎಂದು ಹೊರಗೆ ದೂಡಿ ನಾವೆಲ್ಲರೂ ಭವಿಗಳಾಗಿ ಮಹಾ ಸಂಕಟವನ್ನು ಅನುಭವಿಸಿದೆವು. ಸದ್ಗುರೋ, ನಮ್ಮ ಅಪರಾಧವು ಎಷ್ಟಿದ್ದರೂ ಕ್ಷಮಿಸಿ ನಮ್ಮ ಲಿಂಗಗಳನ್ನು ಕೊಟ್ಟು ರಕ್ಷಿಸು, ಎಂದು ಬೇಡಿಕೊಂಡರು. ಪರ್ವತಪ್ಪನಂತೂ ಮೌನೇಶನನ್ನು ಕಂಡಾಕ್ಷಣವೇ ಆನಂದಸಾಗರದಲ್ಲಿ ಮುಳುಗಿ ಆತನ ಪಾದಾರವಿಂದಗಳ ಮೇಲೆ ಬಿದ್ದು:—ಜಗದ್ರಕ್ಷಕಾ, ನೀನೇ ಹೀಗೆ ನಿರ್ದಯನಾದರೆ ಭಕ್ತರ ಕಾರ್ಯವು ಪೂರ್ಣವಾಗುವ ಬಗೆ ಹೇಗೆ? ದಯವಿಟ್ಟು ಇವರ ಲಿಂಗಗಳನ್ನು ಕೊಟ್ಟು ಕಾಪಾಡು, ಎಂದು ಪ್ರಾರ್ಥಿಸಿದನು

ಮೌನೇಶನು:—ಅಜ್ಜಾ, ನಿನ್ನ ಕಾರ್ಯವು ನಿರ್ವಿಘ್ನವಾಗಿ ಪೂರ್ಣವಾಗಬೇಕೆಂತಲೇ ನಾನು ಬಂದಿದ್ದೆನಲ್ಲದೆ ನಿನ್ನ ಮೇಲೆ ನಾನೆಲ್ಲಿ ನಿರ್ದಯನಾಗಿರುವೆನು? ಇವರ ಲಿಂಗಗಳನ್ನು ಕೊಡಲಿಕ್ಕೆ ನಾನು ತೆಗೆದುಕೊಂಡಿರುವೆನೇ ಹೇಗೆ? ಇವರ ಲಿಂಗಗಳು ಇವರ ಹತ್ತರವೇ ಇರುವವು. ಬೇಕಾದರೆ ವಸ್ತ್ರ-ಕರಡಿಗೆಗಳನ್ನು ಬಿಚ್ಚಿ ನೋಡಲಿ, ಎಂದನು

ಪರ್ವತಪ್ಪನು ಗುರುಮಹಿಮೆಯನ್ನು ಅರಿತವನಾದ್ದರಿಂದ ಜಂಗಮಸಮೂಹವನ್ನು ಕುರಿತು:—ಗಣಸಮೂಹವೇ, ಇನ್ನು ಯಾವ ಚಿಂತೆಯನ್ನೂ ಮಾಡಬೇಡಿರಿ ಗುರುವಾಕ್ಯವು ಎಂದಿಗೂ ಸುಳ್ಳಾಗಲಾರದು. ನಿಮ್ಮ ವಸ್ತ್ರಗಳನ್ನು ಬಿಚ್ಚಿ ನೋಡಿರಿ, ಎಂದು ಹೇಳಿದನು. ಜಂಗಮಸಮೂ

ಹವು ಪರ್ವತಪ್ಪನ ಸೂಚನೆಯಂತೆ ವಸ್ತ್ರ-ಕಾಡಿಗೆಗಳನ್ನು ಬಿಚ್ಚಿ ನೋಡಲು ಮೊದಲಿನಂತೆ ಎಲ್ಲರ ಲಿಂಗಗಳೂ ಇದ್ದವು. ಅದನ್ನು ಕಂಡು ಗಣಸಮೂಹವು ಬೆರಗಾಗಿ—ಈತನು ಸಾಕ್ಷಾತ್ ಪರಮೇಶ್ವರನೇ ನಿಜವೆಂದು ಪುನಃ ಆತನ ಚರಣಗಳಿಗೆರಗಿದರು.

ಪರ್ವತಪ್ಪನು ಮೌನೇಶನನ್ನು ಕುರಿತು—ಸದ್ಗುರೋ, ನೀನೇ ಈ ರೀತಿಯಾಗಿ ಪರೀಕ್ಷೆ ಮಾಡಿದರೆ ಅಜ್ಞರಾದ ನಾವು ಉಳಿಯುವ ಬಗೆ ಹೇಗೆ? ಇರಲಿ. ನೀನು ಈ ಜಂಗಮ ಸಮೂಹದೊಡನೆ ದಯಮಾಡಿಸಿ ಈ ಸೇವಕನ ಕಾರ್ಯವನ್ನು ಪೂರ್ಣ ಮಾಡು, ಎಂದು ಮೌನೇಶನನ್ನೂ, ಜಂಗಮ ಸಮೂಹವನ್ನೂ ಕರೆದುಕೊಂಡು ತಮ್ಮ ಸ್ಥಳಕ್ಕೆ ಬಂದು ನೋಡಲು, ಮೌನೇಶನ ಕೃಪೆಯಿಂದ ಮೂರು ದಿವಸದ ಹಿಂದೆ ಮಾಡಿದ ಅಡಿಗೆಯು ಸ್ವಲ್ಪಾದರೂ ಕೆಡದೆ, ಈಗ ಮಾಡಿದ ಬಿಸಿಯಾದ ಮೃಷ್ಟಾನ್ನದಂತೆ ಘಮಘಮಿಸುತ್ತಿತ್ತು. ಅಲ್ಲಿರುವ ಎಲ್ಲ ಜನರೂ ಸ್ವಲ್ಪಾದರೂ ಹಸಿವೆ ಇಲ್ಲದೆ ಸಂತೋಷದಿಂದಿದ್ದರು. ಇದನ್ನು ನೋಡಿ ಪರ್ವತಪ್ಪನೂ, ಗಣಸಮೂಹವೂ ಆಶ್ಚರ್ಯಭರಿತರಾಗಿ ಮೌನಗುರುವನ್ನು ಕೊಂಡಾಡಿದರು. ಅನಂತರ ಪರ್ವತಪ್ಪನು ಗುರುಕರುಣದಿಂದ ಜಂಗಮ ಸಮೂಹಕ್ಕೆ ಮೃಷ್ಟಾನ್ನದಿಂದ ತೃಪ್ತಿಗೊಳಿಸಿ, ದಕ್ಷಿಣೆ-ತಾಂಬೂಲಾದಿಗಳಿಂದ ಸಂತುಷ್ಟಪಡಿಸಿದನು. ಗಣಸಮೂಹವು ಮೌನಗುರುವಿಗೆ ನಮಸ್ಕರಿಸಿ, ಆತನಿಂದ ಆಶೀರ್ವಾದ ಹೊಂದಿ ತಮ್ಮ-ತಮ್ಮ ಸ್ಥಳಗಳಿಗೆ ತೆರಳಿತು. ಪರ್ವತಪ್ಪನು ಜಾತ್ರೆಯ ಕೆಲಸವನ್ನು ಮುಗಿಸಿಕೊಂಡು ಮೌನೇಶನನ್ನೂ, ತನ್ನ ಪರಿವಾರವನ್ನೂ ಕೂಡಿಕೊಂಡು ಗೋನಾಲಕ್ಕೆ ಬಂದು ರಾಚೋಟಿಯಲ್ಲಿ ನಡೆದ ಸಮಾಚಾರವನ್ನೆಲ್ಲ ಮೌನೇಶನ ತಂದೆ-ತಾಯಿಗಳಿಗೆ ಹೇಳಿ, ಅತಿ ಸೌಖ್ಯದಿಂದಿದ್ದನೆಂಬಲ್ಲಿಗೆ ಐದನೇ ಅಧ್ಯಾಯ ಸಂಪೂರ್ಣವು.



ಶ್ರೀ ಮೌನಗುರು ಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ಆರನೆಯ ಅಧ್ಯಾಯ



—ಶ್ರೀ ಕಾಶೀಕ್ಷೇತ್ರದಲ್ಲಿ ಮಾಹಾತ್ಮ್ಯ ತೋರಿಸಿದ್ದು.—

ಪವಿತ್ರವಾಗಿಯೂ ಪುಣ್ಯಪ್ರದವಾಗಿಯೂ, ದರ್ಶನ ಮಾತ್ರದಿಂದ ಪ್ರಾಣಿಗಳ ಪಾಪರಾಶಿಯನ್ನು ನಾಶಮಾಡತಕ್ಕ ಸಾಮರ್ಥ್ಯವುಳ್ಳದಾಗಿಯೂ ಇರುವ ಶ್ರೀ ಕಾಶೀಕ್ಷೇತ್ರವೇ ಎಲ್ಲ ಕ್ಷೇತ್ರಗಳಲ್ಲಿ ಶ್ರೇಷ್ಠವಾದದ್ದೆಂದು ಹೆಸರುಗೊಂಡಿರುವದು. ಆ ಸ್ಥಳದಲ್ಲಿ ದೇವಾಧಿದೇವನಾದ ಶ್ರೀ ಮಹಾದೇವನೇ ವಿಷ್ಣು-ಬ್ರಹ್ಮಾದಿ ದೇವತೆಗಳಿಂದ ಕೂಡಿ, ವಿಶ್ವೇಶ್ವರನೆಂಬ ಹೆಸರಿನಿಂದ ನೆಲೆಸಿರುವನೆಂದು ಪುರಾಣ ಪ್ರಸಿದ್ಧವಾಗಿರುವದು; ಮತ್ತು ಆ ಮಹಾತ್ಮನ ಜಟಾಮುಕುಟದಲ್ಲಿ ಶುಶೋಭಿತಳಾದ ಶ್ರೀ ಗಂಗಾದೇವಿಯೇ ಭಾಗೀರಥಿಯಾಗಿ ಅಲ್ಲಿ ಹರಿಯುತ್ತಿರುವದರಿಂದ ಆ ನದಿಯಲ್ಲಿ ಸ್ನಾನ ಮಾಡಿ, ವಿಶ್ವೇಶ್ವರನ ದರ್ಶನ ಮಾಡಿಕೊಂಡವರ ಪಾಪಸಮೂಹವು ನಾಶವಾಗಿ ಮೋಕ್ಷಪ್ರಾಪ್ತಿಯಾಗುವದೆಂದು ಜ್ಞಾನಿಗಳು ಹೇಳುತ್ತಿರುವರು; ಇದಲ್ಲದೆ ಆ ಸ್ಥಳದಲ್ಲಿ ಅನ್ನದಾನ, ದ್ರವ್ಯದಾನ, ಗೋದಾನ, ಭೂದಾನಗಳನ್ನು ಮಾಡಿದರೆ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳೆಂಬ ಚತುರ್ವಿಧ ಪದವಿಗಳು ದೊರೆಯುವವಾದ್ದರಿಂದ ಆ ಕ್ಷೇತ್ರಕ್ಕೆ ಭೂಕೈಲಾಸವೆಂದು ಹೆಸರು ಬಿದ್ದಿರುವದು. ಆ ಸ್ಥಳದಲ್ಲಿ ಮರಣ ಹೊಂದಿದ ಎಲ್ಲ ಪ್ರಾಣಿಗಳಿಗೂ ಮೋಕ್ಷವಾಗುವದೆಂಬದಕ್ಕೆ ಬಲಗಿವಿ ಮೇಲಾಗಿ ಪ್ರಾಣ ಬಿಡುವದೇ ಸಾಕ್ಷಿಯಾಗಿರುವದು; ಆದಕಾರಣದಿಂದ ಆ ಸ್ಥಲಕ್ಕೆ ಪುಣ್ಯಸ್ಥಲವೆಂತಲೂ, ಪವಿತ್ರಸ್ಥಲವೆಂತಲೂ, ಅನ್ನುತ್ತಿರುವರು.

ಇಂಥ ಸುಕ್ಷೇತ್ರವೆನಿಸಿದ ಕಾಶಿಯಲ್ಲಿ ಗುಪ್ತದೀಕ್ಷಿತನೆಂಬ ಶ್ರೀಮಂತ ಬ್ರಾಹ್ಮಣನೊಬ್ಬನು ಸತಿ ಸಹಿತವಾಗಿ ವಾಸಿಸುತ್ತಿದ್ದನು. ಆತನು ಶ್ರೀ ಲಕ್ಷ್ಮೀನಾರಾಯಣ ದೇವರ ಗುಡಿಯಲ್ಲಿ ನೂರುಸಾವಿರ ಬ್ರಾಹ್ಮಣರಿಗೆ

ಭೋಜನ ಮಾಡಿಸಬೇಕೆಂಬ ಸಂಕಲ್ಪವುಳ್ಳವನಾಗಿ ಎಲ್ಲ ಸಾಹಿತ್ಯವನ್ನು ತರಿಸಿ ಅಡಿಗೆಯ ಕೆಲಸವನ್ನು ನಡೆಸಿ, ಬ್ರಾಹ್ಮಣಸಮೂಹಕ್ಕೆ ಆಮಂತ್ರಣ ಕೊಟ್ಟನು. ಶ್ರೀಮಂತರ ಮನೆಯ ಭೋಜನಕ್ಕೆ ಬರದಿರುವವರಾರು? ದೀಕ್ಷಿತರ ಆಮಂತ್ರಣದಿಂದ ಹಾ ಹಾ ಅನ್ನುವಷ್ಟರಲ್ಲಿ ಬ್ರಾಹ್ಮಣರ ಸಮೂಹವು ಒಟ್ಟುಗೂಡಿತು. ಅಡಿಗೆಯು ಸಿದ್ಧವಾಯಿತು ಶ್ರೀ ಲಕ್ಷ್ಮೀನಾರಾಯಣ ದೇವರ ಪೂಜೆಯಾಗಿ ನೈವೇದ್ಯಸಮರ್ಪಣ ಕಾರ್ಯವು ಪೂರ್ಣವಾಯಿತು. ಆಗ ಎಲ್ಲ ಬ್ರಾಹ್ಮಣರಿಗೆ ಎಲೆಗಳನ್ನು ಹಾಕಿ, ಹೋಳಿಗೆ ಪಾಯಸ ಅನ್ನ ಕೋಸಂಬರಿ ಪಲ್ಲೆ ಮುಂತಾದ ಎಲ್ಲ ಸಾಮುಗ್ರಿಗಳನ್ನು ಬಡಿಸಿದರು. ಇನ್ನು ಏಕೋವಿಷ್ಣು ಬಿಡುವ ಸಮಯ, ಅಷ್ಟರಲ್ಲಿ ಅತ್ಯಂತ ದರಿದ್ರನಾದ ಒಬ್ಬ ಬ್ರಾಹ್ಮಣನು ಭೋಜನಕ್ಕಾಗಿ ಅಲ್ಲಿಗೆ ಬಂದನು. ಆತನು ಅಲ್ಲಲ್ಲಿ ಹರಿದಿರುವ ಮಾಸಿದ ಬಟ್ಟೆಯನ್ನುಟ್ಟಿದ್ದನು; ತಲೆಗೂದಲು ಜಡೆಗಟ್ಟಿ ಹೋಗಿದ್ದವಾದ್ದರಿಂದ ಅವು ಎಂದೂ ಎಣ್ಣೆಯನ್ನೇ ಕಂಡಿಲ್ಲವೆನ್ನುವಹಾಗೆ ತೋರುತ್ತಿತ್ತು. ದೇಹವು ದುರ್ವಾಸನೆಯಿಂದ ಕೂಡಿ ಹೋಗಿತ್ತಾದ ಕಾರಣ ಬಹು ದಿವಸ ಸ್ನಾನವನ್ನೇ ಮಾಡಿಲ್ಲವೆಂದು ಒಡೆದು ಕಾಣುತ್ತಿತ್ತು. ಅವನ ಯಜ್ಞೋಪವೀತವು ಹೆಚ್ಚಾಗಿ ಗಂಟಿನದಿತ್ತು. ಅವನು ತನ್ನ ಕೆಂಡದಂತಿರುವ ಕಣ್ಣುಗಳಿಂದ ಜನರನ್ನು ಹುಳು-ಹುಳು ನೋಡುತ್ತಿರುವದರಿಂದಲೂ, ತನ್ನಷ್ಟಕ್ಕೆ ತಾನೇ ನಡುಗುತ್ತಿರುವದರಿಂದಲೂ, ಆ ಬ್ರಾಹ್ಮಣನು ತೀರ ಹುಚ್ಚನಿರುವನೆಂದು ಒಡೆದು ಕಾಣಿಸುತ್ತಿತ್ತು. ಬ್ರಾಹ್ಮಣನು ಇಷ್ಟು ವರಿಪ್ರಸ್ಥಿತಿಯಲ್ಲಿದ್ದರೂ ಆತನ ಕೈಯಲ್ಲಿರುವ ತಂಬಿಗೆ-ಪಂಚಪಾತ್ರೆಗಳು ಮಾತ್ರ ಥಳಥಳಾಯಮಾನವಾಗಿ ಹೊಳೆಯುತ್ತಿದ್ದವು.

ಹೀಗಿರುವ ಆ ಬ್ರಾಹ್ಮಣನನ್ನು ನೋಡಿ ಎಲ್ಲಿರೂ ಅಸಹ್ಯಪಟ್ಟರಲ್ಲದೆ ನಮ್ಮ ಸಮೂಹದಲ್ಲಿ ಇವನೇಕೆ ಬಂದಿರುವನೆಂದು ಅಂದರು. ಅವರೊಳ್ಳೊಬ್ಬ ಬ್ರಾಹ್ಮಣನು — ಏನಯ್ಯಾ, ನೀನು ಯಾರು? ಇಲ್ಲಿಗೆ ಯಾತಕ್ಕೆ ಬಂದೆ? ಎಂದು ಕೇಳಿದನು.

ಆ ಮಾತಿಗೆ ಆ ದರಿದ್ರ ಬ್ರಾಹ್ಮಣನು: — ನಾನೊಬ್ಬ ಬಡ ಬ್ರಾಹ್ಮಣ. ದೀಕ್ಷಿತರು ಬ್ರಾಹ್ಮಣ ಸಂತರ್ಪಣೆ ಮಾಡಿಸುವರೆಂಬುದನ್ನು ಕೇಳಿ, ಭೋಜನಕ್ಕೆ ಬಂದೆನು, ಎಂದು ಹೇಳಿದನು.

ಅದನ್ನು ಕೇಳಿ ಕೆಲವರು:—ಛೀ! ಛೀ! ಇವನ ಸ್ಥಿತಿಯನ್ನು ನೋಡು ತ್ತಿರಲಾಗಿ ಶೂದ್ರನ ಹಾಗಿರುವನು; ಇಂಥವನು ಬ್ರಾಹ್ಮಣರ ಪಂಕ್ತಿಯಲ್ಲಿ ಕುಳಿತು ಭೋಜನ ಮಾಡಲಿಕ್ಕೆ ಅರ್ಹನಲ್ಲವೆಂದು ಅಂದರು.

ಮತ್ತೆ ಕೆಲವರು:—ಥೂ! ಥೂ! ಇವನ ದೇಹದ ದುರ್ಗಂಧವನ್ನೂ, ಇವನು ಉಟ್ಟಿರುವ ಮಲಿನವಾದ ಬಟ್ಟೆಯನ್ನೂ ನೋಡಿದರೆ ಬ್ರಾಹ್ಮಣ ನೆಂದು ಯಾರೂ ಅನ್ನಲಿಕ್ಕಿಲ್ಲ. ಇವನನ್ನು ಹತ್ತರ ಕುಳ್ಳಿರಿಸಿಕೊಂಡು ಭೋಜನ ಮಾಡಿದರೆ ಓಕರಿಕೆ ಹುಟ್ಟುವದೇ ಸರಿ! ಕಾರಣ ಈ ಕುರೂ ಪಿಯು ನಮ್ಮ ಸಮೂಹದಲ್ಲಿ ಖಂಡಿತವಾಗಿ ಬೇಡವೆಂದು ಹೇಳಿದರು.

ಕೆಲವರು:—ಎಂಥವನೇ ಇರಲಿ. ಊಟದ ವೇಳೆಗೆ ಸರಿಯಾಗಿ ಬಂದ ಬ್ರಾಹ್ಮಣನನ್ನು ತೃಪ್ತಿಪಡಿಸದೆ ಕಳಿಸಿದ್ದಾದರೆ ಮಹಾ ದೋಷಕ್ಕೆ ಕಾರಣ ವಾಗುವದು. ಅವನು ಅಪವಿತ್ರನಿದ್ದರೆ ನಿಮ್ಮನ್ನೇನು ಮಾಡುವನು? ತನ್ನ ಎಲೆಯಲ್ಲಿ ತಾನು ಭೋಜನ ಮಾಡುವನು. ಇದಲ್ಲದೆ ದೇವಸ್ಥಾನದಲ್ಲಿಯೂ ಗುರುಸ್ಥಾನಗಳಲ್ಲಿಯೂ ಶ್ರೇಷ್ಠ ಕನಿಷ್ಠಗಳನ್ನು ನೋಡಬಾರದೆಂದು ಧರ್ಮ ಶಾಸ್ತ್ರವಿರುವದು, ಎಂದು ಅಂದರು.

ಬ್ರಾಹ್ಮಣ ಸಮೂಹದ ಈ ಗದ್ದಲವನ್ನು ನೋಡಿ ಕಾರ್ಯಕರ್ತೃ ವಾದ ದೀಕ್ಷಿತರು:—“ಬ್ರಾಹ್ಮಣ ಸಮೂಹವೇ, ಬ್ರಾಹ್ಮಣರೆಂದರೆ ಪವಿತ್ರರೇ ಇರಲಿ, ಅಪವಿತ್ರರೇ ಇರಲಿ ಎಲ್ಲರೂ ನನಗೆ ನಾರಾಯಣಸ್ವರೂಪರೇ ಆಗಿರು ವರು. ಆದಕಾರಣ ಬ್ರಾಹ್ಮಣನೆಂದು ಭೋಜನಕ್ಕೆ ಬಂದ ಮೇಲೆ ನಾವು ಈತನನ್ನು ತೃಪ್ತಿಪಡಿಸದೆ ಕಳಿಸಿದ್ದಾದರೆ ಬ್ರಾಹ್ಮಣನಿಗೆ ಅಪಮಾನ ಮಾಡಿದ ದೋಷಕ್ಕೆ ಭಾಗಿಗಳಾಗುವೆವಲ್ಲದೆ, ಜಗದ್ವ್ಯಾಪಕನಾದ ನಾರಾ ಯಣನ ಅಪಮಾನ ಮಾಡಿದಂತಾಗಿ ರೌರವ ನರಕದಲ್ಲಿ ಬಿದ್ದು ಕೊಳೆಯ ಬೇಕಾದೀತು. ಕಾರಣ ತಾವೆಲ್ಲರೂ ದಯವಿಟ್ಟು ಈತನಿಗೆ ತಮ್ಮ ಸಮೂಹ ದಲ್ಲಿ ಭೋಜನ ಮಾಡಲಿಕ್ಕೆ ಅಪ್ಪಣೆ ಕೊಟ್ಟು ನಮ್ಮ ಈ ಸಂತರ್ಪಣೆಕಾರ್ಯ ವನ್ನು ಸಫಲಗೊಳಿಸಿರಿ.” ಎಂದು ಹೇಳಿದರು.

ಆ ಮಾತಿಗೆ ಎಲ್ಲ ಬ್ರಾಹ್ಮಣರು ಸಮ್ಮತಿಪಡಲು, ಆತನಿಗೊಂದು ದೊಡ್ಡ ಎಲೆಯನ್ನು ಹಾಕಿ ಮೃಷ್ಟಾನ್ನವನ್ನು ಬಡಿಸಿ, ಕೃಷ್ಣಾರ್ಪಣವೆಂದು ಹೇಳಿದರು. ಆಗ ಬ್ರಾಹ್ಮಣರ ಭೋಜನವು ಪ್ರಾರಂಭವಾಯಿತು. ಹುಚ್ಚೆ

ಬ್ರಾಹ್ಮಣನಂತೂ ತನ್ನ ಎಲೆಯೊಳಗೆ ಬಡಿಸಿದ ಹೋಳಿಗೆ, ಪಾಯಸ, ಅನ್ನ ಕೋಸುಂಬರಿ, ಪಲ್ಲೆ ಮುಂತಾದವುಗಳೆಲ್ಲವನ್ನೂ ಒಟ್ಟಾಗಿ ಕಲೆಸುತ್ತಲೂ, ಜನರನ್ನು ಹುಳು-ಹುಳಿ ನೋಡುತ್ತಲೂ, ದೊಡ್ಡ ದೊಡ್ಡ ತುತ್ತನ್ನು ತೆಗೆದುಕೊಂಡು ಅರ್ಧ ನುಂಗುತ್ತಲೂ, ಅರ್ಧ ಸೂರೆಮಾಡುತ್ತಲೂ ಹೋಳಿಗೆಗಳನ್ನು ಬಡಿಸಿರಿ, ದೊನ್ನೆಗಳ ತುಂಬ ತುಪ್ಪವನ್ನು ಹಾಕಿರಿ, ಎಂದು ಅನ್ನುತ್ತಿದ್ದನು

ಆತನ ಈ ಅಕ್ರಮವನ್ನು ನೋಡಿ ಬ್ರಾಹ್ಮಣರು:—ಇವನೆಂಥ ಹೇಸಿ ಬ್ರಾಹ್ಮಣನು? ಇಂಥವನನ್ನು ನಾವು ಎಲ್ಲಿಯೂ ಕಾಣಲಿಲ್ಲ. ಒಂದು ತುತ್ತು ತಿಂದರೆ ಎರಡು ತುತ್ತು ಕೆಡಿಸುವನಲ್ಲದೆ, ಮೇಲಿಂದ ಮೇಲೆ ಬಡಿಸಿರೆಂದು ಅನ್ನುತ್ತಲೇ ಇರುವನು ಇವನ ಪರಿಯನ್ನು ಕೇಶವನೇ ಬಲ್ಲನು. ಇವನು ಹೀಗೆ ಮಾಡುವನೆಂದು ಬಡಿಸದೇ ಬಿಟ್ಟರೆ, ನಮಗೆ ದೋಷ ಪ್ರಾಪ್ತಿಯಾಗುವದು; ಕಾರಣ ಇವನು ತೃಪ್ತಿಯಾಗುವ ಹಾಗೆ ಮೃಷ್ಟಾನ್ನವನ್ನು ಬಡಿಸಿರಿ ಎಂದು ಅನ್ನುತ್ತಿದ್ದರು.

ಊಟಕ್ಕೆ ಬಡಿಸುವವರು ಹೋಳಿಗೆಯ ಮೊದೆಗಳನ್ನೂ, ದೊನ್ನೆಗಳ ತುಂಬ ತುಪ್ಪವನ್ನೂ ಬಡಿಸಿ:—ಸಾವಕಾಶ ಹೊಟ್ಟೆ ತುಂಬುವವರೆಗೂ ಭೋಜನ ಮಾಡು, ಎಂದು ಅನ್ನಲು, ಬ್ರಾಹ್ಮಣನು ನಗುತ್ತ:—'ನಾರಾಯಣನು ನಿಮಗೆ ಕ್ಷೇಮವನ್ನುಂಟು ಮಾಡಲಿ' ಎಂದು ಎಲೆಯೊಳಗೆ ಬಡಿಸಿದ ಹೋಳಿಗೆಗಳನ್ನೆಲ್ಲ ಉಂಡು, ಮತ್ತೆ ತೆಗೆದುಕೊಂಡು ಬನ್ನಿರಿ, ಎಂದು ಅಂದನು ಬ್ರಾಹ್ಮಣರೆಲ್ಲರೂ ಆಶ್ಚರ್ಯಪಟ್ಟು ಇವನು ಎಷ್ಟು ಉಣ್ಣುವನೋ ನೋಡಿಯೇ ಬಿಡಬೇಕೆಂದು ಮತ್ತೊಂದು ದೊಡ್ಡ ಎಲೆಯನ್ನು ಹಾಕಿ, ಮೇಲಿಂದ ಮೇಲೆ ಹೋಳಿಗೆಯ ಮೊದೆಗಳನ್ನು ತಂದು ಬಡಿಸುತ್ತಿದ್ದರು. ಬ್ರಾಹ್ಮಣನಾದರೂ ಹೋಳಿಗೆ ತರುವವರೊಳಗಾಗಿ ತುಪ್ಪವನ್ನೂ ತುಪ್ಪ ತರುವವರೊಳಗಾಗಿ ಹೋಳಿಗೆಯನ್ನೂ ಉಣ್ಣುತ್ತಿದ್ದನು. ಕೋಸಂಬರಿ ಪಲ್ಲೆಗಳನ್ನಂತೂ ಎರಡೂ ಕೈಗಳಿಂದ ತೆಗೆದುಕೊಂಡು ಭುಂಜಿಸುತ್ತಿದ್ದನು. ಊಟಕ್ಕೆ ಬಡಿಸುವವರು ಬಡಿಸಿ ಬಡಿಸಿ ಬೇಸತ್ತು ಹೋದರು. ಮಾಡಿರುವ ಹೋಳಿಗೆಗಳೆಲ್ಲವೂ ತೀರಿಹೋದವು, ಪಾಯಸವೂ ಆಯಿತು; ಸಾರಿನ ಪಾತ್ರೆಗಳು ಬರಿದಾಗಿ ಹೋದವು. ಇಷ್ಟಾದರೂ ಮತ್ತೂ ತೆಗೆದು

ಕೊಂಡು ಬನ್ನಿರಿ, ಎಂದು ಅನ್ನುತ್ತಲೇ ಇದ್ದನು. ಬ್ರಾಹ್ಮಣರೆಲ್ಲರೂ ಆ ಹುಚ್ಚ ಬ್ರಾಹ್ಮಣನ ಊಟವನ್ನು ನೋಡಿ ಬೆರಗಾಗಿ ಅರ್ಧ ಊಟಕ್ಕೇ ಎದ್ದು ಕೈತೊಳೆಕೊಂಡರು. ದೀಕ್ಷಿತರು ಬ್ರಾಹ್ಮಣ ಸಮೂಹಕ್ಕೆ ತೃಪ್ತಿಯಾಗದ್ದರಿಂದ ತನ್ನ ಸತ್ಕಾರ್ಯವು ಸಫಲವಾಗಲಿಲ್ಲವೆಂದು ಚಿಂತಿಸುತ್ತಿದ್ದರು.

ಆಗ ಆ ದರಿದ್ರ ಬ್ರಾಹ್ಮಣನು ತಾನೂ ಎದ್ದು, ಕೈ ತೊಳೆಯದೆ ಮುಸುರೆ ಕೈಯಿಂದಲೇ ದೀಕ್ಷಿತರನ್ನು ಕುರಿತು:—ದೀಕ್ಷಿತರೇ, ಇದೆಂಥ ಸಂತರ್ಪಣೆ ಮಾಡಿದಿರಿ? ಪಾಪ! ಈ ಬ್ರಾಹ್ಮಣರಿಗೆ ಮೊದಲು ಬಡಿಸಿದ ಹೋಳಿಗೆಯು ವಿನಃ ಹೋಳಿಗೆಗಳನ್ನು ಬಡಿಸಲಿಲ್ಲವಾದ್ದರಿಂದ ಇವರಿಗೆ ತೃಪ್ತಿಯು ಹೇಗಾಗಬೇಕು? ಹೀಗೆ ಮಾಡಿದರೆ ಇದರಿಂದ ನಿಮಗೆ ಉತ್ತಮ ಫಲವಾದರೂ ಹೇಗೆ ದೊರೆಯಬೇಕು? ಎಂದು ನಗುತ್ತಿದ್ದನು.

ಬ್ರಾಹ್ಮಣರು ಅವನ ಹಾಸ್ಯದ ಮಾತಿಗೆ ಸಿಟ್ಟಿಗೆದ್ದು:—'ಎಲೋ ಹುಚ್ಚನೇ, ನಿನಗೆ ಹೆಚ್ಚಿನ ಮಾತುಗಳೇತಕ್ಕೆ? ಬ್ರಾಹ್ಮಣನಾದವನು ಸ್ವಚ್ಛ ರೀತಿಯಿಂದಿರಬೇಕು; ಹಾಗಾದರೆ ಅಚ್ಯುತನ ಪ್ರೀತಿಗೆ ಪಾತ್ರನಾಗುವನು. ನೀನು ಹಲ್ಲುಗಳಿಂದ ಕಚ್ಚಿ ಕಚ್ಚಿ ಸೂರೆ ಮಾಡಿದ ಮುಸುರೆಯನ್ನು ಯಾರು ತೆಗೆಯಬೇಕು? ನೀನೇ ನಿನ್ನ ಊಟದ ಎಲೆಯನ್ನೂ, ಇಲ್ಲಿ ಚಲ್ಲಿರುವ ಮುಸುರೆಯನ್ನೂ ತೆಗೆದು ಹಾಕಿ ಗೋಮಯವನ್ನು ಹಚ್ಚಿ ಹೋಗು' ಎಂದು ಹೇಳಿದರು

ಆ ಮಾತಿಗೆ ದರಿದ್ರ ಬ್ರಾಹ್ಮಣನು:—ಓಹೋ! ಹುಚ್ಚನು ಊಟ ಮಾಡಿದ ಎಲೆಯನ್ನು ಜಾಣರಾದ ನೀವು ತೆಗೆಯುವದಾದರೂ ಹೇಗೆ? ಗುಡಿಯೊಳಗಿನ ಲಕ್ಷ್ಮೀ-ನಾರಾಯಣರು ತೆಗೆಯುವರು, ಎಂದು ಅನ್ನುತ್ತ ದೇವರ ಕಡೆಗೆ ದಿಟ್ಟಿಸಿ ನೋಡಿ:—ಹೇ ಜಗತ್ಪಾಲಕರಾದ ಲಕ್ಷ್ಮೀನಾರಾಯಣರುಗಳಿರಾ, ನಾನು ಭೋಜನ ಮಾಡಿದ ಎಲೆಯನ್ನು ಆಚಾರಶೀಲರಾದ ಈ ಬ್ರಾಹ್ಮಣರು ತೆಗೆಯುವದಿಲ್ಲವಂತೆ ಆದಕಾರಣ ದಂಪತಿಗಳಾದ ನೀವಿಬ್ಬರೂ ಬಂದು ತೆಗೆದು ಹಾಕಿರಿ. ಭಾಗೀರಥಿಯು ಗೋಮಯ ಹಚ್ಚಲಿ, ಎಂದು ಹೇಳಿದನು.

ಆ ಕ್ಷಣವೇ ಶಾಲಿಗ್ರಾಮ ಶಿಲೆಯಿಂದ ನಿರ್ಮಿತ ಮೂರ್ತಿಗಳಾದ ಆ ಶ್ರೀ ಲಕ್ಷ್ಮೀ-ನಾರಾಯಣರು ಪರಿಮಳಿಸುತ್ತಿರುವ ಚಂದನ-ಕಸ್ತೂರಿ-ಪಚ್ಚ

ಕರ್ಪೂರ-ಶ್ರೀಗಂಧ-ಅಕ್ಷತೆಗಳಿಂದಲೂ, ತುಲಸಿ ಮಲ್ಲಿಗೆ ಮುಂತಾದ ಹೂ ಮಾಲೆಗಳಿಂದಲೂ, ರತ್ನ ಖಚಿತವಾದ ಆಭರಣಗಳಿಂದಲೂ ಭೂಷಿತರಾಗಿ ಗರ್ಭ ಗುಡಿಯೊಳಗಿಂದ ಹೊರಗೆ ಬಂದು ದರಿದ್ರ ಬ್ರಾಹ್ಮಣನು ಉಂಡ ಎಲೆಯನ್ನೂ ಕೆಳಗೆ ಚಲ್ಲಿರುವ ಮುಸುರೆಯನ್ನೂ ತೆಗೆದು ಹಾಕಿದರು. ಭಾಗೀರಥಿಯು ಸಕಲಾಭರಣಗಳಿಂದ ಝಗಝಗಿಸುತ್ತ ನಿಜರೂಪಿನಿಂದ ಪ್ರಕಟಳಾಗಿ ಗೋಮಯವನ್ನು ಹಚ್ಚಿ ನೀರನ್ನು ಹಾಕಿದಳು; ಮತ್ತು ಆ ಲಕ್ಷ್ಮೀ-ನಾರಾಯಣ ಭಾಗೀರಥಿಯರು ಆ ಬ್ರಾಹ್ಮಣನ ಚರಣ ಕಮಲಗಳಿಗೆರಗಿ:- ಪರಮಾತ್ಮಾ, ನಿನ್ನ ಮಾಯಾ ಮಹಿಮೆಯನ್ನು ಪಾಮರರು ಅರಿಯುವದಾದರೂ ಹೇಗೆ? ಹಾವಕ್ಕನ ನಿಜವಾದ ಭಕ್ತಿಯೇ ನಿನ್ನನ್ನು ಮೌನರೂಪ ಧರಿಸುವ ಹಾಗೆ ಮಾಡಿರುವದು. ಸದ್ಭಕ್ತರ ಸಲುವಾಗಿ ನಿರ್ವಿಕಲ್ಪನಾದ ನೀನು ಯಾವ ಯಾವ ರೂಪಿನಿಂದ ಅವತರಿಸುತ್ತಿರುವಿಯೋ ತಿಳಿಯದಾಗಿದೆ. ಅಪಾರ ಮಹಿಮನಾದ ಮೌನಲಿಂಗಾ, ಇಂದಿನ ದಿವಸ ನೀನು ದರ್ಶನ ಕೊಟ್ಟದ್ದರಿಂದ ನಾವು ಕೃತಾರ್ಥರಾದೆವು, ಎಂದು ಪುನಃ ಪುನಃ ನಮಸ್ಕರಿಸಿ, ಗುಡಿಯೊಳಗೆ ಪ್ರವೇಶ ಮಾಡಿ ಮೊದಲಿನಂತೆ ಮೂರ್ತಿತ್ವವನ್ನು ಧರಿಸಿದರು.

ಇದೆಲ್ಲವನ್ನು ನೋಡಿದ ಬ್ರಾಹ್ಮಣರೆಲ್ಲರೂ ಹೌಹಾರಿ ನಿಂತಿದ್ದರು. ಅನಂತರ ಬ್ರಾಹ್ಮಣಸಮೂಹವು ನಡುಗುತ್ತ:—ಅಕಟಾ! ಮೌನೇಶ್ವರನು ಮಹಾಮಹಿಮನೆಂತಲೂ, ದೇವಾಂಶನೆಂತಲೂ ಕೇಳಿದ್ದೆವಲ್ಲದೆ, ಆತನ ದರ್ಶನ ಮಾಡಿಕೊಂಡು ಧನ್ಯರಾಗಬೇಕೆಂದು ಮಾಡಿದ್ದೆವು. ನಮ್ಮ ಇಷ್ಟದಂತೆ ಆ ಘನಮಹಿಮನು ದರಿದ್ರ ಬ್ರಾಹ್ಮಣನಾಗಿ ಬಂದು, ಮಾಡಿದ ಅಡಿಗೆಯೆಲ್ಲವನ್ನುಂಡು ಅಮಾನುಷ ಕೃತಿಯನ್ನು ತೋರಿಸಿದರೂ ಆ ಸದ್ಗುರುವನ್ನು ಗುರ್ತಿಸದಾದೆವು. ನಾವು ಎಂಥ ಅಜ್ಞಾನಿಗಳು? ಎಂದು ಅನ್ನುತ್ತ ಆತನ ಪಾದಗಳಿಗೆ ನಮಸ್ಕರಿಸಲಿಕ್ಕೆ ಹೋಗಲು,

ಹುಚ್ಚ ಬ್ರಾಹ್ಮಣನ ವೇಷವನ್ನು ಧರಿಸಿದ್ದ ಮೌನೇಶನು ಅವರಿಗೆ ಸಿಗದಂತೆ ದೀಕ್ಷಿತರನ್ನು ಕುರಿತು:—'ದೀಕ್ಷಿತರೇ, ನಿಮಗೆ ಶ್ರೀಪತಿಯು ಕ್ಷೇಮವನ್ನುಂಟುಮಾಡಲಿ' ಎಂದು ಹರಸುತ್ತ ವಿಶ್ವೇಶ್ವರನ ದೇವಾಲಯದ ಕಡೆಗೆ ನಡೆದನು.

'ಬ್ರಾಹ್ಮಣ ಸಮೂಹವು:—ಆಹಾ! ಕೈಗೆ ಸಿಕ್ಕ ಪರಮಾತ್ಮನನ್ನು ಬಿಟ್ಟೆವಲ್ಲ? ಎಂದು ಅನ್ನುತ್ತ ಆತನನ್ನು ಹಿಂಬಾಲಿಸಿ ನಡೆಯಿತು. ಆಗ ಸದ್ಗುರುವಾದ ಮೌನೇಶನು ವಿಶ್ವೇಶ್ವರನ ಗುಡಿಯೊಳಗೆ ಹೊಕ್ಕು ಲಿಂಗದ ಹತ್ತಿರ ಅದೃಶ್ಯನಾಗಿ ಹೋದನು!

ಬ್ರಾಹ್ಮಣರೆಲ್ಲರೂ ಚಿಂತೆಗೊಳಗಾಗಿ:—ದೇವಾಧಿದೇವಾ! ನಮಗೆ ಹುಚ್ಚನ ಹಾಗೆ ತೋರಿ ನಿನ್ನ ನಿಜರೂಪವನ್ನು ಕಾಣಿಸದಂತೆ ಮಾಯವಾಗಿ ಹೋದೆಯಾ? ಎಂದು ವಿಶ್ವೇಶ್ವರನಿಗೆ ನಮಸ್ಕರಿಸಿ, ಹಿಂತಿರುಗಿ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರೆಂಬಲ್ಲಿಗೆ ಆರನೇ ಅಧ್ಯಾಯ ಸಂಪೂರ್ಣವು



ಶ್ರೀ ಗುರು ಮೌನ ಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ಏಳನೆಯ ಅಧ್ಯಾಯ



—ತಂದೆ-ತಾಯಿಗಳಿಗೂ ಪರ್ವತಪ್ಪನಿಗೂ ಮೋಕ್ಷ ಕೊಟ್ಟದ್ದು—

ಶ್ರೀ ಮೌನೇಶನು ಕಾಶಿ ಮೊದಲಾದ ದೇಶಗಳಲ್ಲಿ ಮಹಿಮೆಯನ್ನು ತೋರಿಸುತ್ತ ಸಂಚರಿಸುತ್ತಿರಲು, ಇತ್ತ ಗೋನಾಲದಲ್ಲಿ ಮೌನೇಶನ ತಂದೆ-ತಾಯಿಗಳು ತಮ್ಮ ಮನೆಯಲ್ಲಿ ಮಗನು ಇಲ್ಲದ್ದನ್ನು ನೋಡಿ, ಊಟದ ವೇಳೆಯಾದರೂ ಬರಲಿಲ್ಲವೆಂದು ಪರ್ವತಪ್ಪನ ಮನೆಗೆ ಹೋಗಿ ನೋಡಲು ಅಲ್ಲಿಯೂ ಮೌನೇಶನಿರದ್ದರಿಂದ ಊರನ್ನೆಲ್ಲ ತಿರುತಿರುಗಿ ಹುಡುಕಿದರು; ಎಲ್ಲಿಯೂ ಸಿಗಲಿಲ್ಲ. ಎಡ-ಬಲದ ಗ್ರಾಮಗಳಿಗೆ ಹೋಗಿ ನೋಡಿದರು; ಅಲ್ಲಿಯೂ ದೊರೆಯಲಿಲ್ಲ. ಪರಸ್ಥಳದಿಂದ ಬರಹೋಗುವ ಜನರನ್ನು ವಿಚಾರಿಸಿದರು ಆದರೂ ಪತ್ತೆ ಹತ್ತಲಿಲ್ಲ. ಆಗಂತೂ ಅವರಿಗೆ ಆಕಾಶವೇ

ಕಳಚಿಬಿದ್ದಂತಾಗಿ, ಕುಳಿತರೂ ಮೌನೇಶ, ನಿಂತರೂ ಮೌನೇಶ, ಮಲಗಿದರೂ ಮೌನೇಶನೆಂದು ಬಡಬಡಿಸಲಿಕ್ಕೆ ಹತ್ತಿದರು. ಮೌನಲಿಂಗನ ದಯೆಯಿಂದ ಸಕಲ ಸಂಪತ್ತು ಪ್ರಾಪ್ತಿಯಾಗಿದ್ದರೂ, ಅದೆಲ್ಲ ಅವರಿಗೆ ರುಚಿಸದೇ ಹೋಯಿತು. ಎಲ್ಲ ವಿಷಯವು ಹಾಗಿರಲಿ, ಒಮ್ಮೊಮ್ಮೆ ಭೋಜನವನ್ನೇ ಬಿಟ್ಟು ಉಪವಾಸ ಬೀಳುತ್ತಿದ್ದರು. ಇವರಂತೆ ಪರ್ವತಪ್ಪ-ಮೇನಕಾದೇವಿಯರಾದರೂ ಮೌನೇಶನಿಲ್ಲದ್ದರಿಂದ ವ್ಯಸನಭರಿತರಾಗಿ:-ಪರಮ ದಯಾಳುವಾದ ಮೌನೇಶಾ, ನೀನು ನಮಗೆ ದರುಶನ ಕೊಡದೇ ಮರೆಯಾಗುವದಕ್ಕೆ ಕಾರಣವೇನು? ಅನಾಥ ರಕ್ಷಕನಾದ ನೀನಿಲ್ಲದ ಮೇಲೆ ನಮಗೆ ನೀನು ಕೊಟ್ಟಿರುವ ಈ ಸಂಪತ್ತಿನ ಉಪಭೋಗವಾದರೂ ಹೇಗೆ ಸುಖರೂಪವಾದೀತು? ವಿಷಕೂಡಿದ ಅಶನದಂತೆಯೂ, ಅರಣ್ಯದಲ್ಲಿ ಬಿದ್ದಿರುವ ಚಂದ್ರನ ಬೆಳಕಿನಂತೆಯೂ ನಿಷ್ಪ್ರಯೋಜನವಾಗಿರುವದು, ಎಂದು ಅನ್ನುತ್ತಿದ್ದರು; ಮತ್ತು ಪರ್ವತಪ್ಪನು ಮೇಲಿಂದ ಮೇಲೆ ಹಾವಪ್ಪನ ಮನೆಗೆ ಹೋಗಿ ಮೌನೇಶನ ವಿಷಯವಾಗಿ ವಿಚಾರಿಸುತ್ತಿದ್ದನಲ್ಲದೆ, ಹಾವಕ್ಕನಿಗೂ-ಹಾವಪ್ಪನಿಗೂ ಸಮಾಧಾನವ ಹೇಳುತಿದ್ದನು. ಹಾವಕ್ಕನು ಪರ್ವತಪ್ಪನನ್ನು ಕುರಿತು:—ಕಕ್ಕಾ, ಮೌನೇಶನು ನಿನ್ನ ಕೂಡ ರಾಚೋಟಿಯ ಕ್ಷೇತ್ರದಿಂದ ಬಂದ ಮರುದಿವಸವೇ ಹೋದವನು ಇದುವರೆಗೂ ಬರಲಿಲ್ಲವಲ್ಲ! ಆತನು ಎಲ್ಲಿಗೆ ಹೋಗಿರಬಹುದು?

ಪರ್ವತಪ್ಪನು:—ಹಾವಕ್ಕಾ, ಆತನು ಇಂಥ ಸ್ಥಳಕ್ಕೇ ಹೋಗಿರುವನು, ಇಂಥ ಸ್ಥಳದಲ್ಲಿಯೇ ಇರುವನು ಎಂದು ಹೇಗೆ ಹೇಳಬೇಕು? ಮೌನೇಶನು ಮನುಷ್ಯ ಮಾತ್ರದವನಾದರೆ ಯಾರಾದರೂ ಕಂಡು ಹಿಡಿಯಬಹುದು; ಆದರೆ ಜಗನ್ನಿಯಾಮಕನಾದ ಆತನನ್ನು ಪತ್ತೆ ಹಚ್ಚುವದು ಎಂಥವರಿಂದಲೂ ಆಗದು.

ಹಾವಕ್ಕ:— ಕಕ್ಕಾ, ನನ್ನ ಅಕ್ಕರದ ಮಗನಾದ ಮೌನೇಶನು ಮನೆಯಲ್ಲಿಲ್ಲದ್ದರಿಂದ ಮನಸ್ಸಿಗೆ ಸಮಾಧಾನವೇ ಇಲ್ಲ; ಇದು ಹಾಗಿರಲಿ. ಈ ದೇಹವು ಸಹ ನನಗೆ ಬೇಡಾಗಿ ಹೋಗಿದೆ.

ಪರ್ವತಪ್ಪ:—ತಂಗೀ, ನನಗಾದರೂ ನಿನ್ನಂತೆಯೇ ಆಗಿದೆ; ಮಾಡಬೇಕೇನು? ಭೂಮಿಯಲ್ಲಿ ಜನ್ಮವೆತ್ತಿದ ಪ್ರಾಣಿಗಳೆಲ್ಲ ಪರಮೇಶ್ವರನ

ಮಾಯೆಗೆ ವಶವಾಗಿ ಪ್ರಾರಬ್ಧ ಕರ್ಮವನ್ನು ಅನುಭವಿಸಿಯೇ ತೀರಬೇಕಾಗಿದೆ. ಇರಲಿ. ಆ ದಯಾಘನನು ಎಲ್ಲಿ ಹೋಗುವನು? ಭಕ್ತರನ್ನು ಉದ್ಧರಿಸಲಿಕ್ಕಾಗಿ ಬಂದೇ ಬರುವನು. ನಾವು ಮಾತ್ರ ಒಂದೇ ಮನಸ್ಸಿನಿಂದ ಆತನನ್ನು ಧ್ಯಾನಿಸುತ್ತಿದ್ದರಾಯಿತು.

ಹಾವಕ್ಕ:—ಇದರಂತೆ ನನ್ನ ಮನಸ್ಸು ಆಗಿಂದಾಗ್ಗೆ ನನಗೆ ಹೇಳುತ್ತಿದ್ದರೂ, ಪುತ್ರವ್ಯಾಮೋಹವೆಂಬ ಬಲೆಯಲ್ಲಿ ಸಿಕ್ಕು ಒದ್ದಾಡುತ್ತಿರುವ ನನಗೆ ಅದು ದೃಢವಾಗಿ ಉಳಿಯದೆ ಆ ಮೌನಲಿಂಗನ ಮುಖವನ್ನು ಯಾವಾಗ ನೋಡುವೆನೆಂಬ ಆತುರವೇ ನೆಲೆಯಾಗಿ ನಿಲ್ಲುವದು.

ಪರ್ವತಪ್ಪ:—ಮಗಳೇ, ಅದು ಎಂಥವರಿಗಾದರೂ ಇದ್ದದ್ದೇ; ಆದರೂ ಸುಜ್ಞಾನಿಗಳಾದವರು ಪುತ್ರ, ಮಿತ್ರ, ಕಳತ್ರಾದಿಗಳ ಕಡೆಗೆ ಲಕ್ಷ್ಯಗೊಟ್ಟರೆ ನಿಜ ಮೋಕ್ಷವು ಹೇಗೆ ಪ್ರಾಪ್ತಿಯಾಗಬೇಕು?

ಹಾವಕ್ಕ:—ಕಕ್ಕಾ, ಆ ನನ್ನ ಮೋಹದ ಪುತ್ರನಾದ ಮೌನೇಶನೇ ಮೋಕ್ಷಕರ್ತನೆಂದು ತಿಳಿದಿರುವೆನಾದ್ದರಿಂದ ನಾನು ಆತನನ್ನು ಮರೆಯುವದಾದರೂ ಹೇಗೆ?

ಪರ್ವತಪ್ಪ:—ತಂಗೀ, ನಿನ್ನ ಮಾತು ಸತ್ಯವಾದದ್ದಿದ್ದರೂ ನಿನ್ನ ತಿಳುವಳಿಕೆಯಲ್ಲಿ ಸ್ವಲ್ಪ ಅಂತರವುಂಟು; ಅದೇನೆಂದರೆ, ನೀನು ಆ ಮೌನೇಶನನ್ನು ಪುತ್ರನೆಂಬ ಭಾವನೆಯಿಂದ ಹೇಗೆ ಚಿಂತಿಸುತ್ತಿರುವೆಯೋ ಹಾಗೆ ಆತನನ್ನು ಮೃತ್ಯುಂಜಯನೆಂದು ಚಿಂತಿಸು; ಅಂದರೆ ಆ ಭಕ್ತವತ್ಸಲನು ನಿಶ್ಚಯವಾಗಿ ದರ್ಶನಕೊಡುವನು. ಇದನ್ನೇನು ನೀನು ಅರಿಯದವಳಲ್ಲ. ಆ ನಿತ್ಯತೃಪ್ತನ ತಾಯಿಯೇ ನೀನಾದ್ದರಿಂದ ನಿನಗೆ ಹೆಚ್ಚಿಗೆ ಹೇಳಲು ಕಾರಣವಿಲ್ಲ.

ಹಾವಕ್ಕ:—ಕಕ್ಕಾ, ನಿನ್ನ ಸದ್ಬೋಧೆ ಎಂಬ ಅಮೃತಸೇವನೆಯಿಂದ ನನ್ನ ಚಿಂತೆ ಎಂಬ ಹಸಿವೆಯು ನಿವಾರಣವಾಗಿ ಹೋಯಿತು. ನಿನ್ನ ಅಪ್ಪಣೆಯಂತೆ ಆ ಮೌನೇಶನನ್ನು ಮೃತ್ಯುಂಜಯನೆಂತಲೇ ಧ್ಯಾನಿಸುತ್ತಿರುವೆನು; ಆತನು ಏನಾದರೂ ಮಾಡಲಿ.

ಪರ್ವತಪ್ಪ:—ಆ ಕರುಣಾಸಾಗರನು ಏನಾದರೂ ಯಾಕೆ ಮಾಡುವನು? ನಂಬಿದ ಭಕ್ತರನ್ನು ಭವಸಮುದ್ರದಿಂದ ದಾಟಿಸಿ, ನಿಜ ಮೋಕ್ಷವನು ಕೊಟ್ಟೇಕೊಡುವನು.

ಹೀಗೆ ಇಬ್ಬರ ಸಂಭಾಷಣಗಳು ಮುಗಿದ ಮೇಲೆ ಪರ್ವತಪ್ಪನು ತನ್ನ ಮನೆಗೆ ಹೋಗಲು, ಇತ್ತ ಹಾವಕ್ಕನೂ, ಹಾವಪ್ಪನೂ ಮೌನಲಿಂಗನನ್ನು ಧ್ಯಾನಿಸುತ್ತ ಕೆಲವು ದಿನಗಳನ್ನು ಕಳೆದರು.

ಒಂದು ದಿನ ಹಾವಪ್ಪನು ಹೆಂಡತಿಯನ್ನು ಕುರಿತು:—ಪ್ರಿಯೇ, ಮೌನಲಿಂಗನ ಮುಖವನ್ನು ನೋಡದೆ ನನ್ನ ಮನಸ್ಸು ಶಾಂತಿ ಹೊಂದಲಾರದು, ಆತನು ಎಂದು ದರ್ಶನ ಕೊಡುವನೋ ತಿಳಿಯದಾಗಿದೆ. ನಿನ್ನ ಸದ್ಭಕ್ತಿಯ ಫಲದಿಂದ ಆ ಜಗಜ್ಜನಕನು ಮಗನಾದ್ದರಿಂದ ನನ್ನ ಆನಂದಕ್ಕೆ ನೆಲೆಯೇ ಇಲ್ಲದಾಗಿತ್ತು; ಈಗ ಮಾತ್ರ ಈ ದೇಹವೇ ಬೇಡಾಗಿ ಹೋಗಿದೆ.

ಹಾವಕ್ಕ:—ಪ್ರಾಣಮನೋಹರ, ನಿಮ್ಮ ಅರ್ಧಾಂಗಿನಿಯಾದ ನನಗಾದರೂ ಅದೇ ರೀತಿಯಾಗಿದೆ. ಇರಲಿ. ಕಕ್ಕನಾದ ಪರ್ವತಪ್ಪನು ಹೇಳಿದ ಸದ್ಬೋಧೆಯನ್ನು ಮರೆತಿರಾ ಹೇಗೆ? ನಾವು ಮಗನೆಂದು ಹಂಬಲಿಸುತ್ತಿರುವ ಆ ಮೌನೇಶನನ್ನು ಜಗದ್ವ್ಯಾಪಿಯಾದ ಭಗವಂತನೆಂದು ಧ್ಯಾನಿಸೋಣ; ಅಂದರೆ ಇಂದಿಲ್ಲ ನಾಳೆ ಆತನು ಬಂದೇ ಬರುವನು.

ಹಾವಪ್ಪ:—ಪ್ರಿಯೇ, ನೀನು ಏನೇ ಹೇಳು; ಆ ನನ್ನ ಬಾಲಕನಾದ ಮೌನೇಶನು ನಾಳಿನ ದಿವಸ ನನಗೆ ದರ್ಶನ ಕೊಟ್ಟರೆ ಒಳ್ಳೇದಾಯಿತು; ಇಲ್ಲವಾದರೆ ನಾನು ನಿಶ್ಚಯವಾಗಿ ಈ ದೇಹತ್ಯಾಗ ಮಾಡುವೆನು.

ಹಾವಕ್ಕ:—ಪತಿಯು ಹಿಡಿದ ಸನ್ಮಾರ್ಗವನ್ನು ಅನುಸರಿಸಿ ನಡೆಯುವದೇ ಸತಿಯಳ ಕರ್ತವ್ಯವಾಗಿರುವದು. ಅಂಥ ಸತಿಯರಿಗೆ ಸದ್ಗತಿಯಾಗುವದೆಂದು ಶಾಸ್ತ್ರವಚನವೂ ಇರುವದು. ಅದು ಕಾರಣ ತಾವು ನಾಳಿನ ದಿವಸ ಮೌನೇಶನು ಬರದಿದ್ದರೆ ದೇಹತ್ಯಾಗ ಮಾಡುವೆನೆಂದು ಹೇಳಿದಂತೆ ನಾನಾದರೂ ತಮ್ಮ ಸಂಗಡಲೇ ದೇಹತ್ಯಾಗ ಮಾಡುವೆನು ಇದೇ ನನ್ನ ದೃಢ ನಿಶ್ಚಯವು.

ಹೀಗೆ ಇಬ್ಬರೂ ಮಾತಾಡಿ ಅಂದಿನ ರಾತ್ರಿಯನ್ನು ಕಳೆದು, ಬೆಳಗಾಗುತ್ತಲೇ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು, ಮೌನೇಶನ ಮಾರ್ಗ ನಿರೀಕ್ಷಣೆ ಮಾಡುತ್ತಿದ್ದರು. ಮಧ್ಯಾಹ್ನಕಾಲವು ಪ್ರಾಪ್ತಿಯಾಗಲು, ಇಬ್ಬರೂ ಸ್ನಾನಮಾಡಿ ಮಡಿವಸ್ತ್ರಗಳನ್ನು ಧರಿಸಿ, ಪೂಜಾ ಸಾಮಗ್ರಿಗಳನ್ನು

ತೆಗೆದುಕೊಂಡು ಮೌನಲಿಂಗನ ಗುಡಿಗೆ ತೆರಳಿದರು. ಆ ನಿರ್ಮಲಮನಸ್ಸಿನ ದಂಪತಿಗಳು ಭಕ್ತಿಪೂರ್ವಕವಾಗಿ ಆದಿಲಿಂಗನಿಗೆ ಜಲ, ಗಂಧಾಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳನ್ನು ಸಮರ್ಪಿಸಿ ನಮಸ್ಕಾರಮಾಡಿ, ಎದ್ದು ನಿಂತು ಕೈಜೋಡಿಸಿ:— ಕೃಪಾನಿಧೇ, ಇದೇ ನಿನ್ನ ಕಡೆಯ ಪೂಜೆಯು. ನೀನು ಪೂರ್ವದಲ್ಲಿ ಅನಾಥರಾದ ನಮಗೆ ಪ್ರಸನ್ನನಾಗಿ ಮಗನಾಗುವೆನೆಂದು ಅನುಗ್ರಹಿಸಿದಂತೆ ಪುತ್ರರೂಪದಿಂದ ಅವತರಿಸಿ ಅತ್ಯಂತ ಸುಖವನ್ನುಂಟು ಮಾಡಿದೆ. ಮೃತ್ಯುಂಜಯಾ, ಈಗ ನೀನು ನಮಗೆ ಕಾಣಿಸದಂತೆ ಎತ್ತ ಪೋಗಿರುವೆಯೋ ತಿಳಿಯದಾಗಿದೆ. ಹಗಲಿರಳು ಪೂರ್ಣ ಚಂದ್ರನಂತಿರುವ ನಿನ್ನ ಮುಖವನ್ನು ನೋಡಿ ಸಂತೋಷಪಡುತ್ತಿದ್ದ ನಾವು, ನೀನಿಲ್ಲದ್ದರಿಂದ ಚಿಂತಾಸಮುದ್ರದಲ್ಲಿ ಮುಳುಗಿ ಹೋಗಿರುವೆವು. ಮೌನಲಿಂಗಾ, ನೀನು ಮಾತ್ರ ಈ ದಿನ ದರ್ಶನ ಕೊಡದಿದ್ದರೆ ನಿನ್ನ ಚರಣ ಸನ್ನಿಧಿಯಲ್ಲಿಯೇ ಈ ದೇಹವನ್ನು ಸಮರ್ಪಿಸಿ ಬಿಡುವೆವು, ಎಂದು ಪುನಃ ನಮಸ್ಕರಿಸಿದರು. ನೋಡಿರಿ. ಭಕ್ತರ ಸಲುವಾಗಿ ಭಗವಂತನಿಗೆ ಎಷ್ಟು ಕನಿಕರವಿರುವದು? ಇನ್ನು ಮಾತ್ರ ಇವರ ದೃಢನಿಶ್ಚಯದಲ್ಲಿ ಅಂತರವಾಗಲಾರದೆಂದು ಆದಿಲಿಂಗನು ತನ್ನ ಬಲಭಾಗದ ಪುಷ್ಪಗಳನ್ನು ಬಳಬಳನೆ ಸುರಿಸಿದನು.

ಇದನ್ನು ನೋಡಿದ ದಂಪತಿಗಳು:—'ಪರಮಾತ್ಮಾ, ನೀನು ಪ್ರಸಾದರೂಪದಿಂದ ಹೇಳಿದರೆ ನಮ್ಮ ಮನಸ್ಸು ಶಾಂತವಾಗುವದಿಲ್ಲ. ನಿನ್ನ ಮೌನರೂಪವನ್ನು ತೋರಿಸು. ಇಲ್ಲವಾದರೆ ನಿಶ್ಚಯವಾಗಿ ಪ್ರಾಣತ್ಯಾಗ ಮಾಡಿಕೊಳ್ಳುವೆವು.'' ಎಂದು ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಸಿದ್ಧರಾಗಲು,

ಅಷ್ಟರಲ್ಲಿ ಕಾಶಿ ಮುಂತಾದ ಸ್ಥಳಗಳಲ್ಲಿ ಮಹಿಮೆಯನ್ನು ತೋರಿಸುತ್ತ ಸಂಚರಿಸುತ್ತಿರುವ ಮೌನೇಶನು ಆದಿಲಿಂಗನ ಆಲಯದಲ್ಲಿಯೇ ಪ್ರಕಟನಾಗಿ:—'ಅಮ್ಮಾ, ನಿರ್ಮಲವಾದ ನಿನ್ನ ಮನಸ್ಸನ್ನು ಮಲಿನ ಮಾಡಿಕೊಳ್ಳುವ ಬುದ್ಧಿಯು ಯಾಕೆ ಹುಟ್ಟಿತು? ಅಪ್ಪಾ, ನಿನಗಾದರೂ ತಿಳಿಯಲಿಲ್ಲವೇ? ಸುಜ್ಞಾನಿಗಳಾದ ನೀವೇ ಪುತ್ರಮೋಹವೆಂಬ ಬಲೆಯಲ್ಲಿ ಬಿದ್ದರೆ, ಅಜ್ಞಾನಿಗಳ ಪಾಡೇನು? ಸಾಕು-ಸಾಕು! ನಿಮ್ಮ ಈ ಅನುಚಿತ ಕಾರ್ಯವನ್ನು ನಿಲ್ಲಿಸಿರಿ.' ಎಂದು ನುಡಿದನು.

ಆಗ ಆ ದಂಪತಿಗಳಿಗಾದ ಆನಂದವನ್ನು ಹೇಳಲಾಸಲ್ಲ! ಅವರು ತಮ್ಮ ಎದುರಾಗಿ ನಿಂತಿರುವ ಮೌನೇಶನನ್ನು ನೋಡಿ ಆನಂದಾಶ್ರುಗಳು ಉದುರುತ್ತಿರಲು, ಜಗದ್ವ್ಯಾಪಿಯಾದ ತಮ್ಮ ಮಗನನ್ನು ಬಿಗಿದಪ್ಪಿ ಕಪೋಲಗಳನ್ನು ಚುಂಬಿಸುತ್ತ:—ಮೌನೇಶಾ, ನೆನಸಿದವರ ಮನಸ್ಸಿನಲ್ಲಿ ನೆಲಸಿರುವ ನಿನ್ನ ಘನಮಹಿಮೆಯನ್ನು ಅರಿಯುವ ಸಾಮರ್ಥ್ಯವು ನಮಗೆ ಎಲ್ಲಿಂದ ಬರಬೇಕು? ಎಂದು ಅನ್ನುತ್ತ ಅತ್ಯಾನಂದದಿಂದ ಆದಿಲಿಂಗನಿಗೆ ನಮಸ್ಕರಿಸಿ ಮಗನನ್ನು ಸಂಗತ ಕರೆದುಕೊಂಡು ಮನೆಗೆ ಹೋಗಿ ಸುಖದಿಂದ ಭೋಜನ ಮಾಡಿದರು.

ಇತ್ತ ಪರ್ವತಪ್ಪನು ಮನಸ್ಸಿನಲ್ಲಿ:—'ಸದ್ಗುರುವಾದ ಮೌನೇಶನು ಇದುವರೆಗೂ ಬರಲಿಲ್ಲ. ನನಗಂತೂ ವೃದ್ಧಾಪ್ಯಕಾಲವು ಪ್ರಾಪ್ತವಾಯಿತು. ಕನಸಿನಲ್ಲಿ ಕಂಡ ದ್ರವ್ಯದಂತೆಯೂ, ಮಣ್ಣಿನಿಂದ ಮಾಡಿದ ಗಡಿಗೆಯಂತೆಯೂ, ನೀರ ಮೇಲಿನ ಗುರುಳೆಯಂತೆಯೂ ಈ ದೇಹವು ಅಸ್ಥಿರವಾದದ್ದು. ಅದುಕಾರಣ ಆ ದಯಾಘನನನ್ನು ಎಂದು ಕಂಡೇನು?'

ಹೀಗೆ ಚಿಂತಿಸುತ್ತಿರುವ ಪರ್ವತಪ್ಪನ ಹತ್ತರವೇ ಮೌನೇಶನು ಬಂದು ನಿಂತು:—ಅಜ್ಜಾ, ಕ್ಷೇಮವೇ? ಎಂದು ನುಡಿದನು. ಪರ್ವತಪ್ಪನು ಮೌನೇಶನನ್ನು ಕಂಡಾಕ್ಷಣವೇ ಆನಂದಸಾಗರದಲ್ಲಿ ಮುಳುಗಿ, ಆತನನ್ನು ಬಿಗಿದಪ್ಪಿಕೊಂಡು:—ಸದ್ಗುರೋ, ನಿನ್ನ ಚರಣದಾಶೀರ್ವಾದದಿಂದ ಎಲ್ಲವೂ ಕ್ಷೇಮವಿದ್ದು, ನೀನು ಇಲ್ಲಿ ಇಲ್ಲದ್ದೊಂದು ಮಾತ್ರ ಅಕ್ಷೇಮವಾಗಿರುವದು. ಆದರೂ ದಯಾಘನನಾದ ನೀನು ಈ ಸೇವಕನ ಮೇಲಣ ಮಮತೆಯಿಂದ ಪುನರ್ದರ್ಶನ ಕೊಟ್ಟೆಯಾದ್ದರಿಂದ ನಾನು ಕೃತಾರ್ಥನಾದೆನಲ್ಲದೆ ನನ್ನ ಜನ್ಮವೇ ಸಾರ್ಥಕವಾಯಿತು, ಎಂದು ಅನ್ನಲು.

ಮೌನೇಶನು:—'ಅಜ್ಜಾ, ತಾನೇ ತಾನಾದ ಪರಮಾತ್ಮನಲ್ಲಿ ನಾನು ನೀನೆಂಬ ಕಲ್ಪನೆಗಳನ್ನೇಕೆ ಮಾಡುವೆ? ಆತನು ಹೋಗುವವನೂ ಅಲ್ಲ, ಬರುವವನೂ ಅಲ್ಲ. ಸಾವು-ಹುಟ್ಟುಗಳಂತೂ ಆತನಿಗೆ ಮೊದಲೇ ಇಲ್ಲ. ಆತನು ಜಗದ್ವ್ಯಾಪಕನಾಗಿರುವನು. ಇದನ್ನೆಲ್ಲ ತಿಳಿದ ನೀನು ನನ್ನನ್ನು ಕುರಿತು:— ನೀನಿಲ್ಲದ್ದರಿಂದ ಅಕ್ಷೇಮವಾಗಿರುವದೆಂದು ಹೇಳುವದು ಯೋಗ್ಯವೇ? ನಿನ್ನಂತೆಯೇ ನನ್ನ ತಂದೆ-ತಾಯಿಗಳಾದರೂ ತಿಳಿದುಕೊಂಡು

ತಮ್ಮ ಪ್ರಾಣವನ್ನೇ ಬಿಡಲಿಕ್ಕೆ ಸಿದ್ಧರಾಗಿ ನಿಂತಿದ್ದರು. ಅವರ ಈ ಅಜ್ಞಾನವನ್ನು ಪರಿಹರಿಸಲಿಕ್ಕಾಗಿಯೂ, ಭಕ್ತಶ್ರೇಷ್ಠನಾದ ನಿನ್ನ ದರ್ಶನ ತಕ್ಕೊಳ್ಳಲಿಕ್ಕಾಗಿಯೂ ಪುನಃ ಇಲ್ಲಿಗೆ ಬಂದೆನು' ಎಂದು ಆದಿಲಿಂಗನ ಗುಡಿಯಲ್ಲಿ ನಡೆದ ಸಂಗತಿಯನ್ನೆಲ್ಲ ಹೇಳಿ ಪರ್ವತಪ್ಪನನ್ನು ಸಮಾಧಾನಗೊಳಿಸಿ, ಮನೆಗೆ ಬಂದನು.

ಶ್ರೀ ಮೌನೇಶ್ವರನು ಗೋನಾಲದಲ್ಲಿರುವದರಿಂದ ಅಲ್ಲಿಯ ಜನರು ಗುಂಪು-ಗುಂಪಾಗಿ ಬಂದು ಆತನ ದರ್ಶನ ಮಾಡಿಕೊಂಡು ಕೃತಾರ್ಥರಾಗುತ್ತಿದ್ದರು. ಪರಸ್ಥಳದಿಂದಲೂ ಸಹ ಭಕ್ತ ಜನರ ಸಮೂಹವು ದರ್ಶನಾಪೇಕ್ಷೆಯಿಂದ ಮೇಲಿಂದ ಮೇಲೆ ಬರುತ್ತಿತ್ತು; ಆದ್ದರಿಂದ ಮೌನಪರಮಾತ್ಮನ ನಿವಾಸಸ್ಥಳವಾದ ಗೋನಾಲವು ಶ್ರೇಷ್ಠ ಕ್ಷೇತ್ರವೆಂದು ಹೆಸರಾಗಿ ಹೋಯಿತು.

ಹೀಗೆ ಕೆಲವು ಕಾಲ ಕ್ರಮಿಸಲು ಒಂದು ದಿನ ಹಾವಪ್ಪನು ಹೆಂಡತಿಯನ್ನು ಕರಿತು:-ಪ್ರಿಯೇ, ನಮಗೆ ವೃದ್ಧಾಪ್ಯಕಾಲವು ಪ್ರಾಪ್ತವಾಯಿತು. ಎಷ್ಟುದಿನವಿದ್ದರೂ ಇಷ್ಟೇ ಸುಖವಲ್ಲವೇ? ಮೌನೇಶನು ಇಲ್ಲಿಯೇ ಇರುವನೆಂದು ಹೇಳಲಿಕ್ಕೆ ಬರುವಂತಿಲ್ಲ. ಗಾಳಿ ಬಂದಾಗಲೇ ತೂರಿಕೊಳ್ಳಬೇಕೆಂಬ ಹಿರಿಯರ ವಾಕ್ಯದಂತೆ ಮೌನೇಶನು ಮನೆಯಲ್ಲಿರುತ್ತಲೇ ನಾವು ನಿಜ ಮೋಕ್ಷವನ್ನು ಸಂಪಾದಿಸಿಕೊಳ್ಳಬೇಕು. ಕಳೆಕೊಂಡು ಹುಡುಕಹತ್ತಿದರೆ ಸಿಕ್ಕಲಾರದು. ಯಾಕೆ ನಿನ್ನ ಮನಸ್ಸು ಹೇಗಿದೆ?

ಹಾವಕ್ಕ— ಪ್ರಿಯಕರಾ, ನನ್ನ ಮನಸ್ಸು ಹೇಗಿದೆ ಎಂದು ಕೇಳುವದಾದರೂ ಯಾಕೆ? ನಿಮ್ಮ ಮನಸ್ಸಿಗೆ ಬಂದದ್ದು ನನಗೂ ಸಮ್ಮತವೇ ಆಗಿರುವದು. ಈ ದೇಹವು ಅಸ್ಥಿರವಾದದ್ದೆಂದು ಈ ಸೇವಕಳಿಗೆ ತಿಳಿದೇ ಇರುವದು. ದೇವರ ದೇವನು ಹತ್ತರವಿದ್ದಾಗಲೇ ನಮ್ಮ ಅಭಿಪ್ರಾಯವನ್ನು ತಿಳಿಸಿಬಿಡೋಣ; ಆತನು ನಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿ ಮೋಕ್ಷಸುಖವನ್ನು ಕೊಟ್ಟುಬಿಡಲಿ.

ಈ ಮೇರೆಗೆ ಇಬ್ಬರೂ ಮಾತಾಡಿಕೊಂಡು ಒಂದು ದಿನ ಮೌನೇಶನನ್ನುದ್ದೇಶಿಸಿ:—ಮೌನಲಿಂಗಾ, ನಮಗೆ ಭೂಲೋಕದ ಸುಖವು ಸಾಕಾಗಿರುವದು. ಆದಕಾರಣ ನಿಜ ಮೋಕ್ಷವನ್ನು ಕೊಟ್ಟು ಉದ್ಧರಿಸು!'

ಮೌನೇಶ:—ತಂದೆ-ತಾಯಿಗಳೇ, ಬ್ರಹ್ಮದೇವನು ನಿಮ್ಮ ಹಣೆಗಳಲ್ಲಿ ಇನ್ನೂ ಕೆಲವು ದಿವಸ ಭೂಲೋಕದಲ್ಲಿರುವಹಾಗೆ ಬರೆದಿರುವನು; ಆತನು ಬರೆದ ಆಯುಷ್ಯವು ಪೂರ್ಣವಾಗದೆ ನಿಮಗೇಕೆ ಸಾಕಾಯಿತು?

ತಂದೆ-ತಾಯಿಗಳು:—ಮೌನಲಿಂಗಾ, ಅದು ಎಷ್ಟಿದ್ದರೂ ನಮಗೆ ಬೇಡ! ಆ ವಿರಂಚಿಯು ಬರೆದ ಆಯುಷ್ಯವನ್ನು ಅಳಿಸಿ, ಕೈವಲ್ಯ ಪದವಿಯನ್ನು ಕರುಣಿಸುವ ಸಾಮರ್ಥ್ಯವು ನಿನ್ನಲ್ಲಿರುವದೆಂತಲೇ ಹೀಗೆ ಕೇಳುವೆವು.

ಈ ರೀತಿಯಾಗಿ ಹೇಳುವ ತಂದೆ-ತಾಯಿಗಳ ದೃಢನಿಶ್ಚಯವನ್ನು ನೋಡಿ ಮೌನೇಶನು ಅವರಿಬ್ಬರನ್ನು ಗೋಡೆಗೆ ಕುಳ್ಳಿರಿಸಿ, ಅವರ ಹಣೆಗಳಲ್ಲಿರುವ ಅಕ್ಷರಗಳನ್ನು ಅಳಿಸಿ, ಜೀವನ್ಮುಕ್ತರಾಗಿರಿ, ಎಂದು ಅಂದನು. ಆ ಕ್ಷಣವೇ ಪ್ರಾಣ ಹೋಗಿ, ಶವಗಳು ಕುಳಿತವು. ಮೌನೇಶನು ಅವರ ಗೋಣುಗಳಿಗೆ ಗೂಟಗಳನ್ನಾನಿಸಿ, ಸ್ವಮತಸ್ಥರ ಮನೆಗಳಿಗೆ ಹೋಗಿ:—ಮಹನೀಯರೇ, ನಮ್ಮ ತಂದೆ-ತಾಯಿಗಳು ಅಸ್ಥಿರವಾದ ನರದೇಹಗಳನ್ನು ಬಿಟ್ಟು, ಪರಲೋಕಕ್ಕೆ ತೆರಳಿದ್ದಾರೆ; ಕಾರಣ ಅವರ ದೇಹಗಳಿಗೆ ಅಗ್ನಿ ಸಂಸ್ಕಾರ ಮಾಡಲಿಕ್ಕಾಗಿ ನೀವೆಲ್ಲರೂ ಬರಬೇಕೆಂದು ಕರೆದನು.

ನೋಡಿರಿ! ಮೌನೇಶನು ದೇವಾಂಶನಿರುವನೆಂಬುವವನ್ನು ಎಲ್ಲರೂ ಅರಿತಿದ್ದರೂ, ಮದಾಂಧರಾದ ಆ ಜಾತಿಬಾಂಧವರು ಬರುತ್ತೇವೆಂದು ಹೇಳಿ ಮೌನೇಶನನ್ನು ಕಳಿಸಿ, ಎಲ್ಲರೂ ಒಟ್ಟುಗೂಡಿ:—ಮೌನೇಶನು ಮಹಾಮಹಿಮನೆಂದು ಪ್ರಖ್ಯಾತಿಹೊಂದಿರುವನು. ನಾವು ಹೋಗದಿದ್ದರೆ ತಂದೆ-ತಾಯಿಗಳ ಅಗ್ನಿ ಸಂಸ್ಕಾರವನ್ನು ಹೇಗೆ ಮಾಡುವನೋ ನೋಡಿ ಬಿಡೋಣ ಹೀಗೆ ಮಾತಾಡಿಕೊಂಡು ಹೋಗುವದನ್ನೇ ಬಿಟ್ಟರು.

ಇತ್ತ ಸ್ಮಶಾನದಲ್ಲಿ ಪರ್ವತಪ್ಪನು ಗಂಧದ ಕಟ್ಟಿಗೆಗಳನ್ನು ಹೇರಿಸಿ, ಅವುಗಳನ್ನು ಸರಿಯಾಗಿ ಒಟ್ಟಿಸಿ, ಚಿತೆಯ ಕೆಲಸವನ್ನು ಸಿದ್ಧ ಮಾಡಿಸಿದನು. ಮೌನೇಶನ ತನ್ನ ಜಾತಿಬಾಂಧವರ ಕೃತಕತನವನ್ನು ತಿಳಿದು ಶವಗಳ ಹತ್ತರ ಬಂದು:—ನೀವು ಸ್ಮಶಾನದವರೆಗೂ ನನ್ನ ಸಂಗಡ ನಡೆದು ಬಂದು ನಿಮಗೆ ಪರ್ವತಪ್ಪನು ಸಿದ್ಧಮಾಡಿರುವ ಆಸನದ ಮೇಲೆ ಕುಳಿತುಕೊಳ್ಳಿರಿ, ಎಂದು ಅಪ್ಪಣೆ ಮಾಡಿದನು.

ಜಗತ್ಪಾಲಕನಾದ ಆ ಮೌನಗುರುವು ಹೀಗೆ ಅಂದಾಕ್ಷಣವೇ, ಆ ಶವಗಳು ಮೇಲಕ್ಕೆದ್ದು ನಡೆದು ಹೋಗಿ ಸ್ಮಶಾನದಲ್ಲಿರುವ ಗಂಧದ ಕಟ್ಟಿಗೆಗಳ ಆಸನದ ಮೇಲೆ ಕುಳಿತವು. ಆಗ ಮೌನೇಶನು ಅಗ್ನಿಯನ್ನು ಹೊತ್ತಿಸಲು, ಅದು ಪ್ರಜ್ವಲಿಸಿ ಅವರ ದೇಹಗಳನ್ನು ಭಸ್ಮಮಾಡಿ ಬಿಟ್ಟಿತು! ಅದನ್ನು ನೋಡಿದ ಎಲ್ಲ ಜನರು ಆಶ್ಚರ್ಯಭರಿತರಾಗಿ:—ಅಹಾ! ಮೌನೇಶನು ಸಾಕ್ಷಾತ್ ಪರಮೇಶ್ವರನಲ್ಲದೇ ಮನುಷ್ಯನಲ್ಲವೆಂದು ಆತನ ಚರಣಾರವಿಂದಗಳಿಗೆ ನಮಸ್ಕರಿಸಿ ಧನ್ಯರಾದರು. ಸ್ವಜಾತಿ ಬಾಂಧವರಂತೂ ಆತನ ಕೃತಿಯನ್ನು ನೋಡಿ ಹೌಹಾರಿ:—ಅಕಟಾ! ನಾವು ಮೌನೇಶನ ಮಹಿಮೆಯನ್ನು ಅರಿತಿದ್ದರೂ, ಆತನ ತಂದೆ-ತಾಯಿಗಳ ಅಗ್ನಿ ಸಂಸ್ಕಾರಕ್ಕೆ ಹೋಗದಿದ್ದದ್ದು ಮಹಾಪರಾಧವಾಯಿತೆಂದು ಮೌನೇಶನ ಪಾದಗಳ ಮೇಲೆ ಬಿದ್ದು:—ಸದ್ಗುರೋ, ಮೂರ್ಖರಾದ ನಮ್ಮ ತಪ್ಪುಗಳನ್ನು ಕ್ಷಮಿಸಿ ಕಾಪಾಡು, ಎಂದು ಬೇಡಿಕೊಂಡರು.

ಮೌನೇಶನು:—ಆದದ್ದಾಗಿ ಹೋಯಿತು. ಮುಂದಾದರೂ ನೀವು ಒಳ್ಳೇ ರೀತಿಯಿಂದ ನಡೆದರೆ, ಇಹ-ಪರಗಳಲ್ಲಿ ಕೀರ್ತಿಹೊಂದುವಿರಿ, ಎಂದು ಬೋಧಿಸಿ, ತಂದೆ-ತಾಯಿಗಳ ಅಂತ್ಯಕರ್ಮವನ್ನು ನೆರವೇರಿಸಿ, ಗೋನಾಲದಲ್ಲಿರುವ ಎಲ್ಲ ಜನರನ್ನೂ ಮೃಷ್ಟಾನ್ನದಿಂದ ತೃಪ್ತಿಪಡಿಸಿದನು.

ಅನಂತರ ಮೌನೇಶ್ವರನು ಪರ್ವತಪ್ಪನ ಹತ್ತಿರ ಬಂದು:—ಅಜ್ಜಾ, ಇಲ್ಲಿಯ ನಮ್ಮ ಕೆಲಸವು ಪೂರ್ಣವಾಯಿತು. ಇನ್ನು ನಮಗೆ ಎಲ್ಯಾದರೂ ಸಂಚರಿಸಲಿಕ್ಕೆ ಅಪ್ಪಣೆಯನ್ನು ಕೊಡು.

ಪರ್ವತಪ್ಪ:—ಜಗದ್ಗುರೋ, ನೀನು ಪೂರ್ವದಲ್ಲಿ ನನಗೆ ಹೇಳಿದಂತೆ ನಿಜ ಮೋಕ್ಷವನ್ನು ಕೊಡದೆ, ನಿನ್ನ ಕಾರ್ಯವು ಹೇಗೆ ಪೂರ್ಣವಾಗಿದೆ?

ಮೌನೇಶ:—ಅಜ್ಜಾ, ಬಡತನವು ಬೇಸರವಾದಂತೆ, ಐಶ್ವರ್ಯವು ಬೇಸರವಾಗುವದಿಲ್ಲ. ಇನ್ನು ಕೆಲವು ದಿವಸ ಉಪಭೋಗಿಸು

ಪರ್ವತಪ್ಪ:—ಪರಮಾತ್ಮಾ, ನನಗಿಂತಲೂ ವಯಸ್ಸಿನಲ್ಲಿ ಬಹಳೇ ಚಿಕ್ಕವರಾಗಿಯೂ, ನನ್ನ ಪರಮ ಮಿತ್ರರಾಗಿಯೂ ಇದ್ದ ಹಾವಪ್ಪನೂ, ಹಾವಕ್ಕನೂ ಈ ಕ್ಷಣಿಕ ಸುಖವಾದ ಸಂಸಾರಕ್ಕೆ ಅಸಹ್ಯಪಟ್ಟು, ಸ್ಥಿರ

ಮೋಕ್ಷವೆಂಬ ನಿನ್ನ ಚರಣಾರವಿಂದಗಳನ್ನು ಹೊಂದಿರಲು, ನಾನು ಅರೆ ಗಳಿಗೆಯಾದರೂ ಇಲ್ಲಿರಲಾರೆನು. ಬೇಗನೆ ಆ ದಂಪತಿಗಳಿಗೆ ಕೊಟ್ಟಿರುವ ಕೈವಲ್ಯಪದವಿಯನ್ನು ನನಗೂ ಕರುಣಿಸು.

ಮೌನೇಶ:—ಅಜ್ಞಾ, ಈ ಮಾತು ದೃಢನಿಶ್ಚಯವಿದ್ದರೆ ಹೇಳು; ಯಾಕಂದರೆ ಐಶ್ವರ್ಯದ ಆಶೆ ಎಂಬ ಅಂಕುರವು ಮನುಷ್ಯನ ಮನಸ್ಸನ್ನು ಜಗ್ಗದೇ ಎಂದಿಗೂ ಬಿಡುವದಿಲ್ಲ. ಒಂದು ವೇಳೆ ನೀನು ಪರಲೋಕದಲ್ಲಿ ದ್ದರೂ ಐಶ್ವರ್ಯದ ಅಪೇಕ್ಷೆಯು ಸಂಪೂರ್ಣ ನಾಶವಾಗದಿದ್ದ ನೀನು ಪುನಃ ಭೂಲೋಕಕ್ಕೆ ಬರಬೇಕಾಗುತ್ತದೆ. ಅದುಕಾರಣದಿಂದಲೇ ಜ್ಞಾನಿಗಳು ಈ ಸಂಸಾರಸುಖಕ್ಕೆ ಶರಣು ಹೊಡೆದು, ಅರಣ್ಯದಲ್ಲಿ ಕುಳಿತು ತಪಸ್ಸುಮಾಡು ವರು. ಅಂಥವರಿಗೂ ಒಮ್ಮೊಮ್ಮೆ ಚಿತ್ತ ಚಾಂಚಲ್ಯವಾಗುತ್ತಿರುವದು. ಅಂದ ಮೇಲೆ ಸಕಲ ಸಂಪತ್ತಿನಿಂದ ಕೂಡಿ ಮೆರೆಯುತ್ತಿರುವ ಸಂಸಾರಿಗಳಿಗೆ ಅದರ ಅಭಿಲಾಷೆಯು ಒಮ್ಮೆಲೇ ಕಡಿಮೆಯಾಗುವದು ದುರ್ಲಭವೋ ಸುಲಭವೋ ನೀನೇ ತಿಳಿದು ನೋಡು.

ಪರ್ವತಪ್ಪ:—ಗುರುವರ್ಯಾ, ಸರ್ವಜ್ಞನಾದ ನೀನು ಹೇಳುವದು ನಿಜವು; ಆದರೆ ಜಗಚ್ಚಾಲಕನಾದ ನೀನು ಕುಣಿಸಿದಂತೆ ಎಲ್ಲ ಪ್ರಾಣಿಗಳು ಕುಣಿಯುವವಲ್ಲದೆ, ಸೂತ್ರಧಾರಕನಾದ ನಿನ್ನ ಪ್ರೇರಣೆಯಿಲ್ಲದೆ ಯಾವ ಕಾರ್ಯಗಳು ನಡೆಯುವವು? ನಿನ್ನ ಮಾಯಾನಟಣೆಯನ್ನು ಸಾಕು ಮಾಡು! ಕಾಮಧೇನುವನ್ನು ಬಿಟ್ಟು, ಕಾಡಾಕಳನ್ನು ಯಾರು ಕಟ್ಟಿ ಕೊಂಡಾರು? ಅದರಂತೆ ಮೋಕ್ಷ ಕರ್ತೃವಾದ ನಿನ್ನ ಚರಣಾರವಿಂದಗಳನ್ನು ಹೊಂದುವ ಸ್ಥಿರಸುಖವನ್ನು ಬಿಟ್ಟು, ಅಸ್ಥಿರವಾದ ಐಶ್ವರ್ಯವನ್ನು ಅಪೇ ಕ್ಷಿಸುವವರು ಅಜ್ಞಾನಿಗಳಲ್ಲದೆ ಜ್ಞಾನಿಗಳ ಮಾಲಿಕೆಯಲ್ಲಿ ಹೇಗೆ ಸೇರು ವರು? ಈ ಸೇವಕನ ಮೇಲೆ ದಯವಿಟ್ಟು ನಿನ್ನ ಪಾದಾರವಿಂದಗಳಲ್ಲಿ ಸೇರಿಸಿಕೊಂಡು ಪಾವನ ಮಾಡು.

ಈ ಮೇರೆಗೆ ದೈನ್ಯಭಾವದಿಂದ ಹೇಳಿಕೊಳ್ಳುವ ಭಕ್ತಾಗ್ರಣಿಯಾದ ಪರ್ವತಪ್ಪನನ್ನು ನೋಡಿ ಮೌನೇಶನು:—ಅಜ್ಞಾ, ಇಹಲೋಕದ ಸುಖವು ನಿನಗೆ ಸಾಕಾದಂತೆ ನಿನ್ನ ಧರ್ಮಪತ್ನಿಯವರಿಗೂ ಸಾಕಾಗಿದೆಯೇ?

ಮೇನಕಾದೇವಿ—ಪರಮಾತ್ಮಾ, ಪತಿಯ ಅಪ್ಪಣೆಯಂತೆ ನಡೆಯುವದೇ ನನ್ನ ಕರ್ತವ್ಯವಾದ ಕಾರಣ ಅವರ ಸಂಗಡ ನನ್ನನ್ನೂ ನಿನ್ನ ಪಾದ ಸೇವೆಯಲ್ಲಿ ಸೇರಿಸಿಕೊಂಡು ಕಾಪಾಡು, ಎಂದು ನಮಸ್ಕರಿಸಿದಳು.

ಮೌನೇಶನು, ಈ ದಂಪತಿಗಳ ಒಂದೇ ಭಾವವನ್ನು ಕಂಡು ಸಂತಸ ಪಟ್ಟು, ತನ್ನ ತಂದೆ ತಾಯಿಗಳಂತೆ ಅವರಿಬ್ಬರನ್ನೂ ಗೋಡೆಗೆ ಕೂಡ್ರಿಸಿ, ಜೀವನ್ಮುಕ್ತರಾಗಿರೆಂದು ಆಶೀರ್ವಾದ ಮಾಡಿ, ಅವರ ಹಣೆಯಲ್ಲಿರುವ ಅಕ್ಷರಗಳನ್ನು ಅಳಿಸಿಬಿಟ್ಟನು. ಆ ಕ್ಷಣವೇ ಪರ್ವತಪ್ಪ-ಮೇನಕಾದೇವಿಯರ ಪ್ರಾಣವು ಹೊರಟು ಹೋಗಿ ಶರೀರಗಳು ಉಳಿದವು. ಆಗ ಮೌನೇಶನು ಪರ್ವತಪ್ಪನ ಪುತ್ರ-ಮಿತ್ರಾದಿಗಳನ್ನು ಕುರಿತು—ಅಜ್ಜನೂ, ಮೇನಕಾದೇವಿಯೂ ಪರಲೋಕಕ್ಕೆ ತೆರಳಿದ್ದಾರೆ. ನೀವು ಸುಮ್ಮನೆ ಯಾಕೆ ಕುಳಿತಿರುವಿರಿ? ಮುಂದಿನ ಕಾರ್ಯವನ್ನು ನಡೆಸಿರಿ, ಎಂದು ಹೇಳಲು. ಎಲ್ಲರೂ ಬಂದು ನೋಡಿ, ಇದು ಮೌನೇಶನ ಮಾಯೆಯೆಂದು ತಿಳಿದು, ತದ್ಮ್ರ ಪದ್ಧತಿ ಪ್ರಕಾರ ಪ್ರೇತ ಸಂಸ್ಕಾರವನ್ನು .ನಡೆಸಿ, ಶ್ರೀ ಮೌನಗುರುವಿನ ಮಹಿಮೆಯನ್ನು ನೋಡಿ, ಪರಮಾಶ್ಚರ್ಯಭರಿತರಾಗಿದ್ದರೆಂಬಲ್ಲಿಗೆ ಏಳನೇ ಅಧ್ಯಾಯ ಸಂಪೂರ್ಣವು.



ಶ್ರೀ ಮೌನಗುರು ಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ಎಂಟನೆಯ ಅಧ್ಯಾಯ



—ವಿಜಾಪುರದಲ್ಲಿ ಮಹಾತ್ಮ್ಯ ತೋರಿಸಿದ್ದು.—

ಪೂರ್ವದಲ್ಲಿ ವಿಜಾಪುರವೆಂಬ ಪಟ್ಟಣವನ್ನು ಮುಸಲ್ಮಾನ ಧರ್ಮದ ಬಾದಶಹನು ಆಳುತ್ತಿದ್ದನು. ಆತನು ಅಲ್ಲಲ್ಲಿ ನಿಮಾಜುಮಾಡುವ ಮಸೀದೆ

ಗಳನ್ನು ಬಹು ಸುಂದರವಾಗಿ ಕಟ್ಟಿಸಿದ್ದನು. ಅವುಗಳಲ್ಲಿ ಜುಮ್ಮಾಮಸೀದೆ ಎಂಬುವದು ಬಹಳ ದೊಡ್ಡದಾಗಿಯೂ, ಚೀರಣಾ ಕೆಲಸದಿಂದ ತಯಾರಿಸಿದ್ದಾಗಿಯೂ, ಮನೋಹರವಾಗಿಯೂ ಇತ್ತು. ಆ ಮಸೀದೆಯಲ್ಲಿ ಸೇಖ, ಸೈಯದ, ಮೊಗಲ, ಪಠಾಣರೆಂಬ ಎಲ್ಲ ಜಾತಿಯ ಮುಸಲ್ಮಾನರು ನಿಮಾಜು ಮಾಡಲಿಕ್ಕಾಗಿ ಕೂಡುತ್ತಿದ್ದರು ಇದಲ್ಲದೆ ಅಲ್ಲಿ ಖಾಜೀ ಮುಲ್ಲಾರೆಂಬ ಗುರುಗಳು ಹುಡುಗರ ಸಮೂಹಕ್ಕೆ ತಮ್ಮ ಧರ್ಮಗ್ರಂಥವಾದ ಖುರಾನವನ್ನು ಬೋಧಿಸುತ್ತಿದ್ದರು ಹುಡುಗರೆಲ್ಲರೂ ಗುರುಗಳು ಹೇಳಿಕೊಟ್ಟಂತೆ ಖುರಾನವ ಪಾಠವನ್ನು ಕಲಿಯುವದಕ್ಕಾಗಿ ಒಬ್ಬರಿಗೊಬ್ಬರು ಛಲದಿಂದ ತಲೆ-ತಲೆ ತಾಕಲಾಡುವಂತೆ ವಲ-ವಲಿದು ಓದುತ್ತಿದ್ದರು.

ಈ ಮೇರೆಗೆ ಖುರಾನವನ್ನು ಹೇಳಿಕೊಡುವ ಗುರುಗಳ ಗದ್ದಲವೂ ಓದುತ್ತಿರುವ ಹುಡುಗರ ಗದ್ದಲವೂ ನಡೆದಿರಲು, ಆಗ ಒಬ್ಬ ಹುಚ್ಚನಾದ ಫಕೀರನು ಅಲ್ಲಿಗೆ ಬಂದನು ಆತನು ಕರೀಕೋರಿಯ ಅಂಗಿಯನ್ನು ತೊಟ್ಟಿದ್ದನು; ತಲೆಗೆ ಅದೇ ಜಾತಿಯ ಟೊಪ್ಪಿಗೆಯನ್ನು ಹಾಕಿದ್ದನು; ಮತ್ತು ಆ ಹುಚ್ಚನು ಒಂದು ಚರಣದಲ್ಲಿ ಪಾದರಕ್ಷೆಯನ್ನೂ, ಮತ್ತೊಂದು ಚರಣದಲ್ಲಿ ಪಾಪೋಸನ್ನೂ ಮೆಟ್ಟಿದ್ದನು. ಅವನ ಬಾಯೊಳಗಿಂದ ಜೊಲ್ಲು ಧಾರೆಗಟ್ಟಿ ಇಳಿಯುತ್ತಿತ್ತಲ್ಲದೆ, ಆಗಿಂದಾಗ್ಗೆ ಹಲ್ಕಿರಿದು ನಗುತ್ತಿದ್ದನು.

ಹೀಗಿರುವ ಆ ಹುಚ್ಚ ಫಕೀರನು ತನ್ನ ಗಲ್ಲಗಳನ್ನು ಬಡಿದುಕೊಳ್ಳುತ್ತಲೂ. ಹೆಜ್ಜೆ-ಹೆಜ್ಜೆಗೆ ಹಾಯ್ ಹಾಯ್! ಮೌನಧೀನ, ಎಂದು ಅನ್ನುತ್ತಲೂ ಮಸೀದೆಯ ಪಾವಟಿಗೆಗಳನ್ನು ಹತ್ತಿ ಖಾಜಿಯ ಹತ್ತರ ಬಂದು ನಿಂತು:—ಇದೇನು ಮುಲ್ಲಾಸಾಹೇಬರೇ, ಈ ಹುಡುಗರು ಕೂಗಿ ಕೂಗಿ ಎಷ್ಟು ಕಷ್ಟ ಪಡುತ್ತಿರುವರಲ್ಲ! ಇವರಿಗೇನು ಸನ್ನಿಹಿಡಿದಿದೆಯೋ ಹೇಗೆ? ಅಕಟಾ! ಇವರು ಹೀಗೆ ಗಂಟಲು ಹರಿಯುವಂತೆ ಕೂಗುವವನ್ನು ನೋಡಿ ನನಗೆ ಬಹು ಸಂಕಟವಾಗುತ್ತದೆ. ಇರಲಿ. ಈ ಹುಡುಗರು ಓದುವದಾದರೂ ಏನು? ಎಂದು ಕೇಳಿದನು.

ಮುಲ್ಲಾಸಾಹೇಬರು ಫಕೀರನನ್ನು ಕುರಿತು:—ಎಲೋ, ಅದರ ವಿಷಯವು ಪಾಮರನಾದ ನಿನಗೆ ಹೇಗೆ ಗೊತ್ತಾಗಬೇಕು? ಇವರು ಓದುವದು ನಮ್ಮ ಧರ್ಮಗ್ರಂಥವಾದ ಖುರಾನವಲ್ಲವೇ?

ಫಕೀರಃ—ಹಾಗಾದರೆ ಅದರಲ್ಲಿ ಏನು ಹೇಳಿದೆ?

ಖಾಜಿ:—ಅದರಲ್ಲಿ ದೇವರನ್ನು ಹೊಂದುವ ಮಾರ್ಗವನ್ನು ಸೂಚಿಸಿದೆ.

ಫಕೀರ:—ಆ ಮಾರ್ಗವು ಗೊತ್ತಾಗಿರುವ ನೀವು ದಯಮಾಡಿ ನನಗೆ ದೇವರನ್ನು ತೋರಿಸುವಿರೇನು?

ಖಾಜಿ:—ದೇವರನ್ನು ತೋರಿಸುವದು ನಮ್ಮಿಂದ ಹ್ಯಾಗಾದೀತು?

ಫಕೀರ:—ಅಂದಮೇಲೆ ಗುರುಗಳೆಂದು ನಿಮಗೆ ಯಾಕೆ ಅನ್ನಬೇಕು?

ಖಾಜಿ:—ಒಳ್ಳೇದು, ನಮಗಂತೂ ದೇವರನ್ನು ತೋರಿಸುವ ಸಾಮರ್ಥ್ಯವು ಇರುವದಿಲ್ಲ. ನಿನ್ನಲ್ಲಿದ್ದರೆ ತೋರಿಸು. ನಾವು ಯಾವಾಗಲೂ ನೀನೇ ಗುರುವೆಂದು ಸೇವಿಸುತ್ತಿರುವೆವು.

ಈ ಪ್ರಕಾರ ಇಬ್ಬರಿಗೂ ಸಂಭಾಷಣಗಳು ನಡೆದಿರಲು, ಫಕೀರನು:—'ಖಾಜೀ ಸಾಹೇಬರೇ, ನಿಮಗೆ ದೇವರನ್ನು ನೋಡಬೇಕೆಂಬ ಇಚ್ಛೆ ಇದ್ದರೆ ನನ್ನ ಆಳನ್ನು ಕಳಿಸಿ ಕರೆಯಿಸುತ್ತೇನೆ ನೋಡಿರಿ.' ಎಂದು ತನ್ನ ಬಲಗಾಲಲ್ಲಿರುವ ಪಾಪೋಸನ್ನು ಆಕಾಶಕ್ಕೆ ತೂರಿದನು. ಅದು ರಾಜಸಭೆಯಲ್ಲಿ ಮುಲ್ಲಾಸಾಹೇಬರು ಓದುವ ಖುರಾನದ ಬಳಿಯಲ್ಲಿ ಬಿದ್ದಿತು. ಅದನ್ನು ನೋಡಿ ಎಲ್ಲ ಜನರೂ ಆಶ್ಚರ್ಯಭರಿತರಾಗಿ:—ಆಹಾ! ನಮ್ಮ ಪವಿತ್ರವಾದ ಈ ಖುರಾನವನ್ನು ಅಪವಿತ್ರ ಮಾಡಿದ ದುಷ್ಟನು ಯಾರಿರಬಹುದು? ಎಂದು ಗದ್ದಲವನ್ನು ಎಬ್ಬಿಸಿದರು. ಈ ಸುದ್ದಿಯನ್ನು ಬಾದಶಹನು ಕೇಳಿ, ಮಹಾಸಿಟ್ಟಿನಿಂದ ಸೇವಕರನ್ನು ಕರೆದು:—ಎಲೈ ಚರರೇ, ಈ ನೀಚ ಕಾರ್ಯವನ್ನು ಮಾಡಿದ ದುಷ್ಟನನ್ನು ಈ ಪಟ್ಟಣದಲ್ಲೆಲ್ಲಾ ಶೋಧಿಸಿ ಹಿಡಿದುಕೊಂಡು ಬರುವಂಥವರಾಗಿರಿ, ಎಂದು ಕಟ್ಟಪ್ಪಣೆ ಮಾಡಿದನು.

ಆ ಕ್ಷಣವೇ ರಾಜಸೇವಕರು ಗುಂಪುಗುಂಪಾಗಿ ಹೊರಟು ಪಟ್ಟಣದಲ್ಲಿರುವ ಎಲ್ಲ ಬಾಜಾರಗಳಲ್ಲಿಯೂ, ಎಲ್ಲ ಕೇರಿಗಳಲ್ಲಿಯೂ, ಎಲ್ಲ ಮನೆಗಳಲ್ಲಿಯೂ ಎಲ್ಲ ಸಂದಿಗಳಲ್ಲಿಯೂ ಹುಡುಕಲಿಕ್ಕೆ ಹತ್ತಿದರು. ಅವರಲ್ಲೊಬ್ಬ ಚರನು ಅಲ್ಲಲ್ಲಿ ಶೋಧಿಸುತ್ತ ಜುಮ್ಮಾಮಸೀದೆಯ ಹತ್ತರ ಬಂದನು. ಅಲ್ಲಿ ಮುಲ್ಲಾಸಾಹೇಬರು ಹುಡುಗರನ್ನು ಓದಿಸುತ್ತಿರಲು, ಅವರನ್ನು ಕಂಡು 'ಅಲೇಕುಂ ಸಲಾಂ' ಎಂದು ಅಂದನು.

ಮುಲ್ಲಾ ಸಾಹೇಬರು ರಾಜದೂತನನ್ನು ನೋಡಿ:—ಯಾಕೆ ಕರೀಮ. ಬಾದಶಹರು ಕಳಿಸಿದರೋ? ಅಥವಾ ನೀನೇ ಬಂದೆಯೋ? ಬಂದ ಕಾರಣ ವಾದರೂ ಏನು? ಎಂದು ಕೇಳಿದರು.

ರಾಜದೂತನು:—ಖಾಜೀಸಾಹೇಬ, ರಾಜ ಸಭೆಯಲ್ಲಿ ಕಲಬುರ್ಗಿ ಮೊದಲಾದ ಪ್ರಾಂತಗಳಿಂದ ಬಂದ ಮುಲ್ಲಾ ಸಾಹೇಬರು ಖುರಾನವನ್ನು ಓದುತ್ತ ಕುಳಿತಿದ್ದರು. ಅಷ್ಟರಲ್ಲಿ ಎಲ್ಲಿಂದಲೋ ಒಂದು ಪಾಪೋಸು ಬಂದು ಅದರ ಸಮೀಪದಲ್ಲಿ ಬಿದ್ದಿತು; ಅದುಕಾರಣ ಬಾದಶಹರು ಆ ದುಷ್ಟನನ್ನು ಶೋಧಿಸಿ ಹಿಡಿತರಲಿಕ್ಕಾಗಿ ಕಟ್ಟಪ್ಪಣೆಮಾಡಿ ಎಷ್ಟೋ ಜನರನ್ನು ಕಳಿಸಿರುವರು. ಅವರಲ್ಲಿ ನಾನೊಬ್ಬನು ಮಾತ್ರ ಇಲ್ಲಿಗೆ ಬಂದಿರುತ್ತೇನ. ಎಲ್ಲಿ ಹುಡುಕಿದರೂ ಆ ಖೂಳನು ಸಿಗಲೊಲ್ಲನು. ನೀವಾದರೂ ಕಂಡಿದ್ದರೆ ಹೇಳಿರಿ, ಎಂದು ಕೇಳಿದನು.

ಆ ಮಾತಿಗೆ ಮುಲ್ಲಾ ಸಾಹೇಬರು.—ಇಲ್ಲಿಗೆ ಒಬ್ಬ ಹುಚ್ಚನು ಬಂದು ಅಲ್ಲಾನನ್ನು ತೋರಿಸೆಂದು ಅನ್ನಲು, ನಾವು—ನಮ್ಮಿಂದಾಗುವದಿಲ್ಲ, ನೀನೇ ತೋರಿಸೆಂದು ಅಂದೆವು. ಆಗ ಹುಚ್ಚನು:—ಹಾಗಾದರೆ ತೋರಿಸುತ್ತೇನೆ. ನೋಡಿರಿ, ಎಂದು ತನ್ನ ಕಾಲಲ್ಲಿರುವ ಪಾಪೋಸನ್ನು ಆಕಾಶಕ್ಕೆ ಹಾರಿಸಿದನು. ಮುಂದೇನಾಯಿತೋ ನಾವರಿಯೆವು. ಆ ಹುಚ್ಚನು ಮಾತ್ರ ಇಲ್ಲಿಯೇ ಇರುವನು.

ಹೀಗೆ ಹೇಳುವ ಮುಲ್ಲಾ ಸಾಹೇಬರ ಮಾತುಗಳನ್ನು ಕೇಳಿ ರಾಜ ಸೇವಕನು:—ಸ್ವಾಮಿ, ಆ ಹುಚ್ಚನು ಎಲ್ಲಿರುವನು ತೋರಿಸಿರಿ?

ಖಾಜಿ–ಇಗೋ, ಇಲ್ಲಿಯೇ ಇರುವನು ನೋಡೆಂದು, ಒಂದು ಮೂಲೆಯಲ್ಲಿ ನಗುತ್ತ ಕುಳಿತಿರುವ ಫಕೀರನನ್ನು ತೋರಿಸಿದರು.

ಅವನನ್ನು ನೋಡಿದ ಕೂಡಲೇ ರಾಜದೂತನು:—ಎಲೋ ಹುಚ್ಚನೇ. ನೀನು ಮಹೇಂದ್ರಜಾಲವನ್ನು ಬಲ್ಲೆಯಾ ಹೇಗೆ? ಬಾದಶಹನು ನಿನ್ನನ್ನು ಕೊಲ್ಲಿಸದೆ ಬಿಡುವದಿಲ್ಲ. ನಿನ್ನ ಗಾರುಡವೆಲ್ಲ ಆತನೆದುರಿಗೆ ನಡೆಯಲಾರದು. ನಿನ್ನ ಒಂದು ಕಾಲಲ್ಲಿ ಪಾದರಕ್ಷೆಯಿದ್ದು, ಇನ್ನೊಂದು ಬರಿದಾಗಿರುವವಲ್ಲ! ಇದರ ರಕ್ಷೆಯು ಎಲ್ಲಿ ಹೋಯಿತು? ಚನ್ನಾಗಿ ಹೇಳು, ಎಂದು ಕೇಳಿದನು.

ಫಕೀರ—ದೇವರನ್ನು ತೋರಿಸೆಂದು ಈ ಮುಲ್ಲಾಸಾಹೇಬರು ಕೇಳಿದ್ದರಿಂದ ಆತನನ್ನು ಕರೆಯಲಿಕ್ಕಾಗಿ ಮೇಲಕ್ಕೆ ಹಾರಿಸಿರುವೆನು. ಇದು ವರೆಗೂ ಯಾಕೋ ಬರಲಿಲ್ಲ. ಇನ್ನು ಸ್ವಲ್ಪ ವೇಳೆಯಲ್ಲಿ ಬರಬಹುದು, ಎಂದು ಮುಗುಳ್ನಗೆಯಿಂದ ಮಾತಾಡಿದನು

ಹೀಗೆ ಹೇಳುವ ಹುಚ್ಚನ ಚೇಷ್ಟೆಯ ಮಾತುಗಳನ್ನು ಕೇಳಿ, ರಾಜ ದೂತನು ಸಿಟ್ಟಿನಿಂದ – ಎಲೋ ದುಷ್ಟನೇ, ನಿನಗೆ ಎಷ್ಟು ಗರ್ವವು? ಬಾದಶಹರ ಹತ್ತಿರ ಬಂದು ಈ ನಿನ್ನ ಕುಚೇಷ್ಟೆಯನ್ನು ತೋರಿಸು. ಹಾಗಾದರೆ ನೀನು ಗಟ್ಟಿಗನೆಂದು ಈ ಪಟ್ಟಣದ ಜನರೆಲ್ಲರಿಗೂ ಸ್ಪಷ್ಟವಾಗಿ ತಿಳಿಯುವದು, ಎಂದು ಎರಡು ಪೆಟ್ಟುಗಳನ್ನು ಹಾಕಿ, ಕುಳಿತಿರುವ ಫಕೀರನ ಕೈ ಹಿಡಿದು ಎಳೆತಂದು ಮಸೀದೆಯ ಹೊರಗೆ ನಿಲ್ಲಿಸಿದನು.

ಅಷ್ಟರಲ್ಲಿ ಬಾದಶಹನು ಕಳಿಸಿದ ಎಲ್ಲ ಸೇವಕರು ಅಲ್ಲಿಗೆ ಬಂದು ಮುತ್ತಿ, ಹುಚ್ಚ ಫಕೀರನ ಕೈಗಳಿಗೆ ಹಗ್ಗವನ್ನು ಕಟ್ಟಿ ಎಳೆದೊಯ್ದು ಬಾದಶಹನ ಎದುರಿಗೆ ನಿಲ್ಲಿಸಿದರು.

ಸದರಿನಲ್ಲಿ ಕುಳಿತಿರುವ ಬಾದಶಹನು ಫಕೀರನನ್ನು ಕುರಿತು:— ಎಲೋ ಹುಚ್ಚನೇ, ನೀನು ಮೋಚ್ಚೆಯನ್ಯಾಕೆ ತೂರಿದೆ? ಅದು ನಮ್ಮ ಪವಿತ್ರ ಕುರಾನದ ಹತ್ತಿರ ಬಿದ್ದು, ಅಪವಿತ್ರ ಮಾಡಿರುವದು. ನೀನು ಫಕೀರನಾಗಿದ್ದು ಇಂಥ ನೀಚ ಕೃತ್ಯವನ್ನು ಮಾಡಿದ ಕಾರಣವೇನು? ನಿಜವಾದ ಸಂಗತಿಯನ್ನು ಹೇಳು, ಎಂದು ಕೇಳಿದನು.

ಫಕೀರ—ಸರಕಾರ, ತಮ್ಮೆದುರಿಗೆ ನಿಜವನ್ನು ಹೇಳದೆ ಸುಳ್ಳನ್ನೇಕೆ ಹೇಳಲಿ? ಜುಮ್ಮಾ ಮಸೀದೆಯಲ್ಲಿ ಮುಲ್ಲಾಸಾಹೇಬರು ಹುಡುಗರನ್ನು ಓದಿಸುತ್ತಿರಲು, ನಾನು ಅವರನ್ನು ಕುರಿತು – ನೀವು ಈ ತಮ್ಮಗಳಿಗೆ ಹೇಳುವದು ಏನೆಂದು ಕೇಳಿದೆನು. ಅದಕ್ಕೆ ಅವರು:-ಇದು ದೇವರನ್ನು ಕಂಡು ಹಿಡಿಯುವ ಖುರಾನವೆಂದು ಹೇಳಿದರು. ನಾನು ಅವರ ಮಾತುಗಳನ್ನು ಕೇಳಿ:-ಹಾಗಾದರೆ ನನಗೆ ದೇವರನ್ನು ತೋರಿಸಿರೆಂದು ಅಂದೆನು. ಅದಕ್ಕೆ ಮುಲ್ಲಾಸಾಹೇಬರು:— ದೇವರನ್ನು ತೋರಿಸುವದು ನಮ್ಮಿಂದಾಗುವದಿಲ್ಲ. ನೀನೇ ತೋರಿಸು, ಎಂದು ಕೇಳಲು, ನಾನು ದೇವರನ್ನು ಕರೆತರಲಿಕ್ಕಾಗಿ ನನ್ನ ಬಳಿಯ ಪಾಪೋಸನ್ನು ಆಕಾಶಕ್ಕೆ ತೂರಿದೆನು. ಇದರಲ್ಲಿ ನನ್ನದೇನು

ತಪ್ಪಿದೆ? ನಿರಪರಾಧಿಯಾದ ನನ್ನನ್ನು ಸುಮ್ಮನೆ ಏಕೆ ಕಾಡುತ್ತೀರಿ? ಎಂದು ನಕ್ಕನು.

ರಾಜನ ಭಯವಿಲ್ಲದೆ ಹೀಗೆ ನಗುತ್ತ ಮಾತಾಡುತ್ತಿರುವ ಫಕೀರನನ್ನು ನೋಡಿ ಬಾದಶಹನು ಸಿಟ್ಟಿನಿಂದ—ಮಾದರಚೋದ್, ನಿನಗೆ ನನ್ನ ಹೆದರಿಕೆಯು ಸ್ವಲ್ಪವಾದರೂ ಇದ್ದಹಾಗೆ ಕಾಣುವದಿಲ್ಲ. ನೀನು ಯಾರ ಸಂಗತ ಮಾತಾಡುತ್ತೀನೆಂಬ ಎಚ್ಚರವನ್ನಿಟ್ಟುಕೊಂಡು ಮಾತಾಡು.

ಫಕೀರ—ಸರಕಾರ, ಬಾದಶಹರ ಕೂಡ ಮಾತಾಡುವೆನೆಂಬ ಅರಿವು ನನಗಿದೆ; ಆದರೆ ನಿಜ ಸಂಗತಿಯನ್ನು ಹೇಳುವ ನನಗೆ ಯಾರ ಅಂಜಿಕೆ ಏನು? ಎಂದು ಪುನಃ ನಕ್ಕನು

ಆಗಂತೂ ಬಾದಶಹನ ಸಿಟ್ಟು ಮತ್ತಿಷ್ಟು ಹೆಚ್ಚಾಗಿ—ಈ ಖೂಳನನ್ನೇನು ನೋಡುವಿರಿ? ಇವನ ಗರ್ವಭಂಗವಾಗುವ ಹಾಗೆ ಚನ್ನಾಗಿ ಹೊಡೆಯಿರಿ, ಎಂದು ಅಪ್ಪಣೆ ಮಾಡಿದನು.

ರಾಜದೂತರು ಜೇರಬಂದಿನಿಂದ ಒಳಿತಾಗಿ ಥಳಿಸಿದರು. ಆ ಹೊಡೆತವನ್ನು ತಾಳಲಾರದೆ ಫಕೀರನು ಅಯ್ಯಯ್ಯೋ! ಅಪ್ಪಪ್ಪಾ!! ನನ್ನನ್ನು ಹೊಡೆಯಬೇಡಿರಿ. ಈ ಅನಾಥನಾದ ಫಕೀರನ ಮೇಲೆ ಕೃಪೆ ಮಾಡಿರಿ. ಎಂದು ಶಂಖಪುಟಿಸಹತ್ತಿದನು.

ಹೀಗೆ ಅಳುತ್ತಿರುವ ಫಕೀರನನ್ನು ನೋಡಿ ಬಾದಶಹನ ಸಮೀಪದಲ್ಲಿ ಕುಳಿತಿರುವ ಪ್ರಮುಖರಲ್ಲಿ ಕೆಲವರು:—ಸಾಕು, ಸಾಕು! ಇವನು ಹುಚ್ಚನಿರುವದರಿಂದ ಬುದ್ಧಿಯು ಸ್ವಾಧೀನವಿಲ್ಲ, ಹೋಗಲಿ ಬಿಟ್ಟು ಬಿಡಿರಿ, ಎಂದು ಅಂದರು.

ಮತ್ತೆ ಕೆಲವರು:—ಛೀ ಛೀ, ಇವನು ಬಹು ಗಾರುಡಿಗನಿರುವನು; ಇವನನ್ನು ಬಿಡಬೇಡಿರಿ. ಇನ್ನಿಷ್ಟು ಹೊಡೆಯಿರಿ, ಎಂದು ಹೇಳಿದರು.

ಕೆಲವರು:—ಎಲೋ ಹುಚ್ಚನೇ, ನಾನು ಮಾಡಿದ್ದು ಅಪರಾಧವಾಯಿತೆಂದು ಬಾದಶಹರಿಗೆ ಕುರ್ನಿಸ ಮಾಡಿ ಹೇಳಿಕೋ. ಹಾಗಾದರೆ ನಿನ್ನನ್ನು ಕ್ಷಮಿಸಿ ಬಿಟ್ಟು ಬಿಡುವರು, ಎಂದು ನುಡಿದರು.

ಆ ಮಾತಿಗೆ ಫಕೀರನು—ಏನೆನ್ನುವಿರಿ? ಬಾದಶಹನಿಗೆ ಕುರ್ನಿಸ ಮಾಡಿ ಹೇಳಿಕೊಳ್ಳಲಿಕ್ಕೆ ನಾನೇನು ತಪ್ಪು ಮಾಡಿರುವೆನು? ದೇವರನ್ನು

ಕರೆಯಲಿಕ್ಕಾಗಿ ಕಳಿಸಿದ ನನ್ನ ಸೇವಕನು ಅವಸರದಿಂದ ಹೋಗುವಾಗ ಕಾಲು ತಪ್ಪಿ ಖುರಾನದ ಹತ್ತರ ಬಿದ್ದರೂ ಬಿದ್ದಿರಬಹುದು. ಆನೆಯಂಥ ದೊಡ್ಡ ಪ್ರಾಣಿಯು ಸಹ ಮುಕ್ಕರಿಸಿ ಬೀಳುವದುಂಟು; ಆದರೆ ಸಣ್ಣ ಪ್ರಾಣಿಯಾದ ನನ್ನ ಆಳು ಬಿದ್ದರೆ ಇಷ್ಟೇಕೆ ಸಿಟ್ಟು ಬಂದಿರುವದು? ಇದಲ್ಲದೆ, ಬಿದ್ದವನ ಮೇಲಿಲ್ಲದ ಸಿಟ್ಟು ಕಳಿಸಿದವನ ಮೇಲೆ ಯಾಕೆ ಬಂದಿರುವದೋ ತಿಳಿಯದಾಗಿದೆ. ರಾಜರೂ ಪ್ರಜೆಗಳೂ ಬಹಳೇ ಧರ್ಮಿಷ್ಠರಿರುವಿರಿ, ಎಂದು ಹಾಸ್ಯ ಮಾಡಿ ನಕ್ಕನು.

ಆಗಂತೂ ಬಾದಶಹನ ಕೋಪಕ್ಕೆ ನೆಲೆ ಇಲ್ಲದಂತಾಯಿತು. ಆತನು ಕಾಲಾಗ್ನಿಯಂತೆ ಸಂತಪ್ತನಾಗಿ ಈ ನೀಚನು ಫಕೀರನಾಗಿದ್ದರೂ ಪವಿತ್ರ ಖುರಾನವನ್ನು ಅಪವಿತ್ರಮಾಡಿ, ಮತ್ತೂ ಹಾಸ್ಯಮಾಡಿ ನಗುತ್ತಿರುವನು. ಈ ಖೂಳನನ್ನೇನು ನೋಡುವಿರಿ? ಇವನ ದೇಹವನ್ನು ನುಚ್ಚುನುಚ್ಚಾಗುವಂತೆ ಖಡ್ಗದಿಂದ ಕೊಚ್ಚಿ ಒಂದು ಜಲ್ಲಿಯಲ್ಲಿ ತುಂಬಿ ಮೇಲೆ ವಸ್ತ್ರವನ್ನು ಮುಚ್ಚಿ ಬಿಡಿರಿ ಇವನ ಮಂತ್ರವು ಎಷ್ಟಿದ್ದರೂ ನೋಡಿಕೊಳ್ಳುತ್ತೇನೆ.

ಬಾದಶಹನಿಂದ ಇಂಥ ಕಟ್ಟಪ್ಪಣೆ ದೊರೆತ ಮೇಲೆ ಕೇಳುವದೇನು? ಕೂಡಲೆ ರಾಜದೂತರು ಒರೆಯಿಂದ ಖಡ್ಗವನ್ನು ಹಿರಿದು ಹುಚ್ಚ ಫಕೀರನನ್ನು ಕಡಿದು ನುಚ್ಚು ನುಚ್ಚು ಮಾಡಿ ಅವನ ಚಿನಿಖಂಡವನ್ನೂ ಅಸ್ಥಿಗಳನ್ನೂ ಒಂದು ಜಲ್ಲಿಯಲ್ಲಿ ತುಂಬಿ ಮೇಲೆ ಶುಭ್ರವಾದ ಅರಿವೆಯನ್ನು ಮುಚ್ಚಿ ಬಾದಶಹನ ಸಮ್ಮುಖದಲ್ಲಿಟ್ಟು, ಇದರ ವಾಸನೆಯು ಮಹಾರಾಜರಿಗೆ ತಾಕಬಾರದೆಂದು ಉತ್ತಮ ಲೋಭಾನದ ಹೊಗೆಯನ್ನು ಹಾಕಿದರು. ಅದನ್ನು ನೋಡಿದವರಲ್ಲಿ ಕೆಲವರು—ಪಾಪ! ಪಾಪ!! ಅನಾಥನಾದ ಹುಚ್ಚನನ್ನು ಹೀಗೆ ನುಚ್ಚುನುಚ್ಚಾಗುವಂತೆ ಕೊಚ್ಚಿಸಿ ಜಲ್ಲಿಯನ್ನು ತುಂಬಿಸಬೇಕಾದರೆ ಬಾದಶಹನು ಎಷ್ಟು ಕಠಿಣ ಹೃದಯದವನಿರುವನು? ಆ ಫಕೀರನ ತಪ್ಪನ್ನು ಕ್ಷಮಿಸಿ ಬಿಟ್ಟಿದ್ದರೆ ಲೇಸಾಗುತ್ತಿದ್ದಿಲ್ಲವೆ? ಎಂದು ಅನ್ನುತ್ತಿದ್ದರು.

ಕೆಲವರು:-ಅವನ ಗರ್ವವೇ ಅವನನ್ನು ತಿಂದಿತು. ಇದರಲ್ಲಿ ಯಾರು ಮಾಡುವದೇನು? ಎಂದು ಅಂದರು. ಹೀಗೆ ಫಕೀರನ ವಿಷಯವಾಗಿ ಜನರು ಮನಬಂದ ಹಾಗೆ ಮಾತಾಡುತ್ತಿದ್ದರು. ಪಟ್ಟಣದಲ್ಲಿ ಎಲ್ಲಿ ನೋಡಿದರೂ

ಫಕೀರನ ಕೊಲೆಯಾದ ಸುದ್ದಿಯೇ ಸುದ್ದಿಯು. ಬಾದಶಹನಂತೂ ಫಕೀರನ ಕೊಲೆ ಮಾಡಿಸಿದ ಮೇಲೆ ಪಿಟ್ಟೆಂದು ಮಾತಾಡದಂತೆ ಹುಚ್ಚನಹಾಗೆ ಸಿಂಹಾಸನದಲ್ಲಿ ಕುಳಿತುಬಿಟ್ಟಿದ್ದನು. ಆತನ ಮನಸ್ಸಿಗೆ ಸಮಾಧಾನವೇ ಇದ್ದಿಲ್ಲ; ಹೊಟ್ಟೆಯೊಳಗೆ ಸಂಕಟವಾಗಹತ್ತಿತು; ಮುಖವು ಕಳೆಗುಂದಿ ಹೋಯಿತು; ಯಾಕಾದರೂ ಈ ಫಕೀರನನ್ನು ಕೊಲ್ಲಿಸಿದೆನೆಂದು ಮಿಡುಕಲಿಕ್ಕೆ ಹತ್ತಿದನು. ಕೊಲೆಮಾಡಿಸುವದಕ್ಕಿಂತ ಪೂರ್ವದಲ್ಲಿದ್ದ ಆತನ ಉಗ್ರರೂಪವು ಸಂಪೂರ್ಣ ನಾಶವಾಗಿ ಚಿಂತಾಸ್ವರೂಪವು ನೆಲೆಗೊಂಡಿತ್ತು; ಆದರೆ ಮೀರಿಹೋದ ಕಾರ್ಯಕ್ಕೆ ಮಾಡುತ್ತಾನೇನು? ಇನ್ನು ಮೇಲೆ ಆತನು ತಮ್ಮ ಧರ್ಮ ಪದ್ಧತಿಯಂತೆ ಫಕೀರನ ಶವಕ್ಕೆ ಉತ್ತರ ಕ್ರಿಯಾದಿಗಳನ್ನು ಮಾಡಿಸಿರೆಂದು ಹೇಳಿ, ಸಿಂಹಾಸನದಿಂದ ಮೇಲಕ್ಕೇಳತಕ್ಕವನು.

ಅಷ್ಟರಲ್ಲಿ ಒಬ್ಬ ಚಾರನು ಓಡಿ ಬಂದು ಬಾದಶಹರಿಗೆ ಮುಜುರೆ ಮಾಡಿ— ಖಾವಿಂದ, ನೀವು ನುಚ್ಚು ನುಚ್ಚು ಮಾಡಿಸಿ ಜಲ್ಲಿಯಲ್ಲಿ ತುಂಬಿಸಿದ ಹುಚ್ಚನು ಒಂದು ಹಾಳು ಗುಡಿಯಲ್ಲಿ ಕುಳಿತಿರುವನು. ನಾನು ಇದೇ ಈಗ ನೋಡಿ ಬಂದೆನು, ಎಂದು ಹೇಳಿದನು.

ಆ ಮಾತನ್ನು ಕೇಳಿ ಬಾದಶಹನೂ, ಸಭೆಯಲ್ಲಿರುವ ಎಲ್ಲ ಜನರೂ ಆಶ್ಚರ್ಯಪಟ್ಟು, ಜಲ್ಲಿಯ ಮೇಲೆ ಮುಚ್ಚಿರುವ ವಸ್ತ್ರವನ್ನು ತೆಗೆಯಿಸಿ ನೋಡಲು, ಅದರಲ್ಲಿರುವ ಅಸ್ಥಿ ಮಾಂಸಗಳು ಇಲ್ಲದಂತಾಗಿ, ಆಗಲೆ ಅರಳಿದ ದಾಳಿಂಬೆಯ ಹೂಗಳು ಶೋಭಿಸುತ್ತಿದ್ದವು.

ಆಗ ಬಾದಶಹನೇ ಮೊದಲಾದ ಎಲ್ಲ ಜನರು— ಅಕಟಾ! ಫಕೀರನು ಹುಚ್ಚನೆಂದು ತಿಳಿದು ನಾವು ಮಾಡಬಾರದ ಕೆಲಸವನ್ನು ಮಾಡಿದೆವು. ಆತನು ಮನುಷ್ಯನಲ್ಲ, ಸಾಕ್ಷಾತ್ ದೇವರಿರುವನು, ಎಂದು ಸರ್ವರೂ ಕಾಲ್ನಡೆಯಿಂದ ಫಕೀರನಿರುವ ಆ ಹಾಳು ಗುಡಿಗೆ ಹೋಗಿ ಆತನ ಚರಣಾರವಿಂದಗಳಿಗೆ ನಮಸ್ಕರಿಸಿ:— ದೇವಾ, ಮೂಳರಾದ ನಾವು ನಿನ್ನ ಮಹಾಮಹಿಮೆಯನ್ನು ಅರಿಯದಾದೆವು. ನಮ್ಮ ಎಷ್ಟು ತಪ್ಪುಗಳಿದ್ದರೂ ಕ್ಷಮಿಸಿ ಕಾಪಾಡು, ಎಂದು ಬೇಡಿಕೊಂಡರು.

ಫಕೀರನು — ಬಾದಶಹರೇ, ಹುಚ್ಚನಾದ ನನಗೆ ಇಷ್ಟೇಕೆ ಉಪಚಾರ ಮಾಡುತ್ತೀರಿ? ನೀವು ಸಿಟ್ಟಿನಿಂದ ಕೊಚ್ಚಿ ಹಾಕಿದ ನಾನು, ದೇವರ ದಯೆ

ಯಿಂದ ಪುನಃ ಬದುಕಿ ಬಂದೆನು ಅನಾಥನಾದ ನನ್ನ ಮೇಲೆ ರಾಜಸಭೆಯಲ್ಲಿ ಒಬ್ಬರಿಗೂ ದಯೆ ಹುಟ್ಟಲಿಲ್ಲ. ಆದಕಾರಣ ನಾನು ಪರಮಾತ್ಮನಾದ ಅಲ್ಲಾನಿಗೇ ಮೊರೆಯಿಟ್ಟೆನು. ದಯಾಘನನಾದ ಆತನು ನನ್ನನ್ನು ರಕ್ಷಿಸಿದನು ಒಂದು ವೇಳೆ ಆತನೂ ನಿಮ್ಮ ಹಾಗೆ ನಿರ್ದಯನಾಗಿದ್ದರೆ ನನ್ನ ಇಹಲೋಕದ ಯಾತ್ರೆಯು ಮುಗಿದು ಹೋಗುತ್ತಿತ್ತು." ಎಂದು ಪೂರ್ವದಂತೆ ನಗುತ್ತಲೆ ಹೇಳಿದನು.

ಬಾದಶಹನು ಫಕೀರನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು—ಮಹಾಸ್ವಾಮಿ, ನಿನ್ನ ಮಾಯಾನಟನೆಯನ್ನು ಇನ್ನು ಸಾಕು ಮಾಡು. ಜಗದ್ರಕ್ಷಕನಾದ ನಿನ್ನ ಘನಮಹಿಮೆಯನ್ನು ಅಜ್ಞರಾದ ನಾವು ತಿಳಿಯಲಾರೆವಾದ್ದರಿಂದ ನಮ್ಮ ಅಪರಾಧಗಳನ್ನು ಕ್ಷಮಿಸಿ, ಉದ್ಧರಿಸು! ಎಂದು ಪ್ರಾರ್ಥಿಸಿ, ಅರಮನೆಯಿಂದ ಆನೆ, ಕುದುರೆ, ಅಂದಣಗಳನ್ನು ತರಿಸಿ ಫಕೀರನನ್ನು ಕುರಿತು—ಸ್ವಾಮಿ. ಈ ಪಲ್ಲಕ್ಕಿಯಲ್ಲಿ ಕುಳಿತು ಅರಮನೆಗೆ ದಯಮಾಡಿಸಿ, ಈ ಸೇವಕನ ಸೇವೆಯನ್ನು ಕೈಕೊಳ್ಳಬೇಕು, ಎಂದು ಬೇಡಿಕೊಂಡನು.

ಆಗ ವೇಷಧಾರಿಯಾದ ಫಕೀರನು ನಿಜಸ್ವರೂಪಾದ ಮೌನೇಶನ ರೂಪಿನಿಂದ ಪ್ರಕಟನಾಗಿ:-ಬಾದಶಹನೇ, ಪಲ್ಲಕ್ಕಿಮೊದಲಾದ ಉತ್ಸವಗಳು ನಿನಗೇ ಇರಲಿ. ನಿನ್ನ ವಿಜ್ಞಾಪನೆ ಯಂತೆ ಅರಮನೆಗೆ ಬರುವೆನೆಂದು ಮೇಲಕ್ಕೆದ್ದು ಕಾಲ್ನಡಿಗೆಯಿಂದಲೇ ಹೊರಟನು.

ಬಾದಶಹನು ಛತ್ರ—ಚಾಮರ ಮೊದಲಾದ ಉತ್ಸವಗಳಿಂದ ಮೌನೇಶನನ್ನು ಕರೆತಂದು ಸಿಂಹಾಸನದ ಮೇಲೆ ಕೂಡ್ರಿಸಿ ಪಾದಪೂಜೆಯನ್ನು ಮಾಡಿ—ಮೌನಮಹಾರಾಜಾ, ನಿನ್ನ ದಯವಿರಲಿ, ಎಂದು ಪ್ರಾರ್ಥಿಸಿದನು

ಮೌನೇಶನು:—ರಾಜನೇ, ನಿನಗೆ ದೇವರು ಕ್ಷೇಮವನ್ನುಂಟುಮಾಡಲಿ, ಎಂದು ಹರಸಿ, ಬಾದಶಹನಿಗೆ ರಾಜನೀತಿಯನ್ನು ಬೋಧಿಸಿದನು

ಬಾದಶಹನು ಸ್ವಾಮಿ, ಈ ಸೇವಕನಿಗೆ ಯಾವದಾದರೊಂದು ತಮ್ಮ ಸೇವಾಕಾರ್ಯವನ್ನು ನಿಯಮಿಸಿ, ಧನ್ಯನನ್ನಾಗಿ ಮಾಡಿರಿ, ಎಂದು ನಮಸ್ಕರಿಸಿದನು.

ಮೌನೇಶನು— ಬಾದಶಹನೇ, ಒಳ್ಳೇದು. ನಾನು ಯಾವ ಕಾಲದಲ್ಲಿ ನಿನಗೆ ಸೇವಾಕಾರ್ಯ ಮಾಡಲಿಕ್ಕೆ ತಿಳಿಸುವೆನೋ ಆ ಕಾಲದಲ್ಲಿ ಮಾತ್ರ ಮಾಡಲಿಕ್ಕೆ ತಪ್ಪಬಾರದು, ಎಂದು ಹೇಳಿ, ಪುನಃ ಬಾದಶಹನು ಮಾತಾಡಬೇಕೆನ್ನುವಷ್ಟರಲ್ಲಿಯೇ ಅಂತರ್ಧಾನ ಹೊಂದಿದನೆಂಬಲ್ಲಿಗೆ ಎಂಟನೇ ಅಧ್ಯಾಯ ಸಂಪೂರ್ಣವು.



ಶ್ರೀ ಮೌನಗುರು ಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ಒಂಬತ್ತನೆಯ ಅಧ್ಯಾಯ



—ದೇವದುರ್ಗದಲ್ಲಿ ಮಹಿಮೆ ತೋರಿಸಿದ್ದು.—

ಎಲ್ಲ ದುರ್ಗಗಳಲ್ಲಿಯೂ ಮೇಲಾದ ದೇವದುರ್ಗವೆಂಬ ಪಟ್ಟಣ ಒಂದಿತ್ತು. ಅದರ ಮುಂಭಾಗದಲ್ಲಿ ''ನಿರಂಜನೇಶ್ವರಿ'' ಎಂಬ ಪವಿತ್ರ ನದಿಯು ಹರಿಯುತ್ತಿರುವದರಿಂದ ಅದು ಪುಣ್ಯಸ್ಥಲವೆಂದು ಹೆಸರಾಗಿತ್ತು; ಆದಕಾರಣ ಸಂಕ್ರಮಣ ಮೊದಲಾದ ಪುಣ್ಯ ಕಾಲಗಳಲ್ಲಿ ನದೀಸ್ನಾನಕ್ಕಾಗಿ ಜನ ಸಮೂಹವು ಅಲ್ಲಿಗೆ ಕೂಡುತ್ತಿತ್ತು. ಇದಲ್ಲದೆ ಸಂತಾನವಿಲ್ಲದ ಸ್ತ್ರೀ-ಪುರುಷರು ಆ ನದಿಯಲ್ಲಿ ಸ್ನಾನ ಮಾಡಿ ಗಂಗೆಯನ್ನರ್ಚಿಸಿ ಸುಮಂಗಲಿಯರಿಗೆ ಭೋಜನ-ದಕ್ಷಿಣೆ ತಾಂಬೂಲಾದಿಗಳಿಂದ ತೃಪ್ತಿಪಡಿಸಿದ್ದಾದರೆ ಅಂಥವರಿಗೆ ಸಂತಾನ ಪ್ರಾಪ್ತಿಯಾಗುತ್ತಿತ್ತಾದ್ದರಿಂದ, ಎಷ್ಟೋ ಜನ ದಂಪತಿಗಳು ಗಂಗಾಪೂಜೆಗಾಗಿ ಅಲ್ಲಿಗೆ ಬರುತ್ತಿದ್ದರು.

ಹೀಗೆ ಫಲದಾಯಕವಾದ ಆ ದೇವದುರ್ಗದಲ್ಲಿ 'ಗುರಪ್ಪ' ನೆಂಬ ಒಬ್ಬ ವಿಶ್ವಕರ್ಮ ಬ್ರಾಹ್ಮಣನಿದ್ದನು. ಆತನು ಆಚಾರಶೀಲನೂ, ಪರೋಪ

ಕಾರ ಗುಣವುಳ್ಳವನೂ, ಆಚಾರಹಿತನೂ ಆಗಿ ಮೆರೆಯುತ್ತಿದ್ದನಲ್ಲದೆ, ತನ್ನ ಉದ್ಯೋಗವಾದ ಕಮ್ಮಾರಕೀ ಕೆಲಸವನ್ನು ಮಾಡಿಕೊಂಡು ಕಾಲ ಹರಣ ಮಾಡುತ್ತಿದ್ದನು. ಆತನಿಗೆ ಶಂಕರಮ್ಮ ಎಂಬ ಹೆಂಡತಿ ಇದ್ದಳು. ಆ ಸಾಧ್ವಿಯು ನಿರ್ಮಲ ಹೃದಯದವಳೂ, ಗುರು-ಹಿರಿಯರಲ್ಲಿ ಭಕ್ತಿಯುಳ್ಳವಳೂ, ಪತಿಯಾಜ್ಞಾ ತತ್ಪರಳೂ ಆಗಿದ್ದಳು. ಆ ದಂಪತಿಗಳು ಪುತ್ರಸಂಪತ್ತಿನ ಹೊರತು ಎಲ್ಲ ಸಂಪತ್ತಿನಿಂದಲೂ ಕೂಡಿದ್ದರು. ಗುರುವಪ್ಪನು ತನ್ನ ಹೊಟ್ಟೆಯಲ್ಲಿ ಸಂತಾನವಿಲ್ಲದ್ದರಿಂದ ಯಾವಾಗಲೂ ಚಿಂತಾಗ್ನಿಯಿಂದ ಬೇಯುತ್ತಿದ್ದನಲ್ಲದೆ ಮೌನಗುರುವನ್ನು ಕುರಿತು:—

ಶಂಕರಾ, ನೀನು ಮೌನೇಶನಾಗಿ ಅವತರಿಸಿ ಭಕ್ತಜನರ ಇಷ್ಟಾರ್ಥಗಳನ್ನು ಕೊಡುತ್ತಿರುವೆಯೆಂದು ಕೇಳಿರುತ್ತೇನೆ. ಅಂಥ ಘನಮಹಿಮನಾದ ನೀನು ಈ ಸೇವಕನ ಮೇಲೆ ಏಕೆ ನಿರ್ದಯನಾಗಿರುವೆ? ನನಗೆ ಪುತ್ರ ಸಂತಾನವನ್ನು ಕೊಟ್ಟು ಜಗದ್ವ್ಯಾಪಕನೂ, ಕರುಣಾಸಾಗರನೂ ಎಂಬ ನಿನ್ನ ಬಿರುದನ್ನು ಮೆರೆಯಿಸು, ಎಂದು ಪ್ರಾರ್ಥಿಸುತ್ತಿದ್ದನು.

ಶಂಕರಮ್ಮನಂತೂ ಹಗಲಿರಳು ಮಕ್ಕಳು ಮಕ್ಕಳೆಂದು ಹಂಬಲಿಸುತ್ತ ಮನಸ್ಸಿನಲ್ಲಿ ಮೌನಗುರುವನ್ನು ಧ್ಯಾನಿಸುತ್ತಿದ್ದಳಲ್ಲದೆ, ನಿತ್ಯದಲ್ಲಿಯೂ ನಿರಂಜನೇಶ್ವರೀ ನದಿಗೆ ಹೋಗಿ ಸಂತಾನದ ಸಲುವಾಗಿ ಗಂಗಾ ಪೂಜೆಯನ್ನು ಮಾಡುತ್ತಿದ್ದಳು

ಈ ರೀತಿಯಾಗಿ ವ್ರತವನ್ನಾಚರಿಸುತ್ತಿರುವ ಶಂಕರಮ್ಮನ ಸ್ವಪ್ನದಲ್ಲಿ ಒಂದು ದಿನ ಮೌನೇಶ್ವರನು ಪ್ರಕಟನಾಗಿ:—'ಅಮ್ಮಾ. ನೀನು ಮಾಡುವ ಗಂಗಾಪೂಜೆಯಿಂದ ನಿರಂಜನೇಶ್ವರಿಯೂ, ನಾನೂ ಸಂತುಷ್ಟರಾಗಿರುವೆವಲ್ಲದೆ ನಿನಗೆ ಸಂತಾನ ಕೊಡುವ ಉದ್ದೇಶದಿಂದ ಇಲ್ಲಿಗೆ ಬಂದಿರುವೆನು. ಇಗೋ, ಈ ಫಲಗಳನ್ನು ತೆಗೆದುಕೋ. ಇವೆರಡರಲ್ಲಿ ಒಂದನ್ನು ನಿನ್ನ ಪತಿಯೂ, ಮತ್ತೊಂದನ್ನು ನೀನೂ ಸೇವಿಸಿರಿ. ಅಂದರೆ ನಿಮ್ಮ ಹೊಟ್ಟೆಯಲ್ಲಿ ಇಬ್ಬರು ಗಂಡು ಮಕ್ಕಳು ಹುಟ್ಟುವರು. ಅವರಲ್ಲಿ ಮೊದಲು ಹುಟ್ಟಿದ ಮಗನನ್ನು ನಮ್ಮ ಹೆಸರಿನಿಂದ ನಿರಂಜನ ನದಿಯಲ್ಲಿ ಬಿಡಬೇಕು. ಇದನ್ನು ಮಾತ್ರ ಮರೆಯಬೇಡಿರಿ,' ಎಂದು ಹೇಳಿ ಅದೃಶ್ಯನಾದನು. ಬೆಳಗಾದ ಕೂಡಲೆ ಶಂಕರಮ್ಮನು ಎದ್ದು ನೋಡುತ್ತಾಳೆ, ತನ್ನ ಕೈಯಲ್ಲಿ

ಸದ್ಗುರುವು ಕೊಟ್ಟ ಎರಡು ಫಲಗಳು ಇದ್ದವು. ಅವುಗಳನ್ನು ತನ್ನ ಗಂಡನಿಗೆ ತೋರಿಸಿ ಸ್ವಪ್ನದಲ್ಲಿ ನಡೆದ ಸಂಗತಿಯನ್ನು ಹೇಳಿದಳು.

ಅದನ್ನು ಕೇಳಿ ಗುರುವಪ್ಪನು ಮೌನೇಶನ ಮಹಿಮೆಯನ್ನು ಕೊಂಡಾಡುತ್ತ ತನ್ನ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಒಂದು ಫಲವನ್ನು ತಾನು ಸೇವಿಸಿ, ಮತ್ತೊಂದನ್ನು ಹೆಂಡತಿಗೆ ಸೇವಿಸಲಿಕ್ಕೆ ಹೇಳಿದನು. ಶಂಕಮ್ಮನು ಆ ಫಲವನ್ನು ಭಕ್ಷಿಸಿ, ಎಂದಿನಂತೆ ನಿರಂಜನೇಶ್ವರೀ ಪೂಜೆಯನ್ನು ಮಾಡುತ್ತಲೇ ಇದ್ದಳು.

ಕೆಲವು ದಿವಸಗಳ ಮೇಲೆ ಶಂಕರಮ್ಮನಿಗೆ ಮೌನಗುರುವಿನ ಅನುಗ್ರಹದಿಂದ ಗರ್ಭಚಿಹ್ನಗಳು ತೋರಿ ನವಮಾಸವು ಪೂರ್ಣವಾಗಿ ಅವಳಿಜವಳಿ ಮಕ್ಕಳನ್ನು ಪಡೆದಳು. ಗುರುವಾಕ್ಯದಂತೆ ಗುರುವಪ್ಪನು ಹಿರಿಯ ಕೂಸನ್ನು ನದಿಯಲ್ಲಿ ಬಿಟ್ಟು, ಕಿರಿಯ ಕೂಸನ್ನು ಸಂರಕ್ಷಿಸುತ್ತ ಸುಖವಾಗಿದ್ದನು. ನಿರಂಜನ ನದಿಯಲ್ಲಿ ಬಿಟ್ಟ ಕುವರನು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿ ಹೊಂದುತ್ತ ಹನ್ನೆರಡು ವರುಷಗಳವರೆಗೂ ಮೌನಗುರುವಿನ ಅನುಗ್ರಹದಿಂದ ಅಲ್ಲಿಯೇ ಬೆಳೆದನು.

ಇತ್ತ ಕಲ್ಯಾಣ ನಾಡೊಳಗೆ ಸಾವಳಿಗಿ ಎಂಬ ಗ್ರಾಮ ಒಂದಿತ್ತು. ಅಲ್ಲಿ ಶಿವಲಿಂಗಪ್ಪನೆಂಬ ಶಿವಶರಣನಿದ್ದನು. ಆತನು ಯಾವಾಗಲೂ ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ ಮಂತ್ರ, ಭಸ್ಮ, ರುದ್ರಾಕ್ಷಗಳೆಂಬ ಅಷ್ಟಾವರಣಗಳಲ್ಲಿ ನಿಷ್ಠೆಯುಳ್ಳವನಾಗಿ, ಉದಯ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ತಪ್ಪದೆ ಭಕ್ತಿಪೂರ್ವಕವಾಗಿ ಲಿಂಗಪೂಜೆಯನ್ನು ಮಾಡುತ್ತಿದ್ದನು; ಮತ್ತು ಆ ಮಹಾತ್ಮನು ಪಂಚೇಂದ್ರಿಯಗಳ ಸುಖವನ್ನು ಪರಮಾತ್ಮಸ್ವರೂಪವಾದ ಶಿವಲಿಂಗಕ್ಕೊಪ್ಪಿಸಿ, ಆ ಶಿವಲಿಂಗವನ್ನೇ ಧ್ಯಾನಿಸುತ್ತಿದ್ದನಲ್ಲದೆ, ಲಿಂಗವೇ ಅಂಗವು-ಅಂಗವೇ ಲಿಂಗವು, ಎಂಬ ಇಂಗಿತವನ್ನು ತಿಳಿದು ಲಿಂಗಾಂಗಳನ್ನು ಸಮರಸಗೊಳಿಸುವ ಸಾಮರ್ಥ್ಯವುಳ್ಳವನಾಗಿದ್ದನು.

ಈ ರೀತಿಯಾಗಿ ಶಿವಲಿಂಗಪ್ಪನು ತನ್ನ ಧರ್ಮವಾದ ವೀರಶೈವವ್ರತವನ್ನು ಲೋಪವಿಲ್ಲದೆ ನಡೆಸುತ್ತ ಆಶಾರಹಿತನಾಗಿರಲು, ಆತನ ದೃಢಭಕ್ತಿಯನ್ನು ನೋಡಿ, ಪರಮೇಶ್ವರನು ಪಂಚಮುಖಗಳಿಂದಲೂ, ದಶಭುಜಗಳಿಂದಲೂ, ವಿಷಗೊರಳಿನಿಂದಲೂ, ಸರ್ಪಾಭರಣಗಳಿಂದಲೂ, ವೃಷಭ

ವಾಹನದಿಂದಲೂ, ಹಣೆಗಣ್ಣಿನಿಂದಲೂ ಕೂಡಿ ಆತನ ಇಷ್ಟಲಿಂಗದಲ್ಲಿ ಪ್ರಕಟನಾಗಿ:— ಭಕ್ತನೇ, ನಿನ್ನ ನಿಶ್ಚಲ ಪೂಜೆಯಿಂದ ಸಂತುಷ್ಟನಾಗಿರುವೆನಲ್ಲದೆ ನಿನ್ನನ್ನು ಕೈಲಾಸಕ್ಕೆ ಕರೆದೊಯ್ದು ಸಾಯುಜ್ಯ ಪದವಿಯನ್ನು ಕೊಡಬೇಕೆಂದು ಬಂದಿರುವೆನು. ಬೇಗನೆ ಸಿದ್ಧನಾಗು, ಎಂದು ನುಡಿದನು.

ಶಿವಲಿಂಗಪ್ಪನು:– ಜಗನ್ನಾಥಾ, ವೇದಾಗಮಗಳಿಗೆ ಅಗೋಚರನಾದ ನೀನು ಪ್ರಸನ್ನನಾಗಿ ಕೈಲಾಸಕ್ಕೆ ಕರೆದರೆ ಒಲ್ಲೆನೆಂದು ಹೇಳುವದಕ್ಕಾದೀತೆ? ಆದರೂ ತಮ್ಮ ಚರಣ ಸನ್ನಿಧಿಯಲ್ಲಿ ನನ್ನ ವಿಜ್ಞಾಪನೆಯೊಂದುಂಟು; ಅದೇನಂದರೆ, ನನಗೆ ನೂರು ಜನ ಸೇವಕರಿರುವರು. ಅವರಲ್ಲಿ ಕೆಲವರು ನಿರ್ಮಲೋದಕವನ್ನು ತರುವರು. ಕೆಲವರು ಈ ಸ್ಥಳದಲ್ಲಿಯ ಕಸವನ್ನು ತೆಗೆಯುವರು. ಹೀಗಿರುವ ನಮ್ಮ ಸೇವಕರೆಲ್ಲರಿಗೂ ನಿಜ ಜ್ಞಾನವಿದೆ ಎಂದು ಹೇಳಲಿಕಾಗುವದಿಲ್ಲ. ಆದರೂ ದಯಾಘನನಾದ ನೀನು ನನ್ನೊಬ್ಬನನ್ನೇ ಕೈಲಾಸಕ್ಕೆ ಕರೆದುಕೊಂಡು ಹೋಗದೆ, ನನ್ನ ಎಲ್ಲ ಸೇವಕರನ್ನು ಕೂಡಿ ಕರೆದೊಯ್ದು ಸ್ಥಿರ ಪದವಿಯನ್ನು ಕರುಣಿಸು, ಎಂದು ಬೇಡಿಕೊಂಡನು.

ಶಂಕರನು: — ಶಿವಲಿಂಗಪ್ಪಾ, ನಿನ್ನ ಪರೋಪಕಾರ ಗುಣವು ಬಹಳೇ ಶ್ಲಾಘನೀಯವಾದದ್ದು. ಎಂದು ದೇವಲೋಕದಿಂದ ಹೂವಿನ ವಿಮಾನವನ್ನು ತರಿಸಿ, ಅದರಲ್ಲಿ ಶಿವಲಿಂಗಪ್ಪನನ್ನೂ ಆತನ ಸೇವಕರೆಲ್ಲರನ್ನೂ ಕೂಡ್ರಿಸಿ ಶಿವಶರಣರು ಉಘೆ ಉಘೆ ಎನ್ನುತ್ತಿರಲು, ದೇವತೆಗಳು ಹೂವಿನ ಮಳೆಯನ್ನು ಸುರಿಸುತ್ತಿರಲು ಮಹೋತ್ಸವದಿಂದ ಕೈಲಾಸಕ್ಕೆ ಕರೆದೊಯ್ಯುತ್ತಿದ್ದನು.

ಇತ್ತ ಮೌನೇಶ್ವರಾನುಗ್ರಹದಿಂದ ನಿರಂಜನೇಶ್ವರೀ ನದಿಯಲ್ಲಿ ಬೆಳೆಯುತ್ತಿದ್ದ ಗಂಗಪ್ಪನು, ಶಿವಲಿಂಗಪ್ಪನು ಕೈಲಾಸಕ್ಕೆ ಹೋಗುವ ಸಂಭ್ರಮವನ್ನು ನೋಡಿ ತನ್ನ ಗುರುವಾದ ಮೌನೇಶನನ್ನು ಧ್ಯಾನಿಸಿದನು. ಆ ಕ್ಷಣವೇ ಮೌನೇಶನು ಗಂಗಪ್ಪನ ಎದುರಿನಲ್ಲಿ ಬಂದು ನಿಲ್ಲಲು, ಗಂಗಪ್ಪನು ಸದ್ಗುರುವಿನ ಚರಣಾರವಿಂದಗಳಿಗೆರಗಿ:— ಗುರುನಾಥಾ, ಶಿವಲಿಂಗಪ್ಪನು ಎಂಥ ಮಹಾತ್ಮನು? ಕೈಲಾಸಕ್ಕೆ ತಾನೊಬ್ಬನೇ ತೆರಳದೆ, ತನ್ನ ಪರಿವಾರವನ್ನೇ ಕರೆದೊಯ್ಯುವನು; ಆ ಪುಣ್ಯಶಾಲಿಯ ಸೇವಕ ಸಮೂಹದಲ್ಲಿ ನಾನೂ

ಸೇರಿದ್ದರೆ ನನ್ನನ್ನೂ ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಿದ್ದನು. ನಾನಾದರೂ ಕೈಲಾಸದ ವೈಭವವನ್ನು ನೋಡಿ ಧನ್ಯನಾಗುತ್ತಿದ್ದೆನು.

ಈ ರೀತಿಯಾಗಿ ಮಾತಾಡುತ್ತಿರುವ ಗಂಗಪ್ಪನನ್ನು ನೋಡಿ ಮೌನೇಶನು ಈತನ ಮನಸ್ಸು ಚಂಚಲವಾಯಿತೆಂದು ತಿಳಿದು:—ಗಂಗಪ್ಪಾ, ನಿಜ ಭಕ್ತರ ಮನಸ್ಸು ಎಂದೂ ಚಂಚಲವಾಗುವದಿಲ್ಲ; ಯಾಕಂದರೆ ಅವರಿಗೆ ಕೈಲಾಸವೂ ಅಷ್ಟೇ, ಭೂಲೋಕವೂ ಅಷ್ಟೇ ಆಗಿರುವವು. ಸುಖ-ದುಃಖಗಳೂ, ಸಂಪದ್ವಿಪತ್ತುಗಳೂ ಆ ಮಹನೀಯರಿಗೆ ಸಮಾನವಾಗಿಯೇ ಕಾಣುವವು. ಅಂಥ ಸದ್ಭಕ್ತರು ಎಲ್ಲಿರುವರೋ ಅಲ್ಲಿಯೇ ಕೈಲಾಸವಿರುವದು.

ಗಂಗಪ್ಪ:—ಗುರುವರ್ಯಾ, ಅಂಥ ದೃಢಭಾವನೆಯು ಒಮ್ಮೆಲೆ ನನಗೆ ಹೇಗೆ ಬರಬೇಕು?

ಮೌನೇಶ:—ಹಾಗಾದರೆ ಕೈಲಾಸಕ್ಕೆ ಹೋಗುವ ಭಕ್ತಜನರು ಮತ್ತೊಬ್ಬರಿಗೆ ಕಾಣಿಸುವದಿಲ್ಲ, ನಿನಗೇಕೆ ಕಾಣಿಸಿಕೊಂಡರು?

ಗಂಗಪ್ಪ—ನಿನ್ನ ಚರಣದಾಶೀರ್ವಾದ ಬಲದಿಂದ.

ಮೌನೇಶ—ಅಂದಮೇಲೆ ನನ್ನಲ್ಲಿ ನಂಬಿಗೆ ಇಲ್ಲದೆ ಶಿವಲಿಂಗಪ್ಪನನ್ನು ನೋಡಿ, ಚಿತ್ತ ಚಂಚಲವೇಕಾಯಿತು?

ಗಂಗಪ್ಪ—ಮಹಾಸ್ವಾಮಿ, ಕೈಲಾಸಕ್ಕೆ ಹೋಗುವವರು ಕಾಣಿಸುವ ಹಾಗೆ ಅನುಗ್ರಹಿಸುವ ಸಾಮರ್ಥ್ಯವು ನಿನ್ನಲ್ಲಿದ್ದರೂ, ಕರೆದೊಯ್ಯುವ ಸಾಮರ್ಥ್ಯವು ಇರಲಿಕ್ಕಿಲ್ಲೆಂದು ಸಂಶಯಪಟ್ಟದ್ದರಿಂದ ಹಾಗಾಯಿತು.

ಮೌನೇಶನು—ಆಗಲಿ. ನಿನ್ನ ಅಭಿಪ್ರಾಯವಾದರೂ ಏನಿದೆ?

ಗಂಗಪ್ಪ—ಕೈಲಾಸವನ್ನು ನೋಡಬೇಕೆಂಬ ಅಪೇಕ್ಷೆಯು ನನಗೆ ಬಹಳೇ ಉಂಟಾಗಿದೆ.

ಮೌನೇಶ—ಗಂಗಪ್ಪಾ, ಶಿವಲೋಕವನ್ನು ನೋಡಲಿಕ್ಕೆ ಬಹು ಧೈರ್ಯ ಬೇಕು. ಆ ಮಹಾರುದ್ರನ ಹತ್ತರ ಕೊರಳೊಳಗೆ ರುಂಡಮಾಲೆಗಳನ್ನು ಧರಿಸಿರುವ ಭಯಂಕರ ರೂಪಿನ ರಾಕ್ಷಸರು ಯಾವಾಗಲೂ ಗರ್ಜಿಸುತ್ತಲೇ ಇರುವರು. ಅವರ ಗರ್ಜನೆ ಕೇಳಿದ ಕೂಡಲೆ ಮನುಷ್ಯರು ಗವಗುಟ್ಟಿ ನಡುಗಿ ಪ್ರಾಣವನ್ನೇ ಬಿಡುವರು. ಅಲ್ಲಿಯ ಸ್ಥಿತಿಯಂತೂ ಹೀಗಿದೆ. ನಿನಗೆ ಧೈರ್ಯವಿದ್ದರೆ ಹೇಳು, ಈಗಲೆ ತೋರಿಸುವೆನು.

ಗಂಗಪ್ಪ—ಅಂಥ ಧೈರ್ಯವಾವರೂ ನಿನ್ನ ಅನುಗ್ರಹದಿಂದಲೇ ಬರ ಬೇಕು. ಇಲ್ಲದಿದ್ದರೆ ನನ್ನಿಂದ ಹ್ಯಾಗಾದೀತು?

ಮೌನೇಶ—ಒಳ್ಳೇದು ಗಂಗಪ್ಪಾ, ಶಿವಲಿಂಗಪ್ಪನು ತೆರಳಿರುವ ಶಿವ ಲೋಕವನ್ನು ನೋಡುವ ಇಚ್ಛೆಯು ನಿನಗಿದ್ದರೆ ಕಣ್ಣುಗಳನ್ನು ಮುಚ್ಚಿ ಕೊಂಡು ಇಲ್ಲಿ ಕೂಡ್ರು, ತೋರಿಸುತ್ತೇನೆ

ಹೀಗೆ ಹೇಳುವ ಮೌನಗುರುವಿನ ಅಪ್ಪಣೆಯಂತೆ ಗಂಗಪ್ಪನು ಕಣ್ಣು ಮುಚ್ಚಿಕೊಂಡು ಅಲ್ಲಿ ಕೂಡ್ರಲು, ಮೌನೇಶನು ಅವನ ಹುಬ್ಬುಗಳಿಗೆ ಅಂಗೈಯನ್ನು ಆನಿಸಿ—ಗಂಗಪ್ಪಾ, ಈಗ ಮಾತ್ರ ಕಣ್ಣುಗಳನ್ನು ತೆರೆದು ಶಿವಲೋಕವನ್ನು ನೋಡು, ಎಂದು ಹೇಳಿದನು.

ಗಂಗಪ್ಪನು ಗುರ್ವಾಜ್ಞೆಯಂತೆ ಕಣ್ದೆರೆದು ನೋಡಲು, ಕೈಲಾಸವು ಕಾಣಿಸಿತು. ಅದರ ವೈಭವವನ್ನೇನು ಹೇಳಲಿ! ಎಲ್ಲಿ ನೋಡಿದರೂ ಬೆಳ್ಳಿಯ ಶಿಲೆಗಳೂ, ಎಲ್ಲಿ ನೋಡಿದರೂ ಕಲ್ಪವೃಕ್ಷಗಳೂ, ಎಲ್ಲಿ ನೋಡಿದರೂ ಸಂಜೀ ವಿನಿ ಬಳ್ಳಿಗಳೂ, ಎಲ್ಲಿ ನೋಡಿದರೂ ನವರತ್ನದ ಹರಳುಗಳೂ ಕಾಣಿಸಿದವು. ಆ ಪರ್ವತದ ಒಳಭಾಗದಲ್ಲಿ ವಿದ್ಯಾಧರರೂ, ಖೇಚರರೂ, ಗುಹ್ಯಕರೂ, ಸಿದ್ಧ-ಸಾಧ್ಯರೂ, ಜೀವನ್ಮುಕ್ತರೂ, ಜಿತೇಂದ್ರಿಯರೂ, ಅಷ್ಟಾಂಗಯೋಗ ನಿರತರಾದ ಮುನಿವರರೂ, ನಿರ್ಮಲ ಹೃದಯರೂ, ಮಹಾ ಯೋಗಿಗಳೂ ಇದ್ದರು. ಅವರನ್ನು ನೋಡುತ್ತ ಗಂಗಪ್ಪನು ಮುಂದಕ್ಕೆ ಹೋಗಲು, ಶಿವ ಸಭೆಯು ಕಾಣಿಸಿತು. ಆ ಮಹಾ ಸಭೆಯಲ್ಲಿ ಸಾವಿರ ಬ್ರಹ್ಮರೂ, ಸಾವಿರ ವಿಷ್ಣುಗಳೂ, ಸಾವಿರ ರುದ್ರರೂ, ಸಾವಿರ ಇಂದ್ರರೂ, ಕೋಟಿ ಸೂರ್ಯರೂ ಮೂವತ್ತುಮೂರು ಕೋಟಿ ದೇವತೆಗಳೂ ಕೈಮುಗಿದುಕೊಂಡು ಭಯ-ಭಕ್ತಿಯಿಂದ ಶಿವಸನ್ನಿಧಿಯಲ್ಲಿ ನಿಂತಿದ್ದರು; ಮತ್ತು ಯಕ್ಷರು, ಭಯಂಕರ ರೂಪಿನ ರಾಕ್ಷಸರು, ಆಯುಧಪಾಣಿಗಳಾಗಿ ನಿಂತಿರುವ ಕರಾಳ ರುದ್ರರು, ಚಂಡ ಭೈರವರು, ಗಂಡುಗಲಿಗಳಾದ ಷಣ್ಮುಖ-ವೀರಭದ್ರರು, ಎಲ್ಲ ಗಣಕ್ಕೆ ಅಧಿಪತಿಯಾದ ವಿಘ್ನೇಶ್ವರನು ಕೈಜೋಡಿಸಿ ಪರಮಾತ್ಮನನ್ನು ಧ್ಯಾನಿಸು ತ್ತಿದ್ದರು. ಇದೆಲ್ಲವನ್ನು ನೋಡುತ್ತ ಗಂಗಪ್ಪನು ಬೆರಗಾಗಿ ನಾನೇ ಧನ್ಯ ನೆಂದು ಅನ್ನುತ್ತ ಮುಂದಕ್ಕೆ ಬರಲು,

ಆ ಸಭಾಮಧ್ಯದಲ್ಲಿ ನವರತ್ನಖಚಿತವಾದ ಸಿಂಹಾಸನದ ಮೇಲೆ ಪಂಚಮುಖಗಳಿಂದಲೂ, ದಶಭುಜಗಳಿಂದಲೂ, ತ್ರಿಶೂಲ-ಬ್ರಹ್ಮಕಪಾಲಗಳನ್ನು ಹಿಡಿದ ಕೈಗಳಿಂದಲೂ, ರುಂಡಮಾಲೆಗಳಿಂದಲೂ, ಚಂದ್ರ-ಸೂರ್ಯ ಅಗ್ನಿಗಳೆಂಬ ಮೂರು ಕಣ್ಣುಗಳಿಂದಲೂ, ಗಂಗಾ-ಪಾರ್ವತಿಯರುಗಳಿಂದಲೂ ಶೋಭಿಸುತ್ತಿರುವ ಶ್ರೀ ಪರಮೇಶ್ವರನನ್ನು ಕಂಡನು. ಆಗ ಗಂಗಪ್ಪನಿಗಾದ ಆನಂದವನ್ನು ಹೇಳಲಾಸಲ್ಲ! ಆತನು ಪರಾತ್ಪರನಾದ ಶಂಭುವಿನ ಚರಣಾರವಿಂದಗಳಿಗೆ ಅಭಿವಂದಿಸಿ, ಎದ್ದು ನಿಂತು ಕೈಜೋಡಿಸಿ—ದೇವಾ! ನಿನ್ನ ಚರಣದರ್ಶನದಿಂದ ಧನ್ಯನಾಗಿರುವೆನು. ತಾವು ತಮ್ಮ ಚರಣಸನ್ನಿಧಿಯಲ್ಲಿ ಈ ಸೇವಕನಿಗೆ ಯಾವುದಾದರೂ ಒಂದು ಸೇವೆಯನ್ನು ಕೊಟ್ಟು ಉದ್ಧರಿಸಬೇಕು, ಎಂದು ಬೇಡಿಕೊಂಡನು

ಆ ಮಾತಿಗೆ ಶಂಕರನು—ಭಕ್ತನೇ, ನಿನಗೆ ಯಾವ ಸೇವೆಯನ್ನು ಕೊಡಬೇಕಾದರೂ ನಿಮ್ಮ ದೇವನಾದ ಮೌನೇಶನೇ ಹೊರ್ತು ನಮ್ಮಿಂದ ಸಾಧ್ಯವಿಲ್ಲ; ಆ ಮಹಾಗುರು ಮಹಿಮನು ನಮ್ಮನ್ನು ತೋರಿಸಲಿಕ್ಕಾಗಿಯೇ ನಿನ್ನನ್ನು ಇಲ್ಲಿಗೆ ಕರೆತಂದಿರುತ್ತಾನೆ. ಆತನು ಸಾಮಾನ್ಯನೆಂದು ತಿಳಿಯಬೇಡ. ಹದಿನಾಲ್ಕು ಲೋಕಗಳು ಆತನ ಹಸ್ತದಲ್ಲಿ ಅಡಗಿರುವವು. ಆ ಸದ್ಗುರುವಿನ ಆಜ್ಞೆಯನ್ನು ಮೀರಿ ಯಾರೂ ವರ್ತಿಸುವ ಹಾಗಿಲ್ಲ. ನನಗೂ ಆತನಿಗೂ ಭೇದವನ್ನೆಣಿಸಬೇಡ. ಆತನ ಅಪ್ಪಣೆಯಂತೆ ನಡೆದರೆ ನೀನು ಎಲ್ಲಿದ್ದರೂ ನನ್ನ ಹತ್ತಿರವೇ ಇದ್ದಂತಾಗುವದು.

ಹೀಗೆ ಹೇಳುವ ಪರಶಿವನ ವಾಕ್ಯವನ್ನು ಕೇಳಿ, ಗಂಗಪ್ಪನು—ಅಹಾ! ನಾನು ಮೌನಗುರುವಿನ ಸಾಮರ್ಥ್ಯವನ್ನು ಅರಿಯದಾದೆನು, ಎಂದು ಪಶ್ಚಾತ್ತಾಪ ಪಡುತ್ತಿರಲು, ಅಷ್ಟರಲ್ಲಿ ಮೌನೇಶನು ಕೈಲಾಸದಲ್ಲಿಯೇ ಗಂಗಪ್ಪನ ಎದುರಾಗಿ ಬಂದು ನಿಂತು—ಗಂಗಪ್ಪಾ, ಈ ಕೈಲಾಸದಲ್ಲಿ ಶಿವಸನ್ನಿಧಿಯಲ್ಲಿರುವೆಯೋ? ಭೂಲೋಕದಲ್ಲಿ ನನ್ನ ಹತ್ತಿರ ಬರುವೆಯೋ? ಬೇಗನೆ ಹೇಳು. ನಿನ್ನ ಅಪೇಕ್ಷೆಯಂತೆಯೇ ಮಾಡುವೆನು, ಎಂದು ಅಂದನು.

ಆಗ ಗಂಗಪ್ಪನು ಪರಮಾನಂದದಿಂದ—ಗುರುವರ್ಯ; ನಿನ್ನ ಅಗಾಧವಾದ ಮಹಿಮೆಯನ್ನು ಅರಿಯದೆ ನನ್ನ ಮನಸ್ಸು ಚಂಚಲವಾಗಿತ್ತು; ಆದರೂ ನಿನ್ನ ನಿಜಸ್ವರೂಪವನ್ನು ಕಂಡು ಧನ್ಯನಾದೆನು. ಇನ್ನು

ಮಾತ್ರ ನಿನ್ನ ಚರಣಸನ್ನಿಧಿಯಲ್ಲಿರುವದೇ. ನನಗೆ ಸ್ಥಿರಸುಖವಾಗಿರುವದು, ಎಂದನು ಆಗ ಮೌನೇಶನು ತನ್ನ ಹಸ್ತವನ್ನು ತೆಗೆದುಕೊಳ್ಳಲು, ಗಂಗಪ್ಪನು ನೋಡುತ್ತಿದ್ದ ಕೈಲಾಸದ ವೈಭವವು ಒಮ್ಮೆಲೆ ಇಲ್ಲದಂತಾಗಿ ಆತನ ಎದುರಿಗೆ ಮೌನಗುರುವು ಮಾತ್ರ ನಿಂತಿದ್ದನು.

ಆ ಮಹಾಮಹಿಮನನ್ನು ನೋಡಿ ಗಂಗಪ್ಪನು ಆತನ ಚರಣಾರವಿಂದಗಳಿಗೆರಗಿ—ಸದ್ಗುರೋ, ನೀನು ಅವ್ಯಯನೂ, ಅನಂತನೂ, ಅಪಾರಮಹಿಮನೂ, ಅನೇಕ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸಿದ ಪರಮಾತ್ಮನೂ ಆಗಿರುವೆ. ನಿನ್ನ ಮಾಯಾಮಹಿಮೆಯನ್ನು ಅರಿಯದೆ ಶಿವಲಿಂಗಪ್ಪನನ್ನು ನೋಡಿ ಮನಸ್ಸು ಚಂಚಲವಾದ ಅಪರಾಧವನ್ನು ಕ್ಷಮಿಸು, ಎಂದು ದೈನ್ಯದಿಂದ ಪ್ರಾರ್ಥಿಸಿದನು.

ಮೌನೇಶನು ಪರಮ ದಯೆಯಿಂದ ಆತನ ತಲೆಯ ಮೇಲೆ ತನ್ನ ವರದ ಹಸ್ತವನ್ನಿಡಲು, ಗಂಗಪ್ಪನಿಗೆ ಅಗ್ನಿನೇತ್ರವು ಉಂಟಾಯಿತು. ಆಗಂತೂ ಗಂಗಪ್ಪನ ಆನಂದಕ್ಕೆ ನೆಲೆಯಿಲ್ಲದಂತಾಗಿ ಗುರುಚರಣಗಳಿಗೆ ಪುನಃ ನಮಸ್ಕರಿಸಿ—ಮೌನಪರಮಾತ್ಮಾ, ನೀನು ಭಕ್ತೋದ್ಧಾರಕನೂ, ಅನಾಥ ರಕ್ಷಕನೂ, ಕೃಪಾಸಮುದ್ರನೂ, ಎಂದು ವೇದಗಳು ಇದೇ ಕಾರಣದಿಂದಲೇ ಹೇಳುವವು. ಗುರುವರ್ಯಾ, ಚರಣ ಸನ್ನಿಧಿಯಲ್ಲಿ ನನ್ನ ಇನ್ನೊಂದು ವಿಜ್ಞಾಪನೆ ಇರುವದು. ಅದೇನೆಂದರೆ, ನೀನು ನಿರಂಜನೇಶ್ವರಿ ನದಿಯಲ್ಲಿಯೇ ನನ್ನನ್ನು ರಕ್ಷಿಸಿದೆ; ಆದರೆ ನಾನು ಪೂರ್ವದಲ್ಲಿ ಯಾರು? ಆ ನದಿಯಲ್ಲಿ ಬೆಳೆಯಲಿಕ್ಕೆ ಕಾರಣವೇನು? ನನ್ನ ತಂದೆ ತಾಯಿಗಳಿದ್ದರೆ ಅವರ ಹೆಸರೇನು? ಈ ಎಲ್ಲ ಸಂಗತಿಯನ್ನು ಹೇಳಿ, ಕೃತಾರ್ಥನನ್ನು ಮಾಡು, ಎಂದು ಬೇಡಿಕೊಂಡನು.

ಆ ಮಾತಿಗೆ ಮೌನೇಶನು—ಗಂಗಪ್ಪ, ನಿನ್ನ ತಂದೆ-ತಾಯಿಗಳು ಗುರುವಪ್ಪ-ಶಂಕರಮ್ಮನೆಂದಿರುವರು. ಅವರ ವಾಸಸ್ಥಲವು ದೇವದುರ್ಗವು. ಅವರಿಗೆ ಬಹುದಿವಸ ಸಂತಾನವಾಗದ್ದರಿಂದ ನಿರಂಜನೇಶ್ವರಿಯನ್ನು ಪೂಜಿಸುತ್ತ ಯಾವಾಗಲೂ ನನ್ನನ್ನು ಧ್ಯಾನಿಸುತ್ತಿರಲು, ಅವರಿಗೆ ನಾನು ಸ್ವಪ್ನದಲ್ಲಿ ಪ್ರಸನ್ನನಾಗಿ—ನಿಮ್ಮ ಗರ್ಭದಲ್ಲಿ ಇಬ್ಬರು ಮಕ್ಕಳು ಜನಿಸುವರು. ಇವರಲ್ಲಿ ಮೊದಲು ಹುಟ್ಟಿದ ಮಗನನ್ನು ನಮ್ಮ ಹೆಸರಿನಿಂದ ನಿರಂಜನೇಶ್ವರಿ

ನದಿಯಲ್ಲಿ ಬಿಡಿರೆಂದು ಹೇಳಿದ್ದೆನು. ಮುಂದೆ ಅವರಿಗೆ ಸಂತಾನವಾದ ನಂತರ ನಿನ್ನನ್ನು ಆ ನದಿಯಲ್ಲಿ ತಂದು ಬಿಟ್ಟರು. ಆ ಗಂಗೆಯಲ್ಲಿಯೇ ನಿನ್ನನ್ನು ರಕ್ಷಿಸಿದೆನಾದ್ದರಿಂದ ನಿನಗೆ ಗಂಗಪ್ಪನೆಂದು ಹೆಸರಿಟ್ಟಿರುವರು. ಇದೇ ನಿನ್ನ ಪೂರ್ವವೃತ್ತಾಂತವು. ಗಂಗಪ್ಪಯ್ಯಾ, ಇದುವರೆಗೂ ನಿನ್ನನ್ನು ರಕ್ಷಿಸಿರುವೆನಾದ್ದರಿಂದ ನಿನ್ನ ಚಿತ್ತಚಂಚಲಕಾಲದಲ್ಲಿಯೂ ಸಹ ನಿನ್ನನ್ನು ಕೈ ಬಿಡದೆ ಈ ಹಸ್ತದಿಂದ ಕೈಲಾಸವನ್ನು ತೋರಿಸುವ ಕಾರಣವುಂಟಾಯಿತು. ಭಕ್ತಾಗ್ರಣೀ, ಈ ಹಸ್ತದಿಂದಲೇ ತ್ರಿಪುರಗಳು ನಿರ್ಮಿಸಲ್ಪಟ್ಟವು; ಮತ್ತು ಕೈಲಾಸ, ವೈಕುಂಠ, ಸತ್ಯಲೋಕ, ಸ್ವರ್ಗ ಲೋಕಗಳು ಸೃಷ್ಟಿಸಲ್ಪಟ್ಟು ದೇವತೆಗಳಿಗೆ ಕೊಡಲ್ಪಟ್ಟವು. ಹದಿನಾಲ್ಕು ಲೋಕಗಳು ಇದೇ ಹಸ್ತದಲ್ಲಿ ಅಡಗಿರುವವು, ನೋಡೆಂದು ಪುನಃ ತನ್ನ ಹಸ್ತವನ್ನು ತೋರಿಸಿದನು.

ಗಂಗಪ್ಪಯ್ಯನು ಪರಮ ಗುರುವಿನ ಅಮೃತ ಹಸ್ತದಲ್ಲಿ ಎಲ್ಲ ಲೋಕಗಳನ್ನು ನೋಡಿ ಸಂತುಷ್ಟನಾಗಿ—ಸದ್ಗುರುವೇ, ತ್ರಾಹಿ, ತ್ರಾಹಿ! ಎಂದು ನುಡಿದನು.

ಮೌನೇಶನು—ಗಂಗಪ್ಪಯ್ಯಾ, ಇನ್ನು ಮಾತ್ರ ಚಿತ್ತ ಚಂಚಲವಿಲ್ಲದೆ ನನ್ನನ್ನು ಧ್ಯಾನಿಸುತ್ತಿರು, ಎಂದು ಹೇಳಿ ಅದೃಶ್ಯನಾದನು.

ಈ ರೀತಿಯಾಗಿ ಮೌನಗುರುವಿನಿಂದ ಅನುಗ್ರಹ ಹೊಂದಿದ ಗಂಗಪ್ಪಯ್ಯನು ದೇವದುರ್ಗಕ್ಕೆ ಹೋಗಿ ತಂದೆ-ತಾಯಿಗಳ ದರ್ಶನ ತಕ್ಕೊಂಡು ಮುನಬಂದ ಕಡೆಯಲ್ಲಿ ಸಂಚರಿಸುತ್ತ ಅಲ್ಲಲ್ಲಿ ಮಠಮಾನ್ಯಗಳನ್ನು ಸ್ಥಾಪಿಸಿ, ಅವುಗಳಿಗೆಲ್ಲ ತಾನೇ ಗುರುವಾಗಿ ಎಲ್ಲರಿಂದಲೂ ಪೂಜೆಗೊಳ್ಳುತ್ತ, ಭಕ್ತಜನರ ಅಭೀಷ್ಟಗಳನ್ನು ಪೂರ್ಣಮಾಡುತ್ತ, ದುಷ್ಟಜನರನ್ನು ಹಣೆಗಣ್ಣಿನಿಂದ ಸುಟ್ಟು ಬಿಡುತ್ತ 'ಗಗನಾಪುರ'ದಲ್ಲಿ ಮಠವನ್ನು ಸೃಷ್ಟಿಸಿಕೊಂಡು ಸುಖದಿಂದಿದ್ದನು.

ಒಂದು ದಿನ ಗಂಗಪ್ಪಯ್ಯನು ತನ್ನ ಮಠದ ಮೇಲುಪ್ಪರಿಗೆಯಲ್ಲಿ ಕುಳಿತುಕೊಂಡಿರಲು, ಕರಿಬಸಪ್ಪನೆಂಬ ಶರಣನು ತನ್ನ ಮಂತ್ರಸಾಮರ್ಥ್ಯದಿಂದ ಹುಲಿಯ ಮೇಲೆ ಕುಳಿತುಕೊಂಡು ಕೈಯಲ್ಲಿ ಹಾವಿನ ಚಬಕವನ್ನು ಹಿಡಿದು ಗೋಣೆಪ್ಪನೆಂಬ ಶರಣನ ದರುಶನಕ್ಕೆ ಬರುತ್ತಿದ್ದನು. ಈ ವರ್ತ

ಮಾನವನ್ನು ಕೇಳಿ ಗೋಣೆಪ್ಪನು ಗೋಡೆಯ ಮೇಲೆ ಕುಳಿತು ತನ್ನ ಮಂತ್ರಬಲದಿಂದ ಅದನ್ನೇ ನಡೆಸುತ್ತ ಕರಿಬಸಪ್ಪನ ದರ್ಶನಕ್ಕೆ ಹೊರಟನು! ಇದನ್ನು ಕೇಳಿ ಪಟ್ಟಣದ ಜನರೆಲ್ಲರೂ ಫಲ-ತಾಂಬೂಲಾದಿಗಳನ್ನು ತೆಗೆದು ಕೊಂಡು ಆ ಮಂತ್ರಗಾರರ ದರ್ಶನಾಪೇಕ್ಷೆಯಿಂದ ನಿಂತಿದ್ದರು

ಈ ಮೇರೆಗೆ ಕರಿಬಸಪ್ಪನೂ, ಗೋಣೆಪ್ಪನೂ ತಮ್ಮ ತಮ್ಮ ವಾಹನ ಗಳನ್ನು ಬಹು ವೇಗವಾಗಿ ನಡೆಸುತ್ತ ಗಂಗಪ್ಪಯ್ಯನಿರುವ ಗಗನಾಪುರದ ಸಮೀಪಕ್ಕೆ ಬಂದರು. ಆ ಕ್ಷಣಕ್ಕೆ ಕರಿಬಸಪ್ಪನ ಹುಲಿಯು ನಡೆಯದಾ ಯಿತು; ಗೋಣೆಪ್ಪನ ಗೋಡೆಯು ನಿಂತು ಹೋಯಿತು. ಆ ಮಂತ್ರಗಾರರು ತಮ್ಮ ವಾಹನಗಳು ಮುಂದಕ್ಕೆ ಹೋಗದೆ ನಿಂತದ್ದನ್ನು ನೋಡಿ ತಮ್ಮಲ್ಲಿ ರುವ ಮಂತ್ರಸಾಮರ್ಥ್ಯವನ್ನೆಲ್ಲ ಖರ್ಚುಮಾಡಿ ನೋಡಿದರು; ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಕಾರಣ ಅವರ ಅಹಂಕಾರವು ನಾಶವಾಗಿ ಹೀಗೆ ಯಾಕೆ ಆಯಿತೆಂದು ಅವರು ಆಲೋಚಿಸಲಿಕ್ಕೆ ಹತ್ತಿದರು.

ನೋಡಲಿಕ್ಕೆ ನಿಂತಿದ್ದ ಜನರು:—'ಇಲ್ಲಿ ಒಬ್ಬ ಮಹಾಪುರುಷರಿರುವರು; ಅವರ ದರ್ಶನ ತಕ್ಕೊಂಡು ಆಶೀರ್ವಾದ ಹೊಂದಿರಿ; ಹಾಗಾದರೆ ನಿಮ್ಮ ವಾಹನಗಳು ನಡೆಯುವವು,' ಎಂದು ಹೇಳಿದರು.

ಆ ಮಾಂತ್ರಿಕರು ಉಪಾಯಗಾಣದೆ ಪಟ್ಟಣವಲ್ಲಿ ಪ್ರವೇಶಿಸಿ ಸದ್ಗುರು ಪಾದ ಗಂಗಪ್ಪಯ್ಯನವರಿಗೆ ನಮಸ್ಕರಿಸಿ:—'ಗುರುನಾಥಾ, ಸಿಂಹದ ಹತ್ತರ ಆನೆಗಳೂ, ಗರುಡನ ಹತ್ತರ ಸರ್ಪಗಳೂ, ಬೆಕ್ಕಿನ ಹತ್ತರ ಇಲಿಗಳೂ ಬಲ ಹೀನವಾಗುವಂತೆ ಮಂತ್ರಮೂರ್ತಿಯಾದ ನಿನ್ನೆದುರಿನಲ್ಲಿ ನಮ್ಮ ಮಂತ್ರ ಸಾಮರ್ಥ್ಯವು ಕಳೆಗುಂದಿ ಹೋಯಿತು. ಅದುಕಾರಣ ನೀನು ಕೃಪೆಯಿಂದ ಮೊದಲಿದ್ದ ನಮ್ಮ ಮಂತ್ರಸಾಮರ್ಥ್ಯವನ್ನು ಕೊಟ್ಟು ಕಾಪಾಡು' ಎಂದು ಬೇಡಿಕೊಂಡರು.

ಗಂಗಪ್ಪಯ್ಯನು ಅಂತಃಕರಣದಿಂದ:—ಮಂತ್ರಗಾರರೇ, ಲೋಕದಲ್ಲಿ ನಮಗೆ ಸರಿಯಾದವರು ಯಾರೂ ಇರುವದಿಲ್ಲವೆಂಬ ಗರ್ವದಿಂದ ಮೆರೆಯು ವವರ ಸ್ಥಿತಿಯು ಹೀಗೆ ಆಗುವದು. ಇನ್ನು ಮೇಲೆ ಅಹಂಕಾರರಹಿತರಾಗಿ ಒಳ್ಳೇ ರೀತಿಯಿಂದ ನಡೆಯಿರಿ. ಹೋಗಿರಿ, ಎಂದು ಅನುಗ್ರಹ ಮಾಡಿ ಕಳಿಸಿದನು.

ಅನಂತರ ಆ ಮಂತ್ರಗಾರರು ಗುರುಕರುಣದಿಂದ ತಮ್ಮ ತಮ್ಮ ವಾಹನಗಳನ್ನು ಹತ್ತಿಕೊಂಡು ತೆರಳಿದರು. ಇತ್ತ ಗಂಗಪ್ಪಯ್ಯನು ಶ್ರೀ ಮೌನಗುರುವಿನ ಅನುಗ್ರಹದಿಂದ ಕಣ್ಣಿಲ್ಲದವರಿಗೆ ಕಣ್ಣುಗಳನ್ನು ಕೊಡುತ್ತಲೂ, ಸುಟ್ಟ ಬೀಜಗಳನ್ನು ಬಿತ್ತಿಸಿ ಬೆಳೆಯನ್ನುಂಟು ಮಾಡುತ್ತಲೂ, ಕುಷ್ಟ, ಕ್ಷಯ, ಅಪಸ್ಮಾರ ಮುಂತಾದ ಕೆಟ್ಟ ರೋಗಗಳನ್ನು ನಿವಾರಣಮಾಡುತ್ತಲೂ, ಸತ್ತವರನ್ನು ಬದುಕಿಸುತ್ತಲೂ, ಭಕ್ತಜನರಿಗೆ ಇಷ್ಟಾರ್ಥಗಳನ್ನು ಕೊಡುತ್ತಲೂ ಮಹಾಮಹಿಮನಾಗಿ ಮೆರೆಯುತ್ತಿದ್ದನೆಂಬಲ್ಲಿಗೆ ಒಂಬತ್ತನೇ ಅಧ್ಯಾಯ ಸಂಪೂರ್ಣವು.



ಶ್ರೀ ಮೌನಗುರು ಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ಹತ್ತನೆಯ ಅಧ್ಯಾಯ.



## ಶಿರಶೃಂಗಿಯಲ್ಲಿ ಮಹಾತ್ಮೆ ತೋರಿಸಿದ್ದು.

ಆದಿಯಲ್ಲಿ ನಿರಾಕಾರವಾಗಿಯೂ, ನಿರ್ಗುಣವಾಗಿಯೂ, ನಿರ್ವಿಕಲ್ಪವಾಗಿಯೂ, ನಿರಾಮಯವಾಗಿಯೂ ಇರುವ ಪರಬ್ರಹ್ಮವು ತಾನೇ ತಾನಾಗಿ ಬೆಳಗುತ್ತಿತ್ತು. ಅಂಥ ನಿರ್ಗುಣವಾದ ಪರಬ್ರಹ್ಮವೇ ಸಗುಣಸ್ವರೂಪವನ್ನು ಹೊಂದಿ ಮಹಾಶಕ್ತಿ ಎಂದು ಹೇಳಿಸಿಕೊಂಡಿತು. ಆ ಸಗುಣಸ್ವರೂಪಿಗೆ ಮೂಲಪ್ರಕೃತಿ ಎಂತಲೂ, ಚೈತನ್ಯವೆಂತಲೂ, ಚಿಚ್ಛಕ್ತಿ ಎಂತಲೂ, ಮಹಾವಿದ್ಯೆ ಎಂತಲೂ, ಮಹಾಕಾಳಿ ಎಂತಲೂ, ಮಹಾಲಕ್ಷ್ಮೀ ಎಂತಲೂ, ರಾಜೇಶ್ವರೀ ಎಂತಲೂ, ಮಾಹೇಶ್ವರೀ ಎಂತಲೂ ಸುಜ್ಞಾನಿಗಳು ಹೇಳುತ್ತಿರುವರು. ಆ ಆದಿಶಕ್ತಿಯೇ ಲೀಲಾಮಾತ್ರವಾಗಿ ಬ್ರಹ್ಮ, ವಿಷ್ಣು, ರುದ

ಈಶ್ವರ, ಸದಾಶಿವರೆಂಬ ಪಂಚಮೂರ್ತಿಗಳನ್ನೂ, ಈ ಸಚರಾತ್ಮಕವಾದ ಜಗತ್ತನ್ನೂ ಸೃಷ್ಟಿಸಿ, ಸರ್ವಕ್ಕೂ ಸಾಕ್ಷಿಸ್ವರೂಪಳಾಗಿ ಮೆರೆಯುತ್ತಿರುವಳು; ಮತ್ತು 'ಆದಿಶಕ್ತಿಮಯಂ ಬೀಜಂ ಬೀಜಶಕ್ತಿಮಯಂ ಶಿವ, ಶಿವಶಕ್ತಿಮಯಂ ವಿಷ್ಣು ವಿಷ್ಣುಶಕ್ತಿಮಯಂ ಜಗತ್' ಅಂದರೆ ಮೇಲೆ ಹೇಳಲ್ಪಟ್ಟ ಮಹಾಶಕ್ತಿಯಿಂದ ಪ್ರಥಮದಲ್ಲಿ ಬೀಜಶಕ್ತಿಯು ಹುಟ್ಟಿತೆಂತಲೂ, ಆ ಶಕ್ತಿಯಿಂದ ಶಿವನು ಉಂಟಾದನೆಂತಲೂ, ಶಿವನಿಂದ ವಿಷ್ಣುವು ಉತ್ಪನ್ನನಾದನೆಂತಲೂ ವಿಷ್ಣುವಿನಿಂದ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೇ ಸೃಷ್ಟಿಸಲ್ಪಟ್ಟಿತೆಂತಲೂ ಶ್ರುತಿಪ್ರಮಾಣವಿರುವದು. ಇಂಥ ಮೂಲ ಸ್ವರೂಪಳಾದ ಮಹಾಶಕ್ತಿಯೇ ದೇವತೆಗಳಿಗೆ ಮಹಿಷಾಸುರ, ಶುಂಭಾಸುರ, ನಿಶುಂಭಾಸುರ, ರಕ್ತಬೀಜಾಸುರ ಮುಂತಾದ ಕ್ರೂರ ರಕ್ಕಸರಿಂದ ಬಾಧೆಯುಂಟಾದ ಕಾಲದಲ್ಲಿ ಆ ರಾಕ್ಷಸರನ್ನು ಸಂಹರಿಸಿ, ಸುರರ ಸಂಕಟವನ್ನು ನಿವಾರಿಸಿ ರಕ್ಷಿಸಿದಳು. ಆ ಪರಮಾತ್ಮಳು ಭಕ್ತಜನರನ್ನು ಉದ್ಧರಿಸಲಿಕ್ಕಾಗಿ ಧರಿಸಿದ ಅವತಾರಗಳು ಭೂಲೋಕದಲ್ಲಿ ಅನೇಕ ಸ್ಥಳಗಳಲ್ಲಿ ಪ್ರಕಟವಾಗಿರುವವು ಅವುಗಳಲ್ಲಿ ಮುಖ್ಯಸ್ಥಳಗಳಲ್ಲಿಯ ಕೆಲವು ಅವತಾರಗಳನ್ನು ವಾಚಕರ ಸಲುವಾಗಿ ಇಲ್ಲಿ ವಿವರಿಸುವೆವು:—

ಕಾಶಿಯಲ್ಲಿ ವಿಶಾಲಾಕ್ಷಿಯೆಂತಲೂ, ಕಂಚಿಯಲ್ಲಿ ಕಾಮಾಕ್ಷಿಯೆಂತಲೂ ಮಧುರೆಯಲ್ಲಿ ಮೀನಾಕ್ಷಿಯೆಂತಲೂ, ಶ್ರೀಶೈಲದಲ್ಲಿ ಭ್ರಮರಾಂಬೆಯೆಂತಲೂ, ಶಿವಗಂಗೆಯಲ್ಲಿ ಹೊನ್ನಾಂಬೆಯೆಂತಲೂ, ಶಂಬರದಲ್ಲಿ ಜೋಗಳಾಂಬೆಯೆಂತಲೂ, ಕೊಲ್ಲಾಪುರದಲ್ಲಿ ಮಹಾಲಕ್ಷ್ಮಿಯೆಂತಲೂ, ಜಾಲಂಧರದಲ್ಲಿ ಮಹಾದೇವಿಯೆಂತಲೂ, ಕನ್ಯಕುಬ್ಜೆಯಲ್ಲಿ ಕುಬ್ಜಾದೇವಿಯೆಂತಲೂ, ಸಿಂಹಳದಲ್ಲಿ ಸಿಂಹಿಕೇಶ್ವರಿಯೆಂತಲೂ, ಚಕ್ರವಾಪಿಯಲ್ಲಿ ಮಣಿಕರ್ಣಿಕೇಶ್ವರಿಯೆಂತಲೂ, ಪೂರ್ಣಕ್ಷೇತ್ರದಲ್ಲಿ ಪೂರ್ಣಿಕಾದೇವಿಯೆಂತಲೂ, ಪರ್ವತದಲ್ಲಿ ಪಾರ್ವತಿದೇವಿಯೆಂತಲೂ, ವಿಂಧ್ಯಾದ್ರಿಯಲ್ಲಿ ವಿಂಧ್ಯಾದೇವಿಯೆಂತಲೂ, ಮಹಾಕಾಲಕ್ಷೇತ್ರದಲ್ಲಿ ಮಹಾಕಾಲೇಶ್ವರಿಯೆಂತಲೂ, ಯೋಗಿನೀಪುರದಲ್ಲಿ ಯೋಗಾವಳಿದೇವಿಯೆಂತಲೂ, ಹಿಮಾಚಲದಲ್ಲಿ ಹೈಮವತಿಯೆಂತಲೂ, ಧರ್ಮಸ್ಥಳದಲ್ಲಿ ಕಾಳರಾತ್ರಿಯೆಂತಲೂ, ಶೃಂಗಪುರದಲ್ಲಿ ಶಾರದಾದೇವಿಯೆಂತಲೂ, ಲಂಬಿಕೆಯಲ್ಲಿ ಲಲಿತಾದೇವಿಯೆಂತಲೂ, ಶಿರ

ಶೃಂಗಿಯಲ್ಲಿ ಶ್ರೀಕಾಳಿಕಾದೇವಿಯೆಂತಲೂ ಪ್ರಖ್ಯಾತಿಗೊಂಡಿರುವವು. ಇದಲ್ಲದೆ ಅಂಬಾ, ಶಾಂಭವಿ, ಚಂಡೇಶ್ವರಿ, ಚಾಮುಂಡೇಶ್ವರಿ, ಅನ್ನಪೂರ್ಣೆ ಶಾಕಾಂಬರಿ, ಬಗಳಾಂಬೆ, ದುರ್ಗಾದೇವಿ ಮೊದಲಾದ ಹೆಸರುಗಳಿಂದ ಅನೇಕ ಸ್ಥಳಗಳಲ್ಲಿ ವಾಸಿಸಿರುವಳು.

ಇಂಥ ಸುಕ್ಷೇತ್ರಗಳಲ್ಲೊಂದಾದ ಶಿರಶೃಂಗಿ (ಶಿರಸಂಗಿ) ಯಲ್ಲಿ ಪರ ಮಾತ್ಮಳು ಮಹಾಕಾಳಿಕಾ ಎಂಬ ಹೆಸರಿನಿಂದ ವಾಸಿಸಿರುವದನ್ನು ನಮ್ಮ ಧಾರವಾಡ ಜಿಲ್ಲೆಯ ಭಕ್ತಜನರು ಅರಿಯದ ಮಾತಲ್ಲ. ಆ ಪವಿತ್ರ ಕ್ಷೇತ್ರ ದಲ್ಲಿರುವ ಶ್ರೀಕಾಳಿಕಾದೇವಿಯ ಜಾತ್ರೆಯು ಪ್ರತಿವರುಷ ಯುಗಾದಿಯ ಅಮಾವಾಸಿಯಿಂದ ಐದು ದಿವಸಗಳವರೆಗೂ ನಡೆಯುವದು. ಅಲ್ಲಿಯ ಜಾತ್ರೆಯೆಂದರೆ ಮಹಾದೇವಿಯ ಅಭಿಷೇಕ ಮೊದಲಾದ ಪೂಜಾ ಸಂಭ್ರ ಮವೇ ಸಂಭ್ರಮವು. ಅಲ್ಲಿಯ ಕೆಲವು ಆಶ್ಚರ್ಯಕರವಾದ ಸಂಗತಿಗಳನ್ನು ನೋಡಿದರೆ ಅದು ಮಹಿಮಾಸ್ಥಲವೆಂದು ಎಂಥವರಿಗಾದರೂ ಮನವರಿಕೆ ಯಾಗದಿರದು. ಆ ಮಹಿಮೆಗಳೆಂದರೆ ಯುಗಾದಿಯ ಅಮಾವಾಸಿಯ ದಿವಸ ಗೋಧಿಯ ಸಿಧಿಯನ್ನು ಹಾಕಿ ಪೂಜಿಸುತ್ತಿರುವರು. ಚೈತ್ರ ಶುದ್ಧ ಪ್ರತಿ ಪದೆಯ ದಿವಸ ಅರ್ಚಕರು ಸ್ನಾನಮಾಡಿ, ಮಡಿಯಿಂದ ಹೋಳಿಗೆ, ಪಾಯಸ ಮುಂತಾದ ಮೃಷ್ಟಾನ್ನವನ್ನು ಮಾಡಿ, ಅದನ್ನೆಲ್ಲ ದೇವಿಯ ಮುಂಭಾಗದಲ್ಲಿರಿಸಿ, ಜಗನ್ಮಾತೆಯ ಪೂಜಾವಿನಿಯೋಗವು ನಡೆದ ಮೇಲೆ ಆ ನೈವೇದ್ಯವನ್ನು ಮೂರು ಉಂಡೆಗಳನ್ನು ಮಾಡಿ ಕುಂಕುಮದಲ್ಲಿ ಹೊರ ಳಾಡಿಸಿ ಅವುಗಳನ್ನು ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪಾದಿ ಉಪಚಾರ ಗಳಿಂದ ಪೂಜಿಸಿ, ಅನಂತರ ಆ ಮೂರು ಉಂಡೆಗಳನ್ನು ಹಾರಿಸುತ್ತಿರುವರು. ಅವುಗಳೊಳಗಿನ ಒಂದು ಉಂಡೆಯು ಕಂಚಿಯಲ್ಲಿಯೂ, ಮತ್ತೊಂದು ಉಂಡೆಯು ಕಾಳಹಸ್ತಿಯಲ್ಲಿಯೂ ಬೀಳುವವಂತೆ. ಆ ಉಂಡೆಗಳು ಬಿದ್ದ ನಂತರವೇ ಅಲ್ಲಿಯ ರಥೋತ್ಸವವು ನಡೆಯುವವೆಂದು ಹೇಳುತ್ತಿರುವರು. ಉಳಿದ ಇನ್ನೊಂದು ಉಂಡೆಯು ಮಾತ್ರ ತೂರಿದ ಸ್ಥಳದಲ್ಲಿಯೇ ಬೀಳು ವದು. ಅದನ್ನೇ ಮಹಾಪ್ರಸಾದವೆಂದು ಎಲ್ಲರಿಗೂ ಕೊಡುತ್ತಿರುವರು.

ಇದಲ್ಲದೆ ಆ ಕ್ಷೇತ್ರದಲ್ಲಿ ನಡೆಯುವ ಇನ್ನೊಂದು ಮಹಿಮೆಯೆಂದರೆ ಆ ದೇವಿಯ ಆಲಯದ ಸ್ವಲ್ಪ ಅಂತರದಲ್ಲಿಯೇ ನಮ್ಮ ಚರಿತ್ರ ಸ್ವಾಮಿ

ಯಾದ ಶ್ರೀ ಮೌನೇಶ್ವರನ ಗುಡಿಯು ಇರುವದು. ಅಲ್ಲಿ ಒಂದು ಅಗ್ನಿ ಕುಂಡವಿರುವದು. ಮಹಾದೇವಿಯ ಆಲಯದಲ್ಲಿ ಅಡಿಗೆ ಮಾಡುವವರು ಆ ಕುಂಡದೊಳಗಿನ ಬೆಂಕಿಯನ್ನೇ ತರುತ್ತಿರುವರು; ಅದಕ್ಕೆ ಪ್ರತಿಯಾಗಿ ಅಲ್ಲಿ ಬೆಂಕಿಯು ಕಡ್ಡಿಗಳನ್ನು ಎಷ್ಟು ಕೆರೆದರೂ ಬೆಂಕಿಯಾಗಿ ಅಡಿಗೆಯಾಗುವ ದಿಲ್ಲವೆಂಬುವದು ಎಲ್ಲರೂ ಮನಗಂಡ ಮಾತಾಗಿದೆ. ಇರಲಿ.

ಈ ಪ್ರಕಾರ ಮಹಿಮಾಸ್ಥಲವೆನಿಸಿದ ಶ್ರೀ ಶಿರಸಂಗಿಯ ಯಾತ್ರೆಯು ಎಂದಿನಂತೆ ಪ್ರಾಪ್ತವಾಗಲು, ಅಲ್ಲಿಗೆ ಜನಸಮೂಹವು ಕೂಡಿತು. ಆ ದೇವಿಯು ಮನು–ಮಯ–ತ್ವಷ್ಟ-ಶಿಲ್ಪಿ-ವಿಶ್ವಜ್ಞರೆಂಬ ಪಂಚಾನನ ಧರ್ಮ ದವರ ಇಷ್ಟ ದೇವತೆಯಾದ್ದರಿಂದ ಆ ಕ್ಷೇತ್ರದಲ್ಲಿ ವಿಶ್ವಬ್ರಾಹ್ಮಣರ ಸಮೂ ಹವೇ ಬಹಳವಾಗಿತ್ತು. ಅವರಲ್ಲಿ ಕೆಲವರು ಸ್ನಾನ ಮಾಡುತ್ತಿದ್ದರು; ಕೆಲ ವರು ಸಂಧ್ಯಾವಿಧಿಗಳನ್ನು ತೀರಿಸಿಕೊಳ್ಳುತ್ತಿದ್ದರು; ಕೆಲವರು ನೈವೇದ್ಯ ಸಮರ್ಪಣ ಮಾಡಿ ತಿರುಗಿ ಬರುತ್ತಿದ್ದರು. ಕೆಲವರು ಉಚ್ಚಸ್ವರದಿಂದ ದೇವೀಸ್ತೋತ್ರವನ್ನು ಅನ್ನುತ್ತ ನಡೆದಿದ್ದರು, ಕೆಲವರು ಮೌನದಿಂದ ಮನ ಸ್ಸಿನಲ್ಲಿ ಧ್ಯಾನಿಸುತ್ತ ಹೋಗುತ್ತಿದ್ದರು. ಇತರ ಧರ್ಮದವರು ಸಹ ದೇವಿಗೆ ಹಣ್ಣು—ಕಾಯಿಗಳನ್ನು ಸಮರ್ಪಿಸಲಿಕ್ಕಾಗಿ ಗುಂಪುಗುಂಪಾಗಿ ತೆರಳುತ್ತಿದ್ದರು.

ಈ ಮೇರೆಗೆ ಮಹಾದೇವಿಯ ಪೂಜಾಸಂಭ್ರಮದ ಗದ್ದಲವು ನಡೆ ದಿರಲು, ಅಷ್ಟರಲ್ಲಿ ಒಬ್ಬ ಘನರೋಗಿಯು ಅಲ್ಲಿಗೆ ಬಂದನು ಅವನ ದೇಹದ ತುಂಬೂ ದೊಡ್ಡ ದೊಡ್ಡ ಗಾಯಗಳಿದ್ದು, ಕೆಲವು ಗಾಯಗಳಲ್ಲಿ ದೊಣ್ಣೆಗೀವು ಇಳಿಯುತ್ತಿತ್ತು. ಕೆಲವು ಗಾಯಗಳಲ್ಲಿ ರಕ್ತವು ಸುರಿಯು ತ್ತಿತ್ತು. ಕೆಲವು ಗಾಯಗಳಲ್ಲಿ ಕೀವೂ, ರಕ್ತವೂ ಮಿಶ್ರವಾಗಿ ಸೋರು ತ್ತಿತ್ತು. ಆತನ ಬಾಯಲ್ಲಿ ಜೊಲ್ಲು ಹಳ್ಳದಂತೆ ಹರಿಯುತ್ತಿತ್ತು. ಕಣ್ಣು ಗಳಲ್ಲಿ ಪಿಳ್ಳು ತುಂಬಿ ಹೋಗಿತ್ತು. ಕೂಕಣಿಯು ಕಿವಿಗಳ ಹೆಜ್ಜಗಳನ್ನು ತುಂಬಿಬಿಟ್ಟಿತ್ತು. ದೇಹದಿಂಥ ಬರುವ ದುರ್ವಾಸನೆಯು ಎಂಥ ಗಟ್ಟಿ ಮನ ಸ್ಸಿನವರಿಗಾದರೂ ವಾಂತಿಯನ್ನು ಹುಟ್ಟಿಸುವಹಾಗಿತ್ತು.

ಹೀಗಿರುವ ಆ ಘನರೋಗಿಯು ಶ್ರೀ ಕಾಳಿಕಾದೇವಿಯ ಗುಡಿಯ ಹತ್ತರ ಬಂದು ನಿಲ್ಲಲು, ಅವನನ್ನು ನೋಡಿದ ಕೂಡಲೆ ಅಲ್ಲಿಯ ಜನರು

ಅಸಹ್ಯಪಟ್ಟು:—ಎಲೋ, ನೀನು ಯಾರು? ಇಲ್ಲಿಗೆ ಏನು ಕಾರಣ ಬಂದೆ? ಜನರು ಸ್ನಾನಮಾಡಿ, ಮಡಿಯಿಂದ ನೈವೇದ್ಯ ತೆಗೆದುಕೊಂಡು ಈ ದೇವಿಯ ಆಲಯಕ್ಕೆ ಬರುತ್ತಿರುವರು ಕಾರಣ ನೀನು ಇಲ್ಲಿ ನಿಲ್ಲಬೇಡ, ಮತ್ತೆಲ್ಲಿಗಾದರೂ ಹೋಗು, ಎಂದು ನುಡಿದರು.

ಆ ಮಾತಿಗೆ ರೋಗಿಯು:—ಅಪ್ಪಗಳಿರಾ, ನಾನು ಬಹು ದೂರದಿಂದ ಬಂದೆನು. ನನ್ನ ಹೆಸರು ಮೌನೇಶನು. ಏನು ಮಾಡಲಿ? ನಾನು ಚನ್ನಾಗಿರುವವರೆಗೆ ಎಲ್ಲರೂ ನನ್ನನ್ನು ದೇವರೆಂದು ಪೂಜಿಸುತ್ತಿದ್ದರು. ಈ ಘೋರ ರೋಗವು ಬಂದಂದಿನಿಂದ ನಾನು ಮುಂದಿದ್ದರೂ ಮಾತಾಡಿಸದಂತೆ ದೂರ ಹೋಗುವರು. ಈ ರೋಗದ ಬಾಧೆಯು ನನಗೆ ಬಹು ಹೆಚ್ಚಾಗಿದೆ. ದೇವಿಯು ಸಾವನ್ನು ಕೊಟ್ಟರೆ ಸುಖವಾದೀತು. ಎಷ್ಟೋ ಜನ ವೈದ್ಯರ ಕಡೆಗೆ ಹೋಗಿದ್ದೆನು. ಅವರು ನಮ್ಮ ಔಷಧಿಗಳು ಸಂಜೀವಿನಿ ಎಂತಿರುವವೆಂದು ಹೇಳಿ ಹೇಳಿ ಕೊಟ್ಟರು. ಅವುಗಳನ್ನು ಕೆಲವು ದಿವಸ ಸೇವಿಸಿದೆನು; ಅದರಿಂದ ಯಾವ ಗುಣವೂ ಕಾಣಲಿಲ್ಲ. ಮತ್ತೂ ಕೊಟ್ಟರು. ಮತ್ತೂ ಸೇವಿಸಿದೆನು; ಪುನಃ ಕೊಟ್ಟರು; ಪುನಃ ಸೇವಿಸಿದೆನು ಅಕಟಾ! ನನ್ನ ಪೂರ್ವ ಕರ್ಮದ ಫಲವನ್ನೆಷ್ಟೆಂದು ಹೇಳಲಿ!! ಮಾತ್ರೆಗಳನ್ನು ನುಂಗಿ-ನುಂಗಿ ಸಾಕಾಗಿ ಹೋಯಿತು; ಕಷಾಯಗಳನ್ನು ಕುಡಿ-ಕುಡಿದು ಬೇಸರ ಬಂದಿತು; ಮುಲಾಮುಗಳನ್ನು ಹಚ್ಚಿ-ಹಚ್ಚಿ ರೋಸಿಕೆ ಹಿಡಿಯಿತು, ಆದರೂ ನನ್ನ ರೋಗವು ಸ್ವಲ್ಪಾದರೂ ಕಡಿಮೆಯಾಗಲಿಲ್ಲ. ಪಾಪ! ವೈದ್ಯರಾವರೂ ನನ್ನ ದುರ್ದೈವಕ್ಕೆ ಏನು ಮಾಡುವರು? ಕಡೆಗೆ ಅವರು ನಿಮ್ಮಿಂದಾಗುವದಿಲ್ಲೆಂದು ಖಂಡಿತವಾಗಿ ಹೇಳಿಬಿಟ್ಟರು. ಆ ಮೇಲೆ ನಾನು ಜ್ಯೋತಿಷ್ಕರ ಕಡೆಗೆ ಹೋದೆನು. ಅವರು:—ನವಗ್ರಹ ಶಾಂತಿ ಮಾಡಿಸು, ಮೃತ್ಯುಂಜಯ ಜಪ ಮಾಡಿಸು, ಕುಲಬ್ರಾಹ್ಮಣರಿಗೆ ಭೋಜನ ಮಾಡಿಸು, ಎಂದು ತಮ್ಮ ತಮ್ಮ ಮನಸ್ಸಿಗೆ ಬಂದ ಹಾಗೆ ಹೇಳಿದರು; ಹಾಗೂ ಮಾಡಿದೆನು. ಅದರಿಂದಲೂ ಗುಣವಾಗಲಿಲ್ಲ. ಆಗ ಮಾತ್ರ ನಾನು ಧೈರ್ಯಗೆಟ್ಟು:—ಈ ಕೆಟ್ಟ ರೋಗವು ನನ್ನನ್ನು ಮೃತ್ಯುಪಾಲು ಮಾಡದೆ ಬಿಡುವದಿಲ್ಲವೆಂದು ನಿಶ್ಚೈಸಿ ದುಃಖಿಸುತ್ತ ಕುಳಿತೆನು. ಅಷ್ಟರಲ್ಲಿ ಒಬ್ಬ ತತ್ವಜ್ಞಾನಿಯು ಬಂದು ನನ್ನನ್ನು ನೋಡಿ:—ಮೌನೇಶಾ, ನೀನು ಏನು ಮಾಡಿದರೂ ಈ ರೋಗವು ಗುಣ

ವಾಗುವದಿಲ್ಲ. ಎಂದಿದ್ದರೊಂದು ದಿನ ನಾಶ ಹೊಂದುವ ಈ ದೇಹಕ್ಕೆ ಅಳುತ್ತ ಕುಳಿತರೆ ಆಗುವದೇನು? ಪವಿತ್ರ ಕ್ಷೇತ್ರವಾದ ಶಿರಸಂಗೀ ಯಾತ್ರೆಗೆ ಹೋಗು. ಅಲ್ಲಿ ಕೂಡಿರುವ ನಿಮ್ಮ ಜಾತಿ ಬಾಂಧವರು ನಿನ್ನ ಶರೀರವನ್ನು ಸೇವಿಸಿದರೆ ನಿನಗೆ ಮೋಕ್ಷವಾಗುವದೆಂದು ಹೇಳಿದನು. ಆದನ್ನು ಕೇಳಿ ಇದೊಂದು ಒಳ್ಳೆಯ ಮಾರ್ಗವೆಂದು ತಿಳಿದು ಇಲ್ಲಿಗೆ ಬಂದೆನು. ಪರದೇಶಿಯಾದ ನನಗೆ ಯಾರೂ ಸಹಾಯಮಾಡುವವರಿಲ್ಲ. ಸ್ವಮತಸ್ಥರಾದ ನೀವು ದಯಮಾಡಿ ನನ್ನ ದೇಹವನ್ನು ಭಕ್ಷಿಸಿ, ಈ ಸುಕ್ಷೇತ್ರ ದಲ್ಲಿ ಮೋಕ್ಷವನ್ನು ಕೊಡಿರಿ, ಎಂದು ಹೇಳಿದನು.

ರೋಗಿಯ ಈ ಮಾತುಗಳನ್ನು ಕೇಳಿ, ಅಲ್ಲಿಯ ಜನರು:—'ಥೂ, ಥೂ, ಮೌನೇಶನು ಮಹಾಮಹಿಮನೆಂದು ಕೇಳಿರುವೆವೇ ಹೊರ್ತು ಇಂಥ ಘನರೋಗಿ ಇರುವನೆಂದು ಕೇಳಿದ್ದಿಲ್ಲ. ನಿನ್ನ ದೇಹವನ್ನು ಭಕ್ಷಿಸಲಿಕ್ಕೆ ನಾವೇನು ರಾಕ್ಷಸರೇ? ಹಾಗೆ ಮಾಡಿದರೆ ನಮ್ಮ ಬ್ರಹ್ಮಜಾತಿಗೆ ಕುಂದುಂ ಟಾಗಲಿಕ್ಕಿಲ್ಲವೇ? ಘನಮಹಿಮನೆಂದು ಇದುವರೆಗೂ ಹೇಳಿಸಿಕೊಂತ ನಿನಗೆ ನಿನ್ನ ರೋಗವನ್ನು ಗುಣಮಾಡಿಕೊಳ್ಳುವ ಸಾಮರ್ಥ್ಯವು ಇಲ್ಲದೆ ಹೋಯಿತೆ? ಸಾಕು! ಸಾಕು! ಡಾಂಭಿಕರ ಸ್ಥಿತಿಯೇ ಹೀಗಿರುವದು. ಸುಮ್ಮನೆ ಈ ಸ್ಥಳ ಬಿಟ್ಟು ಹೋಗು'' ಎಂದು ಗದ್ದರಿಸಿಮಾತಾಡಿದರು.

ಆಗ ಮೌನೇಶನು:—ಅಕಟಾ! ಇಂಥ ಸುಕ್ಷೇತ್ರದಲ್ಲಿಯೂ ಸಹ ನನಗೆ ದಿಕ್ಕಿಲ್ಲದಂತಾಯಿತೆ!! ಮಹಾದೇವೀ, ನಿನಗಾದರೂ ದಯೆ ಹುಟ್ಟದೇ ಹೋಯಿತೇ? ಅಯ್ಯೋ! ನನಗೆ ಹೊಟ್ಟೆಶೂಲೆಯು ಬಹಳವಾಗಿದೆ, ಇವನ್ನು ಹೇಗೆ ಸೈರಿಸಕೊಳ್ಳಲಿ!! ಎಂದು ಅಲ್ಲಿಯೇ ಮಲವಿಸರ್ಜನ ಮಾಡಿದನು.

ಆದನ್ನು ನೋಡಿದ ಜನರು:—ಇವನೆಂಥ ದುರಾಚಾರಿಯು! ದೇವಾ ಲಯದ ಮುಂದೆಯೇ ಅಪವಿತ್ರ ಮಾಡಿದನೆಂದು ಅನ್ನುತ್ತಿರಲು, ಅಪ್ಪಾ, ತಡೆಯಲಾರೆನೆಂದು ಮತ್ತೂ ಅಪವಿತ್ರ ಮಾಡಿದನು.

ದೂಡಿರಿ, ಈ ನಾಚಿಕೆಗೇಡಿಯನ್ನು ಚಂಡ್ಡಿಡಿರಿ ಅತ್ತ ದೂಡಿರಿ, ಎಂದು ಜನರು ಹತ್ತರ ಬರುವಷ್ಟರಲ್ಲಿ ಪುನಃ ಅಪವಿತ್ರ ಮಾಡಿದನು. ಆತನ ಮಲವೆಲ್ಲವೂ ದ್ವಾದಶ ಬಣ್ಣದ ಬಂಗಾರದ ಗಟ್ಟಿಗಳಾಗಿ ಪ್ರಕಾಶಿಸುತ್ತಿತ್ತು. ನೋಡಿರಿ, ಬಂಗಾರವೆಂದರೆ ಯಾರಿಗೆ ಬೇಡಾಗಿರುವದು? ದುಃಖಿಗಳಿರಲಿ,

ಸುಖಿಗಳಿರಲಿ, ಪಾಮರರಿರಲಿ ಅದರ ಅಪೇಕ್ಷೆ ಇಲ್ಲದವರು ಅಪರೂಪ ವಲ್ಲವೆ? ಅಪರೂಪವೇಕೆ, ಇಲ್ಲೇ ಇಲ್ಲವೆಂದು ಹೇಳಿದರೂ ಅತಿಶಯೋಕ್ತಿ ಎನಿಸದು. ಆದ್ದರಿಂದಲೇ ಜ್ಞಾನಿಗಳು:—'ವೇಧಾದ್ವೇಧಾ ಭ್ರಮಂ ಚಕ್ರೇ

ಕಾಂತಾಸುಕನಕೇಷುಚ। ತಾಸುತೇಷ್ವಪ್ಯನಾಸಕ್ತಃ ಸಾಕ್ಷಾದ್ಭರ್ಗೋ ನರಾಕೃತಿಃ'॥

ಬ್ರಹ್ಮದೇವನು ಲೋಕದಲ್ಲಿ ಸ್ತ್ರೀ ಮತ್ತು ಬಂಗಾರಗಳೆಂಬ ಭ್ರಾಂತಿ ಮಯವಾದ ಎರಡು ಚಕ್ರಗಳನ್ನು ನಿರ್ಮಿಸಿರುವನು ಈ ಎರಡು ಪದಾರ್ಥ ಗಳ ಮೇಲೆ ಯಾವಾತನು ಆಶಾರಹಿತನಾಗಿರುವನೋ ಅಂಥವನನ್ನು ಸಾಕ್ಷಾತ್ ಪರಶಿವನೆಂತಲೇ ತಿಳಿಯಬೇಕೆಂದು ಹೇಳಿರುವರು. ಅದರಂತೆ ರೋಗಿಯ ಮಲವು ಬಂಗಾರವಾದದ್ದನ್ನು ಕಂಡಾಕ್ಷಣವೇ ಅಲ್ಲಿರುವ ಜನರ ಮನಸ್ಸು ಅದರ ಕಡೆಗೆ ಹರಿಯ ಹತ್ತಿತು. ರೋಗಿಯ ಮೇಲಿದ್ದ ಅವರ ಸಿಟ್ಟು ಎಲ್ಲಿಯೋ ಮಾಯವಾಗಿ ಹೋಯಿತು! ನಾವು ಮಡಿಯಿಂದಿರುವೆವೆಂಬ ಅರಿವೇ ಇಲ್ಲದಾಯಿತು. ಕೂಡಲೆ ಅವರು ಆ ಬಂಗಾರದ ಗಟ್ಟಿಗಳನ್ನು ತೆಗೆದುಕೊಳ್ಳಲಿಕ್ಕೆ ಒಬ್ಬರಿಗೊಬ್ಬರು ಗುದ್ದ್ಯಾಡಲಿಕ್ಕೆ ಹತ್ತಿದರು.

ಆಗ ರೋಗಿಯು:—ಅಪ್ಪಗಳಿರಾ, ಈ ದೇಹವನ್ನು ಭಕ್ಷಿಸಿದರೆ ಅಪ ವಿತ್ರರಾಗುವ ನೀವೇ ಘನರೋಗಿಯ ಅಮೇಧ್ಯಕ್ಕೆ ಎಷ್ಟು ಬಡಿದಾಡುವಿರಿ? ನನಗೆ ನಾಚಿಕೆಗೇಡಿ ಎಂದು ತಾವೇ ಅಂದಿರುವಿರಿ. ಈಗ ಮಾತ್ರ ತಾವು ಮರ್ಯಾದೆಯುಳ್ಳವರೂ, ಶ್ರೇಷ್ಠವಾದ ಬ್ರಹ್ಮಜಾತಿಯವರೂ ಆಗಿರುವಿ ರಲ್ಲವೇ? ಎಂದು ಎಲ್ಲರನ್ನೂ ನಾಚಿಸುತ್ತ ಶ್ರೀ ಕಾಳಿಕಾದೇವಿಯ ಆಲಯ ದೊಳಗೆ ನುಗ್ಗಿ ಅದೃಶನಾಗಿ ಹೋದನು. ಆತನು ಅದೃಶ್ಯವಾದಂತೆ ಬಂಗಾ ರದ ಗಟ್ಟಿಗಳೂ ಅದೃಶ್ಯವಾದವು।

ನೆರೆದವರೆಲ್ಲರೂ ಆತನ ಕೃತಿಯನ್ನು ನೋಡಿ ಬೆರಗಾಗಿ:—ಅಕಟಾ! ಮೌನೇಶನು ಘನರೋಗಿಯಾಗಿ ನಮ್ಮ ದೃಢವನ್ನು ಪರೀಕ್ಷಿಸಲಿಕ್ಕಾಗಿ ಬಂದಿದ್ದನು. ಆ ಪರಮ ಗುರುವಿನ ಮಹಿಮೆಯನ್ನು ಅರಿಯದಾದೆವಲ್ಲಾ? ಎಂದು ಚಿಂತಿಸುತ್ತ:—ದೇವಾ! ಅಜ್ಞಾನಿಗಳಾದ ನಮ್ಮ ಅಪರಾಧಗಳನ್ನು ಕ್ಷಮಿಸಿ ಪುನಃ ನಿನ್ನ ದರುಶನವನ್ನು ಕೊಟ್ಟು ಕಾಪಾಡು! ಎಂದು ಮೌನೇ ಶ್ವರನನ್ನು ಧ್ಯಾನಿಸುತ್ತಿದ್ದರೆಂಬಲ್ಲಿಗೆ ಹತ್ತನೇ ಅಧ್ಯಾಯ ಸಂಪೂರ್ಣವು.

ಶ್ರೀ ಮೌನಗುರು ಪರಬ್ರಹ್ಮಣೇ ನಮಃ॥
ಶ್ರೀ ಗಣೇಶಾಯ ನಮಃ॥

# ಹನ್ನೊಂದನೆಯ ಅಧ್ಯಾಯ.



## ಲಿಂಗನಭಂಡಿಯಲ್ಲಿ ಮಹಾತ್ಮೆ ತೋರಿಸಿದ್ದು.

ಶ್ರೀಭಗವಂತನು ಭಕ್ತಜನರ ಉದ್ಧಾರಕ್ಕಾಗಿ ಭೂಲೋಕದಲ್ಲಿ ಅನೇಕ ರೂಪಿನಿಂದ ಅಲ್ಲಲ್ಲಿ ವಾಸಿಸಿರುವನು. ಅಂಥ ಸ್ಥಳಕ್ಕೆ ಪುಣ್ಯಕ್ಷೇತ್ರವೆಂತಲೂ, ಅನ್ನುತ್ತಿರುವರು. ಇಂಥ ಕ್ಷೇತ್ರಗಳಲ್ಲೊಂದಾದ ತಿರುಪತಿಕ್ಷೇತ್ರವು ಭೂಲೋಕದ ವೈಕುಂಠವೆಂದು ಹೆಸರಾಗಿರುವದು. ಇದಕ್ಕೆ ಶೇಷಗಿರಿ ಎಂತಲೂ, ವೆಂಕಟಗಿರಿಯೆಂತಲೂ ಅನ್ನುತ್ತಿರುವರು. ಶ್ರೀ ವೇಂಕಟೇಶ್ವರನ ರಥೋತ್ಸವಕ್ಕೆ ಬಹು ದೂರದಿಂದ ಭಕ್ತಜನರು ಬರುತ್ತಿರುವರು. ಪರಿಶೆಯೆಲ್ಲವೂ ಪ್ರಥಮದಲ್ಲಿ ಗೋವಿಂದರಾಯನ ಪಟ್ಟಣಕ್ಕೆ ಬಂದು ಅಲ್ಲಿ ದೇವರ ದರ್ಶನ ತಕ್ಕೊಂಡು ಅನಂತರ ಗಿರಿಯನ್ನು ಹತ್ತಿ ವೆಂಕಟಪತಿಯ ಉತ್ಸವಕ್ಕೆ ತೆರಳುವದು. ಗಿರಿಯನ್ನು ಹತ್ತಲಿಕ್ಕೆ ಶಕ್ತಿಯಿಲ್ಲದವರನ್ನು ಅಲ್ಲಿಯ ಜನರು ಮೇಣೆಯಲ್ಲಿ ತೆಗೆದುಕೊಂಡು ಹೋಗಿ ಸ್ವಾಮಿಯ ದರ್ಶನ ಮಾಡಿಸುತ್ತಿರುವರು. ವೆಂಕಟರಮಣನ ಪೂಜಾವಿನಿಯೋಗವಾದರೂ ಬಹು ವಿಜೃಂಭಣೆಯಿಂದ ನೆರವೇರುತ್ತಿರುವದು. ಆ ಶ್ರೀನಿವಾಸನ ಆಲಯದ ದ್ವಾರಕ್ಕೆ ಬಂಗಾರದ ತಗಡನ್ನೇ ಹೊಂದಿಸಿರುವರೆಂದ ಮೇಲೆ ಅಲ್ಲಿಯ ವೈಭವವನ್ನು ಎಷ್ಟೆಂದು ಹೇಳಬೇಕು? ಅದು ವರ್ಣಿಸಲಿಕ್ಕೆ ಅಸಾಧ್ಯವೇ ಆಗಿರುವದು. ಇರಲಿ.

ಎಂದಿನಂತೆ ನವರಾತ್ರಿಯು ಬರಲು, ಮೇಲೆ ಹೇಳಲ್ಪಟ್ಟ ತಿರುಪತಿ ಯಾತ್ರೆಗೆ ಜನ ಸಮೂಹವು ಬರಲಿಕ್ಕೆ ಹತ್ತಿತು. ಗೋಸಾವಿಗಳಂತೂ ಗುಂಪುಗುಂಪಾಗಿ ತೆರಳುತ್ತಿದ್ದರು. ಪರಿಶೆಯೆಲ್ಲವೂ ಗೋವಿಂದ, ಗೋವಿಂದ,

ಎಂದು ಉಚ್ಚರಿಸುತ್ತ 'ಲಿಂಗನಭಂಡಿ' ಎಂಬ ಗ್ರಾಮದ ಹತ್ತರ ಬರಲು, ಅಲ್ಲಿ ಒಬ್ಬ ವ್ಯಕ್ತಿಯು ನಿಂತಿದ್ದನು. ಅವನ ವಯಸ್ಸು ಇಪ್ಪತ್ತು ಅಥವಾ ಇಪ್ಪತ್ತೆರಡು ಆಗಿರಬಹುದು. ದೇಹದ ಬಣ್ಣವು ನೀರಲಹಣ್ಣಿನಂತಿತ್ತು. ಕೈಕಾಲುಗಳು ಸಣ್ಣಾಗಿದ್ದವು. ಹೊಟ್ಟೆಯು ದೊಡ್ಡದಾಗಿತ್ತು. ಕಣ್ಣುಗಳು ಗುಲಗಂಜಿಯಂತೆ ಕೆಂಪಾಗಿದ್ದವು. ಅವನ ಮೈ ಮೇಲೆ ಕೌಪೀನದ ಹೊರ್ತು ಯಾವ ಬಟ್ಟೆಗಳೂ ಇದ್ದಿಲ್ಲ.

ಹೀಗಿರುವ ಆ ವ್ಯಕ್ತಿಯು ಗಿರಿಗೆ ತೆರಳುವ ಜನಸಮೂಹವನ್ನು ನೋಡಿ ಕೈ ಚಪ್ಪಾಳೆ ಹೊಡೆದು ನಗುತ್ತ—ಸ್ವಾಮಿ, ನೀವೆಲ್ಲರೂ ಹೀಗೇಕೆ ಕೂಗುತ್ತೀರಿ? ಹಿಂಡುಗಟ್ಟಿಕೊಂಡು ಎಲ್ಲಿಗೆ ಹೋಗುವಿರಿ? ಇಲ್ಲಿ ಸ್ವಲ್ಪ ನಿಲ್ಲಿರಿ. ನನ್ನೊಡನೆ ನಿಜ ಸಂಗತಿಯನ್ನು ಹೇಳಿರಿ, ಎಂದು ಕೇಳಿದನು. ಗೋಸಾವಿಗಳು ಇವನು ಹುಚ್ಚನೆಂದು ತಿಳಿದು ಅವನ ಮಾತಿಗೆ ನಗುತ್ತ ಪ್ರತ್ಯುತ್ತರವನ್ನು ಹೇಳದೆ ಸುಮ್ಮನೆ ಹೋಗುತ್ತಿದ್ದರು. ಆಗ ಆ ವ್ಯಕ್ತಿಯು ಹೋಗುತ್ತಿರುವ ಗೋಸಾವಿಗಳನ್ನು ಅಡ್ಡ ತರುಬಿ—ಸ್ವಾಮಿ, ಎಲ್ಲಿಗೆ ಹೋಗುತ್ತೀರೆಂದು ಕೇಳಿದರೆ ಸುಮ್ಮನೆ ಹೋಗುತ್ತಿರುವಿರಲ್ಲ? ನಿಮ್ಮ ಕಿವಿಗಳು ಕೇಳುವದೇ ಇಲ್ಲವೇ? ಗಂಟಲು ಒಡೆಯುವ ಹಾಗೆ ಕೂಗಿದರೂ ಅಲಕ್ಷ್ಯ ಮಾಡಿ ಹೋಗುವಿರಲ್ಲ! ಹಾಗೆ ಮಾತ್ರ ಮಾಡಬೇಡಿರಿ. ದಯಮಾಡಿ ನೀವು ಹೋಗುವ ಸ್ಥಲವನ್ನು ಹೇಳಿರಿ, ಎಂದನು.

ಅವರಲ್ಲೊಬ್ಬ ಗೋಸಾವಿಯು—ಎಲೋ ಹುಚ್ಚನೇ, ತಿರುಪತಿಗೆ ಹೋಗುತ್ತಿರುವರೆಂಬದು ನಿನಗೆ ಗೊತ್ತೇ ಇಲ್ಲವೇ? ವೈಕುಂಠವಾಸಿಯಾದ ಶ್ರೀಮನ್ನಾರಾಯಣನು ಆ ಗಿರಿಯಲ್ಲಿ ವಾಸಿಸಿರುವನು; ಪರಿಶೆಯಲ್ಲವೂ ಆತನ ನಾಮಸ್ಮರಣೆ ಮಾಡುತ್ತ ತೆರಳುತ್ತಿರುವದು. ನಾವೂ ಸಹ ಆ ಶ್ರೀಪತಿಯನ್ನು ಸೇವಿಸಿ, ಪಾಪನಿವಾರಣ ಮಾಡಿಕೊಳ್ಳಲಿಕ್ಕಾಗಿ ಹೋಗುವೆವು. ನೀನೂ ಬರುವ ಹಾಗಿದ್ದರೆ ಬಾ.

ವ್ಯಕ್ತಿ—ಅಂಥ ಪಾಪವನ್ನು ನೀವೇನು ಮಾಡಿರುವಿರಿ?

ಗೋಸಾವಿ—ಮರುಳೇ, ಲೋಕದಲ್ಲಿ ಪಾಪಕಾರ್ಯ ಮಾಡದ ಮನುಷ್ಯನು ದೊರೆಯುವದು ದುರ್ಲಭವಲ್ಲವೇ? ಎಂಥವರಿಂದಾದರೂ ಅಪ್ಪಿತಪ್ಪಿ ಪ್ರಮಾದಗಳು ಉಂಟಾಗಿಯೇ ಆಗುತ್ತವೆ; ಅವುಗಳ ನಿವಾರಣಕ್ಕಾಗಿಯೇ

ಪುಣ್ಯ ಕ್ಷೇತ್ರಗಳ ಯಾತ್ರೆ ಮಾಡಬೇಕೆಂತಲೂ, ಪವಿತ್ರ ತೀರ್ಥಗಳ ಸ್ನಾನ ಮಾಡಬೇಕೆಂತಲೂ ಪೂರ್ವಿಕರು ಬರೆದಿಟ್ಟಿರುವರು. ಅವುಗಳೆಲ್ಲ ನಿನಗೆ ಹೇಗೆ ಗೊತ್ತಾಗಬೇಕು?

ವ್ಯಕ್ತಿ—ಅಹುದು ಸ್ವಾಮಿ ಅಂಥ ಶಾಸ್ತ್ರವೆಲ್ಲ ಕಾಡು ಮನುಷ್ಯನಾದ ನನಗೇನು ಗೊತ್ತು? ತಮ್ಮಂಥವರಿಂದ ತಿಳಿದುಕೊಳ್ಳಬೇಕೆಂತಲೇ ಹೀಗೆ ಕೇಳುವೆನು; ಆದರೆ ತೀರ್ಥ ಕ್ಷೇತ್ರಗಳ ಯಾತ್ರೆ ಮಾಡುವದರಿಂದ ಮನುಷ್ಯನ ಪಾಪ ಸಮೂಹವು ನಾಶವಾಗುತ್ತದೆಂದ ಮೇಲೆ ಪಾಪ ಮಾಡತಕ್ಕವರು ಹೆದರಬೇಕಾದ ಕಾರಣವೇ ಇಲ್ಲವಲ್ಲವೇ? ನಾನು ಇದುವರೆಗೂ ಅನೇಕ ಪಾಪಕಾರ್ಯಗಳನ್ನು ಮಾಡಿರುವೆನಾದ್ದರಿಂದ ಯಮಲೋಕದಲ್ಲಿ ಯಾವ ಶಿಕ್ಷೆಯಾಗುವದೋ ಎಂದು ಹೆದರಿದ್ದೆನು. ನೀವು ಹೇಳುವ ಸುಲಭೋಪಾಯವನ್ನು ಕೇಳಿ ಆ ಹೆದರಿಕೆಯೇ ತಪ್ಪಿಹೋಯಿತು. ಮನುಷ್ಯನು ಪಾಪಮಾಡದೆ ಇರುವದಿಲ್ಲವೆಂದ ಮೇಲೆ ನನ್ನಂತೆ ನೀವೂ ಪಾಪಿಷ್ಠರೇ ಇರುವಿರಲ್ಲವೇ?

ಗೋಸಾವಿ ಸ್ವಲ್ಪ ಸಿಟ್ಟಿನಿಂದ—ಮೂಢನೇ, ಬೆರಳನ್ನು ತೋರಿಸಿದರೆ ಹಸ್ತವನ್ನೇ ನುಂಗಿದರೆಂಬ ಗಾದೆಯಂತೆ, ನಮ್ಮನ್ನೇ ಸುತ್ತುಹಾಕಿಕೊಳ್ಳುವೆಯಲ್ಲ! ಎಲ್ಲರನ್ನೂ ನಿನ್ನಂತೆಯೇ ತಿಳಿದುಕೊಂಡಿರುವೆಯೇನು?

ವ್ಯಕ್ತಿ:—ಸ್ವಾಮಿ, ತಾವು ಹೀಗೆ ಹೇಳಿದ್ದರ ಮೇಲಿಂದಲೇ ಹಾಗೆ ಅಂದೆನು. ಇದರಲ್ಲಿ ನನ್ನದೇನು ತಪ್ಪಿದೆ? ಹಾಗಿದ್ದರೆ ಮಾತ್ರ ಕ್ಷಮಿಸಿರಿ.

ಗೋಸಾವಿ:—ಸ್ವಲ್ಪ ಎಚ್ಚರದಿಂದ ಮಾತಾಡು! ಏನಾದರೂ ಸಣ್ಣ ಪುಟ್ಟ ದೋಷಗಳಿದ್ದರೆ ತೀರ್ಥ-ಕ್ಷೇತ್ರಗಳ ಯಾತ್ರೆಯಿಂದ ನಿವಾರಣವಾದಾವು. ಮಾಡಬಾರದ ಭಯಂಕರ ದೋಷಗಳನ್ನು ಮಾಡಿದ್ದರೆ ಅವು ಹೇಗೆ ನಿವಾರಣವಾದಾವು? ಅದನ್ನೆಲ್ಲ ಹೇಳುತ್ತ ನಿಲ್ಲಲಿಕ್ಕೆ ನಮಗೆ ವೇಳೆಯಿಲ್ಲ, ಅಜ್ಞಾನಿಯಾದ ನಿನ್ನ ಕೂಡ ಮಾತಾಡುವದೇ ಯೋಗ್ಯವಲ್ಲ.

ಹೀಗೆ ಅನ್ನುತ್ತ ಗೋಸಾವಿಯು ಆ ಸ್ಥಳವನ್ನು ಬಿಟ್ಟು ಮುಂದಕ್ಕೆ ತನ್ನ ದಾರಿಯನ್ನು ಹಿಡಿದನು. ಆತನ ಸಂಗಡಿಗರಾದ ಗೋಸಾವಿಗಳು:—ಸ್ವಾಮಿ, ತಾವು ದೊಡ್ಡವರು. ಆ ಹುಚ್ಚನ ಕೂಡ ಮಾತಾಡತಕ್ಕದ್ದೇ

ಇದ್ದಿಲ್ಲ; ಯಾಕಂದರೆ ಮೂರ್ಖರಾದವರು ಹೆಚ್ಚು-ಕಡಿಮೆಗಳೆಂಬ ವಿಚಾರ ವಿಲ್ಲದೇ ಮನಬಂದ ಹಾಗೆ ಮಾತಾಡುತ್ತಿರುವರು, ಎಂದು ಅನ್ನುತ್ತ ಗೋಸಾವಿಯು ಕೂಡ ತೆರಳಿದರು.

ಅಷ್ಟರಲ್ಲಿ ಆ ವ್ಯಕ್ತಿಯು ಪುನಃ ಅವರ ಎದುರಾಗಿ ಹೋಗಿ:— ಸ್ವಾಮಿ, ಸಿಟ್ಟಾಗಿ ಹೋಗಬೇಡಿರಿ. ನಾನು ಅಂದದ್ದನ್ನು ಮನಸ್ಸಿನಲ್ಲಿ ಹಿಡಿಯದೆ, ಈ ಸೇವಕನ ಮೇಲೆ ದಯವಿಟ್ಟು ನೀವು ಹೋಗುವ ಸ್ಥಳವಾವುದು? ಅಲ್ಲಿಯ ದೇವರಾವುದು? ಎಂಬದನ್ನು ಇನ್ನೊಂದಾವರ್ತಿ ಸ್ಪಷ್ಟವಾಗಿ ಹೇಳಿರಿ. ಇದಲ್ಲದೆ ಆ ದೇವರ ಮಹಿಮೆಗಳಲ್ಲಿಯ ಒಂದೆರಡು ಮಹಿಮೆಗಳನ್ನು ಹೇಳಿ ನನ್ನನ್ನು ಧನ್ಯನನ್ನಾಗಿ ಮಾಡಿರಿ, ಎಂದು ಕೇಳಿದನು.

'ಮೃದುವಾಕ್ಯಗಳು ಮನಸ್ಸನ್ನು ಕರಗಿಸುವವು; ಕಠಿಣ ವಾಕ್ಯಗಳು ಕೋಪವನ್ನು ಹುಟ್ಟಿಸುವವು.' ಎಂದು ಹೇಳುವ ಹಿರಿಯರ ಮಾತು ಸುಳ್ಳಲ್ಲ. ಅದರಂತೆ ಆ ವ್ಯಕ್ತಿಯ ಮೃದುವಾಕ್ಯಗಳಿಗೆ ಗೋಸಾವಿಯ ಮನಸ್ಸು ಕರಗಿ:—ಎಲೋ ಹಚ್ಚನೇ, ನಿನ್ನ ಆಗ್ರಹದಿಂದ ಇನ್ನೊಂದಾವರ್ತಿ ಹೇಳುವೆವು. ಕೇಳು. ನಾವು ಹೋಗುವದು ತಿರುಪತಿಯು. ಅಲ್ಲಿಯ ದೇವರು ವೆಂಕಟಪತಿಯು. ಆತನ ಮಹಿಮೆಗಳನ್ನು ಎಷ್ಟೆಂದು ಹೇಳಬೇಕು? ದುಷ್ಟರನ್ನು ಶಿಕ್ಷಿಸುವದರಲ್ಲಿಯೂ, ಶಿಷ್ಟರನ್ನು ರಕ್ಷಿಸುವದರಲ್ಲಿಯೂ ಆ ಶ್ರೇಷ್ಠ ದೇವನು ಹೆಸರಾಗಿ ಹೋಗಿರುವನು. ಕರುಣಸಾಗರನಾದ ಆ ಸ್ವಾಮಿಯು ಪೂರ್ವದಲ್ಲಿ ಮದೋನ್ಮತ್ತನಾದ ಹಿರಣ್ಯಕಶಿಪುವನ್ನು ಸಂಹರಿಸಿ ತನ್ನನ್ನು ಸ್ಮರಿಸುತ್ತಿರುವ ಪ್ರಲ್ಹಾದನನ್ನು ರಕ್ಷಿಸಿದನು. ರಾವಣನೇ ಮುಂತಾದ ಅನೇಕ ರಾಕ್ಷಸರನ್ನು ನಾಶಮಾಡಿ ಮರೆಹೊಕ್ಕ ವಿಭೀಷಣನಿಗೆ ಲಂಕಾಧಿಪತ್ಯವನ್ನು ಕೊಟ್ಟು ಕಾಪಾಡಿದನು. ಸರೋವರದಲ್ಲಿರುವ ಕ್ರೂರ ಮೊಸಳೆಯನ್ನು ಸೀಳಿಹಾಕಿ ತನ್ನನ್ನು ಧ್ಯಾನಿಸುತ್ತಿರುವ ಗಜೇಂದ್ರನನ್ನು ರಕ್ಷಿಸಿದನು. ಕೌರವನ ಸಭೆಯಲ್ಲಿ ಸೀರೆಯನ್ನು ಸೆಳೆಯುವಾಗ್ಗೆ ಯಾರೂ ದಿಕ್ಕಿಲ್ಲವೆಂದು ತನ್ನನ್ನು ಧ್ಯಾನಿಸುತ್ತಿರುವ ದ್ರೌಪದಿಯ ಸೀರೆಯು ಅಕ್ಷಯ್ಯವಾಗಲೆಂದು ಅನುಗ್ರಹಮಾಡಿ, ಮರ್ಯಾದೆಯನ್ನು ಕಾಯ್ದನು. ಗೌತಮರ ಶಾಪದಿಂದ ಎಷ್ಟೋ ದಿವಸ ಕಲ್ಲಾಗಿ ಬಿದ್ದಿರುವ ಅಹಲ್ಯಾದೇವಿಯನ್ನು ಪಾದಾಂಗುಷ್ಟ ಸ್ಪರ್ಶದಿಂದ ಶಾಪನಿವೃತ್ತಿ ಮಾಡಿ ಪತಿಯನ್ನು ಕೂಡಿಸಿ

ಕಾಪಾಡಿದನು. ಐದು ವರುಷದ ಬಾಲಕನಾದ ಅನಾಥ ಧ್ರುವನಿಗೆ ಚಿರಂಜೀವಿತ್ವವನ್ನು ಕೊಟ್ಟು ಸ್ಥಿರಪದವಿಯನ್ನಿತ್ತು ರಕ್ಷಿಸಿದನು.

ಈ ಮೇರೆಗೆ ಆತನ ಮಹಿಮೆಗಳು ಒಂದಲ್ಲ, ಎರಡಲ್ಲ ಅಸಂಖ್ಯಗಳಾಗಿರುವವು. ಅವುಗಳನ್ನು ಹೇಳಲಿಕ್ಕೆ ಆದಿಶೇಷನಿಗಾದರೂ ಅಶಕ್ಯವಾಗಿರುವದು. ನೀನು ಆ ಕ್ಷೇತ್ರಕ್ಕೆ ಬಂದು, ಆ ಪರಮಾತ್ಮನ ದರುಶನ ಮಾಡಿಕೊಂಡರೆ ನಿನಗಾದರೂ ಆತನ ಕೆಲವು ಮಹಿಮೆಗಳು ಮನವರಿಕೆಯಾಗುವವು, ಎಂದು ಹೇಳಿದನು. ಗೋಸಾವಿಯು ಈ ಮಾತುಗಳನ್ನು ಕೇಳಿ, ವ್ಯಕ್ತಿಯು:—ಮಹಾಸ್ವಾಮಿ, ತಮ್ಮ ಸದ್ಬೋಧೆಯಿಂದ ನನ್ನ ಅಜ್ಞಾನವು ನಾಶವಾಗಿ ನನಗೂ ಅಲ್ಲಿಗೆ ಬರಬೇಕೆಂಬ ಬುದ್ಧಿಯು ಉತ್ಪನ್ನವಾಗಿದೆ; ನಿಮ್ಮ ಮಾತಿನಂತೆ ನಾನೂ ಆ ಸ್ಥಳಕ್ಕೆ ಬಂದರೆ, ಆ ವೆಂಕಟಪತಿಯು ನಾನು ಬೇಡಿದ ವರಗಳನ್ನು ಕೊಡುವನೇನು?

ಗೋಸಾವಿ:—ಎಲೋ, ದೇಹದಂಡನೆ ಮಾಡದೆ ದೇವರು ವರವನ್ನು ಹೇಗೆ ಕೊಡುವನು?

ವ್ಯಕ್ತಿ — ಸ್ವಾಮಿ, ದೇಹದಂಡನೆ ಎಂದರೆ ಹಗುರಾದದ್ದೋ ಕಠಿಣವಾದದ್ದೋ?

ಗೋಸಾವಿ—ಅಷ್ಟೇನೂ ಕಠಿಣವಿಲ್ಲ. ಗಿರಿಯನ್ನು ಹತ್ತಿ ಹೋಗಿ ಆ ಪರಮಾತ್ಮನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕುತ್ತ ಭಕ್ತಿಪೂರ್ವಕವಾಗಿ ಧ್ಯಾನಿಸುತ್ತಿದ್ದರೆ ಇಪ್ಪತ್ತೊಂದನೇ ದಿನ ಸ್ವಪ್ನದಲ್ಲಿ ಬಂದು ನಿನ್ನ ಅಭೀಷ್ಟೆಯನ್ನು ಪೂರ್ಣ ಮಾಡುವನು.

ವ್ಯಕ್ತಿ—ಅಪ್ಪಗಳಿರಾ, ನಾನು ಹುಚ್ಚನಿರುವದರಿಂದ ಗಿರಿಯನ್ನೇರಿ ಹೋಗಿ, ನೀವು ಹೇಳಿದಂತೆ ಸೇವೆಯನ್ನು ಮಾಡುವದು ನನ್ನಿಂದಾಗುವದಿಲ್ಲ. ದಯಮಾಡಿ ಆತನನ್ನು ಇಲ್ಲಿಯವರೆಗೂ ಕರೆತಂದು, ನಾನು ಬೇಡಿದ ವರವನ್ನು ಕೊಡಿಸಿ ಪುಣ್ಯಕಟ್ಟಿಕೊಳ್ಳಿರಿ.

ಗೋಸಾವಿ—ಎಲ್ಲ ದೇವರ ದೇವನಾದ ಆತನನ್ನು ನೀನಿದ್ದಲ್ಲಿಗೆ ಕರೆತರುವದು ಯಾರಿಂದಾದೀತು? ಮುಗ್ಧನಾದ ನಿನ್ನೊಡನೆ ಮಾತಾಡಿದರೆ ಪ್ರಯೋಜನವೇನು? ಎಂದು ತನ್ನ ಸಂಗಡಿಗರೊಡನೆ ಮುಂದಕ್ಕೆ ತೆರಳಿದನು.

ಆಗ ವ್ಯಕ್ತಿಯು – ಗೋಸಾವಿಗಳೇ, ನಾನಂತೂ ಮುಗ್ಧನು. ಜಾಣರಾದ ನೀವು ದೇವರನ್ನು ತೋರಿಸದೆ ಹೀಗೇಕೆ ಹೋಗುವಿರಿ? ಮುಂದಕ್ಕೆ ಒಂದು ಹೆಜ್ಜೆಯನ್ನಿಟ್ಟರೆ ನಿಮಗೆ ವೆಂಕಟಪತಿಯ ಪಾದದಾಣೆ ಇರುವದು.

ವ್ಯಕ್ತಿಯು ಹೀಗೆಂದ ಕೂಡಲೆ ಗೋಸಾವಿಗಳ ಸಮೂಹವು ಸಿಟ್ಟಿನಿಂದ ಹಿಂದಿರುಗಿ ಬಂದು ಅವನ ಕಪಾಳದ ಮೇಲೆ ಹೊಡೆದು, ಅಲ್ಲಿಯೇ ಒಂದು ಗಿಡಕ್ಕೆ ಕಟ್ಟಿಹಾಕಿ—ಎಲೋ, ನಮಗೆ ಆಣೆಯನ್ನಿಕ್ಕಿದ ನೀನು ದೇವರನ್ನು ಕರೆತಂದು ತೋರಿಸು; ಇಲ್ಲವಾದರೆ ನಿನ್ನನ್ನು ಇನ್ನೂ ಚನ್ನಾಗಿ ಶಿಕ್ಷಿಸುವೆವು.

ವ್ಯಕ್ತಿ—ಅಪ್ಪಗಳಿರಾ, ನಾನೊಬ್ಬ ಪರದೇಶಿಯು. ಸುಮ್ಮನೆ ನನ್ನನ್ನು ಹೀಗೇಕೆ ಬಂಧನಪಡಿಸುತ್ತೀರಿ? ಹುಚ್ಚನ ಮಾತನ್ನು ಪಟ್ಟಿಗೆ ತರಬೇಡಿರಿ. ದಯಮಾಡಿ ಬಿಟ್ಟುಬಿಡಿರಿ. ಹುಚ್ಚನ ಬುದ್ಧಿಯು ಸ್ವಾಧೀನವಿರುವದಿಲ್ಲವೆಂಬುದನ್ನು ನೀವೇನು ಅರಿಯದವರೇ? ಈಗ ಮಾತ್ರ ನನ್ನ ಬುದ್ಧಿಯು ಸ್ವಲ್ಪ ನಿಚ್ಚಳವಾದ ಹಾಗೆ ಕಾಣುತ್ತದೆ. ಮುಂದಾದರೂ ಇದೇ ರೀತಿಯಿಂದಿದ್ದರೆ ನಿಮ್ಮ ಹಾಗೆ ನಾನೂ ಜಾಣನಾಗುತ್ತೇನೆ.

ಗೋಸಾವಿಗಳು:—ಹುಚ್ಚಾ, ಒಂದೆರಡು ಪೆಟ್ಟುಗಳು ಬಿದ್ದದರಿಂದ ಇಷ್ಟಾಯಿತು. ಇನ್ನೂ ಹೆಚ್ಚಿಗೆ ಪೆಟ್ಟುಗಳು ಬಿದ್ದರೆ ಪೂರಾ ಬುದ್ಧಿಶಾಲಿಯಾಗುವಿ. ಇರಲಿ. ನಿನ್ನ ಕುಚೇಷ್ಟೆಯನ್ನು ಬಿಟ್ಟು, ದೇವರನ್ನು ತೋರಿಸು; ಇಲ್ಲವಾದರೆ ನಿನ್ನ ಗತಿಯು ನೆಟ್ಟಗಾಗಲಿಕ್ಕಿಲ್ಲ.

ವ್ಯಕ್ತಿ:—ಮಹನೀಯರೇ, ನಾನೇನು ಚೇಷ್ಟೆ ಮಾಡುವೆನು? ನಿಮ್ಮ ಹಾಗೆ ಬುದ್ಧಿಶಾಲಿಯಾಗಬೇಕೆನ್ನುವದೇ ನನ್ನ ಇಚ್ಛೆಯು; ಯಾಕೆಂದರೆ ನಿಮಗೆ ವೆಂಕಟರಮಣನು ಆಗಿಂದಾಗ್ಗೆ ಭೆಟ್ಟಿಯಾಗುತ್ತಿರುವನು. ನಮ್ಮಂಥ ಪಾಮರರಿಗೆ ಆತನು ಹೇಗೆ ಕಾಣುವನು?

ಗೋಸಾವಿಗಳು:—ಎಲೋ ಮೂರ್ಖನೇ, ಸುಮ್ಮನೆ ಹೊತ್ತು ಕಳೆಯಬೇಡ. ದೇವರನ್ನು ತೋರಿಸಲಿಕ್ಕೆ ಏನೆನ್ನುವಿ?

ವ್ಯಕ್ತಿ:—ಅಹುದಹುದು. ನಾನಂತೂ ಮೂರ್ಖನು. ಪ್ರೌಢರಾದ ನೀವು ದೇವರನ್ನು ತೋರಿಸೆಂದು ನನ್ನನ್ನೇ ಕೇಳಿದ ಮೇಲೆ, ನನಗಿಂತಲೂ ನೀವು ಮೂರ್ಖರಲ್ಲವೆ?

ಗೋಸಾವಿಗಳು ಸಿಟ್ಟಿನಿಂದ:—ಇವನನ್ನೇನು ನೋಡುವಿರಿ? ಆಳಿಗೊಂದು ಗುದ್ದು ಹಾಕಿರಿ; ಇವನ ಯೋಗ್ಯತೆ ಏನು? ಇವನ ಚೇಷ್ಟೆ ಏನು? ಎಂದು ಎಲ್ಲರೂ ಮುತ್ತಿಕೊಂಡು ಗುದ್ದಲಿಕ್ಕೆ ಹತ್ತಿದರು.

ಆಗ ವ್ಯಕ್ತಿಯು ಅಳುತ್ತ:—'ಅಕಟಾ! ಪುಣ್ಯಕ್ಷೇತ್ರವಾದ ತಿರುಪತಿಗೆ ಹೋಗುವವರಲ್ಲಿಯೂ ಸಹ ಇಂಥ ಅನ್ಯಾಯವೇ? ಪರದೇಶಿಯಾದ ನನ್ನನ್ನು ರಕ್ಷಿಸುವವರು ಯಾರೂ ಇಲ್ಲದಾಯಿತೇ? ಕರುಣಾಸಾಗರನೆಂದು ಪ್ರಖ್ಯಾತಹೊಂದಿದ ವೆಂಕಟರಮಣಾ, ನೀ ನಾ ದ ರೂ ದಯವಿಟ್ಟು ಬೇಗನೆ ಬಂದು ನನ್ನ ಬಂಧನವನ್ನು ಬಿಡಿಸಿ ರಕ್ಷಿಸುವನಾಗು' ಎಂದು ಗಟ್ಟಿಯಾಗಿ ಕೂಗಿದನು.

ಆ ಕ್ಷಣವೇ ಶಿಲಾಮೂರ್ತಿಯಾದ ವೆಂಕಟೇಶನು ಗಿರಿಯನ್ನಿಳಿದು ಓಡಿ ಬಂದು ಆ ವ್ಯಕ್ತಿಯ ಪಾದಗಳಿಗೆ ನಮಸ್ಕರಿಸಿ:—ಸದ್ಗುರೋ, ನಿನ್ನ ಮಾಯಾ ನಟನೆಯನ್ನು ಅಜ್ಞಾನಿಗಳು ಅರಿಯುವ ಬಗೆಯಾದರೂ ಹೇಗೆ? ಸರ್ವಜ್ಞನಾದ ನೀನು ಇವರೆಲ್ಲರ ಅಪರಾಧಗಳನ್ನು ಕ್ಷಮಿಸಿ ಉದ್ಧರಿಸು! ಎಂದು ಹೇಳಿದನು.

ಆಗ ಎಲ್ಲ ಜನರು ಆಶ್ಚರ್ಯಭರಿತರಾಗಿ:—'ಆಹಾ! ಈತನು ಮರುಳನೆಂದು ನಾವು ಅನೇಕ ಪರಿಯಿಂದ ಬಾಧಿಸಿದೆವು. ಈತನು ಸಾಕ್ಷಾತ್ ಪರಬ್ರಹ್ಮನಿರುವನು' ಎಂದು ಆ ವ್ಯಕ್ತಿಯ ಪಾದಗಳಿಗೆ ನಮಸ್ಕರಿಸಿ–ಸ್ವಾಮಿ, ಮೂಢರಾದ ನಮ್ಮ ತಪ್ಪುಗಳನ್ನು ನೋ ಡ ದೆ ಕ್ಷಮಿಸಿ ಕಾಪಾಡು, ಕಾಪಾಡು! ಎಂದು ಬೇಡಿಕೊಂಡರು

ಆಗ ವ್ಯಕ್ತಿಯು ತನ್ನ ನಿಜರೂಪವಾದ ಮೌನರೂಪಿನಿಂದ ಪ್ರಕಟನಾಗಿ:—ಗೋಸಾವಿಗಳೇ, ನೀವು ಸ್ವಪ್ನದಲ್ಲಿ ಕಾಣುವನೆಂದು ಹೇಳಿದ ವೆಂಕಟೇಶನು ಈ ತ ನೋ ಅಥವಾ ಮತ್ತೊಬ್ಬನಿರುವನೋ ಚನ್ನಾಗಿ ನೋಡಿರಿ, ಎಂದೆನ್ನಲು,

ಗೋಸಾವಿಗಳು:—ಗುರುನಾಥ, ಪಾಮರರಾದ ನಮ್ಮ ಅಪರಾಧಗಳನ್ನು ಮನಸ್ಸಿನಲ್ಲಿ ಹಿಡಿಯದೆ ರಕ್ಷಿಸು, ರಕ್ಷಿಸು, ಎಂದು ಪುನಃ ಮೌನೇಶನ ಪಾದಗಳಿಗೆ ನಮಸ್ಕರಿಸಿದರು.

ಮೌನೇಶನು:—ಗೋಸಾವಿಗಳೇ, ದೃಢಭಕ್ತಿಯಿಲ್ಲದೆ ಸುಮ್ಮನೆ ಗೋವಿಂದ, ಗೋವಿಂದ ಎಂದು ಕೂಗಿದರೆ ಯಾವ ಪ್ರಯೋಜನವೂ ಆಗುವದಿಲ್ಲ. ಹಾಗೆ ಮಾಡದೆ ನೀವು ನಿರ್ಮಲ ಮನಸ್ಸಿನಿಂದ ಸ್ಮರಿಸಿದರೆ ಈ ಶ್ರೀಪತಿಯು ಯಾವಾಗಲೂ ನಿಮ್ಮ ಹತ್ತರವೇ ಇದ್ದು ನೀವು ಬೇಡಿದ್ದನ್ನು ಕೊಡುವನು. ಇದನ್ನು ಮಾತ್ರ ಮರೆಯಬೇಡಿರಿ, ಎಂದು ಹೇಳಿದನು.

ಗೋಸಾವಿಗಳೆಲ್ಲರೂ ಮೌನಗುರುವಿಗೂ ವೆಂಕಟಪತಿಗೂ ನಮಸ್ಕರಿಸಿ, ಧನ್ಯರಾದೆವೆಂದು ಅನ್ನುತ್ತ ಪುನಃ ಮೌನಗುರುವಿನ ಕೂಡ ಮಾತಾಡಬೇಕೆನ್ನುವಷ್ಟರಲ್ಲಿಯೇ ಮೌನೇಶನೂ, ವೆಂಕಟೇಶನೂ ಮಾಯವಾಗಿ ಹೋಗಿದ್ದರು. ಅದನ್ನು ನೋಡಿದ ಎಲ್ಲ ಜನರು ಮೌನಗುರುವಿನ ಮಹಿಮೆಯನ್ನು ಕೊಂಡಾಡುತ್ತ ವೆಂಕಟಗಿರಿಯ ಯಾತ್ರೆಯನ್ನು ಮಾಡಿ ತಿರುಗಿ ತಮ್ಮ ತಮ್ಮ ಸ್ಥಳಗಳಿಗೆ ಬಂದು ಸುಖದಿಂದಿದ್ದರೆಂಬಲ್ಲಿಗೆ ಹನ್ನೊಂದನೇ ಅಧ್ಯಾಯ ಸಂಪೂರ್ಣವು.



ಶ್ರೀ ಮೌನಗುರು ಪರಬ್ರಹ್ಮಣೇ ನಮಃ!

ಶ್ರೀ ಗಣೇಶಾಯ ನಮಃ!!

# ಹನ್ನೆರಡನೆಯ ಅಧ್ಯಾಯ



## ಲಕ್ಷ್ಮೇಶ್ವರದಲ್ಲಿ ಮಹಾತ್ಮೆ ತೋರಿಸಿದ್ದು.

ಸೌರಾಷ್ಟ್ರ ದೇಶದಲ್ಲಿ 'ಪುಲಗಿರಿ' ಎಂಬ ಪಟ್ಟಣವು. ಮೆರೆಯುತ್ತಿರುವದು. ಅಲ್ಲಿ ಸೋಮನಾಥ ಎಂಬ ದೇವರ ಗುಡಿಯು ಬಹು ಸುಂದರವಾಗಿ ಒಪ್ಪುತ್ತಿರುವದು. ಆ ಪಟ್ಟಣಕ್ಕೆ ಈಗ ಲಕ್ಷ್ಮೇಶ್ವರವೆಂದು ಅನ್ನುತ್ತಿರುವರು. ಆ ಪಟ್ಟಣದಲ್ಲಿ ಹಾಲುಮತದವರ (ಕುರುಬರ) ಜಾತಿಯಲ್ಲಿ ಪಿಡ್ಡವ್ವ ಎಂಬ

ಒಬ್ಬ ಮುದುಕೆಯು ಇದ್ದಳು. ಆಕೆಯು ಅತ್ಯಂತ ಬಡವೆಯೂ, ಅನಾಥಳೂ, ಪಾಪಿಷ್ಠಳೂ ಆಗಿದ್ದಳು. ಆ ಮುದುಕೆಯು ಎರಡನೆಯವರ ಮನೆಯಲ್ಲಿ ಕುಟ್ಟಿ-ಬೀಸಿ ಹೊಟ್ಟೆಹೊರೆಯುತ್ತಿದ್ದಳು. ಕೂಲಿಯ ಕೆಲಸವು ಸಿಗದಿದ್ದಾಗ ಹಂಜಿಗಳನ್ನು ತಂದು ನೂತು, ಪಟ್ಟೆಗಳನ್ನು ಮಾಡಿ ಮಾರಿ ಕಾಲಕ್ಷೇಪ ಮಾಡುತ್ತಿದ್ದಳು. ಬರಬರುತ್ತ ಆಕೆಗೆ ಪೂರ್ವಕರ್ಮದ ಫಲದಿಂದ ಬಡತನವು ಹೆಚ್ಚಾಗಿ ಒಂದೊಂದು ದಿವಸ ಹೊಟ್ಟೆಗೆ ಅಶನವಿಲ್ಲದೆ ಉಪವಾಸ ಬೀಳುತ್ತಿದ್ದಳು. ಇಷ್ಟೇ ಅಲ್ಲ, ಆಕೆಯು ನೂಲುತ್ತಿರುವ ಕದುರು ಸಹ ಮುರಿದು ಹೋಗಿ, ಮತ್ತೊಂದು ಹೊಸ ಕದುರನ್ನು ತೆಗೆದುಕೊಳ್ಳಲಿಕ್ಕೆ ಒಂದು ಮುದ್ದಿಗೂ ಸಹ ಗತಿಯಿಲ್ಲದಂತಾದಳು. ಅಲ್ಪ ಸ್ವಲ್ಪ ಹಂಜಿಗಳು ಮನೆಯಲ್ಲಿದ್ದರೂ ನೂಲಲಿಕ್ಕೆ ಕದುರಿಲ್ಲದೆ ಇರುವದರಿಂದ ಮುದುಕಿಯು ಬಹು ಚಿಂತೆಗೊಳಗಾಗಿ:—ಅಕಟಾ! ನಿರ್ಭಾಗ್ಯಳಾದ ನಾನು ಬದುಕಿರುವದಕ್ಕಿಂತಲೂ ಸಾಯುವದೇ ಲೇಸಾಗಿದೆ, ಎಂದು ದುಃಖಿಸುತ್ತ ಜನರ ಬಾಯಿಂದ ಮೌನಗುರುವಿನ ಮಹಿಮೆಯನ್ನು ಕೇಳಿದ್ದು ನೆನಪಾಗಿ—ಗುರುನಾಥಾ, ನಾನು ಮಾಡಿದ ಪಾಪದ ಫಲವೇ ಈ ರೀತಿಯಾಗಿ ನನ್ನನ್ನು ದುಃಖಕ್ಕೆ ಗುರಿಮಾಡಿದೆ. ನೀನು ಅನಾಥರಕ್ಷಕನೆಂದು ಕೇಳಿದ್ದೇನೆ. ಈ ಕಾಲದಲ್ಲಿ ನನ್ನನ್ನು ರಕ್ಷಿಸಿ ನಿನ್ನ ಬಿರುದನ್ನು ಮೆರೆಯಿಸಬಾರದೇ? ಎಂದು ಮೌನೇಶ್ವರನನ್ನು ಧ್ಯಾನಿಸುತ್ತ ನೆಲದ ಮೇಲೆ ಬಿದ್ದುಕೊಂಡು ಕಣ್ಣೀರು ಸುರಿಸುತ್ತಿದ್ದಳು.

ಅಷ್ಟರಲ್ಲಿ ಆ ಮುದುಕೆಗೆ ಏನೋ ನೆನಪಾದಂತಾಗಿ ಥಟ್ಟನೆ ಮೇಲಕ್ಕೆದ್ದು ಮನೆಬಿಟ್ಟು ಹೊರಟು ಸೋಮನಾಥನ ಆಲಯಕ್ಕೆ ಬಂದಳು. ಆಗ ಅಲ್ಲಿ ಒಬ್ಬ ಕೇಣಿಕಾರನು ತನ್ನ ಸಾಮಾನುಗಳ ಅಂಗಡಿಯನ್ನು ಹಚ್ಚಿದ್ದನು. ಹೆಣ್ಣುಮಕ್ಕಳು ತಮಗೆ ಬೇಕಾದ ಜಿನಸುಗಳನ್ನು ತೆಗೆದುಕೊಂಡು ಕ್ರಯವನ್ನು ಕೊಡುತ್ತಿದ್ದರು. ಆ ಕೇಣಿಕಾರನ ಹತ್ತರ ಎಲ್ಲ ಸಾಮಾನುಗಳಿಗಿಂತಲೂ ಕದುರುಗಳೇ ವಿಶೇಷವಾಗಿದ್ದವು. ಅವುಗಳನ್ನು ಕಂಡು ನೂಲುವ ಹೆಣ್ಣುಮಕ್ಕಳು ತಮಗೆ ಬೇಕಾದಷ್ಟು ಕದುರುಗಳನ್ನು ತೆಗೆದುಕೊಂಡು ಕ್ರಯವನ್ನು ಕೊಡುತ್ತಿದ್ದರು. ಇದನ್ನೆಲ್ಲ ನೋಡಿದ ಕೂಡಲೆ ಪಿಡ್ಡವ್ವನಿಗಾದ ಆನಂದವನ್ನು ಹೇಳಲಾಗಲ್ಲ! ಆದರೂ ಕೈಯಲ್ಲಿ ಕಾಸಿಲ್ಲದೇ ಮಾಡು

ತ್ತಾಳೇನು? ಮನಸ್ಸಿನಲ್ಲಿಯೇ ಸಂತೋಷಪಡುತ್ತ ಸುಮ್ಮನೆ ನಿಂತಿದ್ದಳು ಕದುರು ಮಾತ್ರ ಬಹು ಉತ್ತಮವಾಗಿದ್ದವು ಕೇಣಿಕಾರನಾದರೂ ದಿನ ಹೋದವನಾದ್ದರಿಂದ ಜನರ ಕೂಡ ಶಾಂತಸ್ವಭಾವದಿಂದ ವರ್ತಿಸುತ್ತಿದ್ದನು ಶಿಡುಕು ಸ್ವಭಾವದ ಹೆಣ್ಣುಮಕ್ಕಳು—'ಇದಕ್ಕೇತಕ್ಕೆ ಇಷ್ಟು ಧಾರಣೆಯು? ನೀನೊಬ್ಬನು ಹೆಚ್ಚಿನವನು ಬಂದೆ" ಎಂದು ಮನಬಂದ ಹಾಗೆ ಮಾತಾಡಿದರೂ ಆದನು ಸಮಾಧಾನವೃತ್ತಿಯಿಂದ 'ಅಮ್ಮಗಳಿರಾ, ನಮ್ಮ ಸಾಮಾನುಗಳು ಸಾಮಾನ್ಯವಾದವುಗಳಲ್ಲ, ಬಹು ಉತ್ತಮವಾದವುಗಳು. ಒಂದಾವರ್ತಿ ತೆಗೆದುಕೊಂಡು ಪರೀಕ್ಷೆ ಮಾಡಿರಿ; ಅಂದರೆ ನಿಮಗೆ ಗೊತ್ತಾಗುವದು" ಎಂದು ಮೃದುವಾಕ್ಯಗಳಿಂದ ಅವರ ಮನಸ್ಸನ್ನು ಒಡಂಬಡಿಸಿ ಸಾಮಾನುಗಳನ್ನು ಕೊಡುತ್ತಿದ್ದನು.

ಇದನ್ನೆಲ್ಲ ನೋಡಿದ ಮುದುಕೆಯು ತನ್ನ ಮನದಲ್ಲಿ ತಾನೊಂದು ಕದುರು ತೆಗೆದುಕೊಳ್ಳಬೇಕೆಂದು ಯೋಚಿಸಿ ಅಲ್ಲಿ ನೆರೆದಿರುವ ಹೆಣ್ಣುಮಕ್ಕಳನ್ನು ಕುರಿತು—ನಮ್ಮವ್ವಗಳಿರಾ, ನನಗೊಂದು ಕದುರು ಕೊಡಿಸಿರಿ; ಅದರ ಕ್ರಯವನ್ನು ನಾಲ್ಕೆಂಟು ದಿವಸಗಳಲ್ಲಿ ಕೊಡುತ್ತೇನೆ, ಎಂದು ಅಂಗಲಾಚಿ ಕೇಳಿಕೊಂಡಳು.

ದಿಕ್ಕಿಲ್ಲದ ಬಡವಿಯೂ, ತಲೆ ನಡುಗುವ ವೃದ್ಧಳೂ ಆದ ಪಿಡ್ಡವ್ವನ ಮಾತು ಯಾರ ಲಕ್ಷ್ಯದಲ್ಲಿ ಬರಬೇಕು? ಎಲ್ಲರೂ:—ಹೋಗಬೇ ಮುದುಕಿ; ನಿನ್ನದೇನು ಹಚ್ಚಿರುವೆ? ದುಡ್ಡಿದ್ದರೆ ತೆಗೆದುಕೋ, ಇಲ್ಲದಿದ್ದರೆ ಸುಮ್ಮನೆ ಮನೆಗೆಹೋಗು, ಎಂದು ಮೋರೆ ಸೊಟ್ಟ ಮಾಡಿ ಮಾಡಿ ಹೇಳಿದರು. ಆಗ ಮುದುಕೆಯು ನಿರುಪಾಯಳಾಗಿ ಕೇಣಿಕಾರನನ್ನು ಕುರಿತು:—ನಮ್ಮಪ್ಪಾ, ಕದುರು ಒಂದಕ್ಕೆ ಧಾರಣಿ ಏನು? ಬಡವಿಯಳಾದ ನನ್ನ ಮೇಲೆ ದಯವಿಟ್ಟು ಹೇಳು.

ಕೇಣಿಕಾರ:—ಅಮ್ಮ, ನಮ್ಮ ಕದುರು ಬಹು ಉತ್ತಮವಾಗಿರುವದರಿಂದ ಇದುವರೆಗೂ ಎರಡು ದುಡ್ಡಿಗೊಂದರಂತೆ ಕೊಟ್ಟಿರುತ್ತೇನೆ. ನೀನು ಬಡವಿಯಳೆಂದು ಹೇಳುವ ಕಾರಣ ನಿನಗೆ ಒಂದೇ ದುಡ್ಡಿಗೆ ಕೊಡುತ್ತೇನೆ, ತೆಗೆದುಕೋ.

ಮುದುಕಿ:—ಅಪ್ಪಾ, ಆ ದುಡ್ಡಿದ್ದರೆ ಎಲ್ಲರನ್ನು ಹೀಗೇಕೆ ಬೇಡಿಕೊಳ್ಳುತ್ತಿದ್ದೆನು?

ಕೇಣಿಗಾರ:—ತಾಗಾದರೆ ಪುಕ್ಕಟೆಯಾಗಿ ಕದುರು ಕೊಡಬೇಕೇನು?

ಮುದುಕಿ:—ಬೇಡ ನಮ್ಮಪ್ಪಾ, ಪುಕ್ಕಟೆಯಾಗಿ ಕೊಡಲಿಕ್ಕೆ ನೀನೇನು ಚಲ್ಲಿದವುಗಳನ್ನು ಬಳಿದುಕೊಂಡು ಬಂದಿರುವೆಯಾ! ಇಂದಿನಿಂದ ಎಂಟು ದಿವಸಕ್ಕೆ ನಿನ್ನ ದುಡ್ಡು ಕೊಡುತ್ತೇನೆ, ದಯಮಾಡಿ ಕದುರು ಕೊಡು.

ಕೇಣಿಕಾರ:—ಅಮ್ಮಾ, ನೀನಾಡುವದು ನಿಜ; ಆದರೆ ಇದಕ್ಕೆ ಯಾರನ್ನು ಜಾಮೀನು ಕೊಡುತ್ತೀ?

ಮುದುಕಿ:—ಅಯ್ಯೋ ನನ್ನ ತಂದೆ! ದಿಕ್ಕಿಲ್ಲದವಳಾದ ನನಗೆ ಯಾರು ಜಾಮೀನಾಗಬೇಕು? ಎಷ್ಟು ಬೇಡಿಕೊಂಡರೂ ಒಂದು ದುಡ್ಡು ಕೊಡದವರು ನಿನ್ನ ದುಡ್ಡಿಗೆ ಜಾಮೀನಾಗುವದಾದರೂ ಹೇಗೆ?

ಕೇಣಿಕಾರ:—ಮನುಷ್ಯರಾಗದಿದ್ದರೆ ದೇವರೂ ಸಹ ಆಗುವದಿಲ್ಲವೆ? ಈ ಗುಡಿಯೊಳಗಿರುವ ಸೋಮನಾಥನನ್ನು ಜಾಮೀನು ಕೊಡು; ಅಂದರೆ ಕದುರು ಕೊಡುತ್ತೇನೆ.

ಮುದುಕಿ:—ಆಗಲಿ ನಮ್ಮಪ್ಪಾ! ನೀನು ಹೇಳಿದಂತೆ ಸೋಮನಾಥನ ಆಣೆಯಾಗಿ ೮ ದಿವಸದಲ್ಲಿ ನಿನ್ನ ದುಡ್ಡು ಕೊಡುತ್ತೇನೆ, ಕದುರು ಕೊಡು.

ಕೇಣಿಕಾರ:—ಆಣೆಯನ್ನಿಟ್ಟುಕೊಳ್ಳೆಂದು ನಾನು ಹೇಳಲಿಲ್ಲ. ನಿನ್ನಂಥವರನ್ನು ಬಹು ಜನರನ್ನು ನೋಡಿರುವೆನು. ಸಾಮಾನು ಸಿಗುವವರೆಗೂ ಎಷ್ಟು ಆಣೆಗಳನ್ನಾದರೂ ಇಟ್ಟುಕೊಳ್ಳುತ್ತಾರೆ; ಸಿಕ್ಕ ಕೂಡಲೆ ಯಾರಿಗೆ ಗೊತ್ತೆಂದು ಹೇಳುತ್ತಾರೆ. ಅದನ್ನು ನಾನು ಕೇಳುವದಿಲ್ಲ. ಈ ಸೋಮೇಶನ ಬಾಯಿಂದ ಹೇಳಿಸು, ಅಂದರೆ ಕೊಡುತ್ತೇನೆ.

ಕೇಣಿಗಾರನ ಈ ಮಾತುಗಳನ್ನು ಕೇಳಿ, ಪಿಡ್ಡಮ್ಮನು ದೇವರ ಎದುರಾಗಿ ನಿಂತು ಕೈ ಮುಗಿದು:—ಸ್ವಾಮಿ, ಸೋಮನಾಥಾ! ನಿನ್ನ ಪಾದಸಾಕ್ಷಿಯಾಗಿ ಎಂಟು ದಿವಸಕ್ಕೆ ದುಡ್ಡನ್ನು ಕೊಡುತ್ತೇನೆ. ದಯಮಾಡಿ ನೀನು ಹೊಣೆಯಾಗಿ ಕದುರನ್ನು ಕೊಡಿಸಿ ನನ್ನನ್ನು ಉದ್ಧರಿಸು! ಎಂದು ಹೇಳಿಕೊಂಡಳು.

ಈ ರೀತಿಯಾಗಿ ಹೇಳಿಕೊಳ್ಳುವ ಪಾಪಿಷ್ಠಳಾದ ಪಿಡ್ಡವ್ವನ ಮಾತಿಗೆ ಶಿಲಾಮೂರ್ತಿಯಾದ ಶಿವಲಿಂಗವು. ಹೇಗೆ ಮಾತಾಡಬೇಕು? ಇದನ್ನು ನೋಡಿ ಅಲ್ಲಿದ್ದ ಎಲ್ಲ ಜನರು ಮುದುಕೆಯೂ, ಕೇಣಿಕಾರನೂ ತೀರ ಹುಚ್ಚರಿರುವರೆಂದು ಹಾಸ್ಯಮಾಡಿ ನಕ್ಕರು. ಆಗ ಕೇಣಿಗಾರನು ದೇವರ ಕಡೆಗೆ ತಿರುಗಿ:—'ಸೋಮನಾಥಾ, ನೀನು ಅನಾಥರಕ್ಷಕನಲ್ಲವೇ? ಮನುಷ್ಯರಿಗಂತೂ ಈ ಬಡವಿಯ ಮೇಲೆ ದಯೆಹುಟ್ಟಲಿಲ್ಲ; ಅವರಂತೆ ನೀನೂ ನಿರ್ದಯನಾಗುವಿಯಾ? ನೀನು ಬೇಗನೆ ಹೊಣೆಯಾಗಿ ಕದುರನ್ನು ಕೊಡಿಸಿ ಈ ಮುದುಕೆಯನ್ನು ರಕ್ಷಿಸು' ಎಂದು ನುಡಿದನು. ಆ ಕ್ಷಣವೇ ಶಿಲಾಮೂರ್ತಿಯಾದ ಸೋಮೇಶ್ವರಲಿಂಗವು:—ಮಹಾತ್ಮಾ, ನಿನ್ನ ದುಡ್ಡಿಗೆ ನಾನು ಹೊಣೆಯಾಗುತ್ತೇನೆ. ಬಡವಿಯುಳ್ಳ ಪಿಡ್ಡವ್ವನಿಗೆ ಕದುರನ್ನು ಕೊಡು ಎಂದು ಹೇಳಿತು. ಇದನ್ನು ನೋಡಿದ ಎಲ್ಲ ಜನರು ಪರಮಾಶ್ಚರ್ಯಪಟ್ಟು ಇದೇನು! ಈ ಕೇಣಿಗಾರನು ಕಲ್ಲದೇವರನ್ನೇ ಮಾತಾಡಿಸಿಬಿಟ್ಟನು. ಇವನು ಕೇಣಿಗನಲ್ಲ, ಸಾಕ್ಷಾತ್ ಶೂಲಪಾಣಿಯಾದ ಶಂಕರನಿರುವನು, ಎಂದು ಆತನ ಪಾದಗಳಿಗೆ ನಮಸ್ಕರಿಸಿ ಧನ್ಯರಾದರು.

ಕೇಣಿಗಾರನು ಪಿಡ್ಡವ್ವನಿಗೆ ಕದುರನ್ನು ಕೊಟ್ಟು:—ಅಮ್ಮಾ. ಇಗೋ ನೋಡು, ಸ್ವಾಮಿಯು ಹೇಳಿದ್ದರಿಂದ ನಿನಗೆ ಕದುರನ್ನು ಕೊಟ್ಟಿರುತ್ತೇನೆ. ನೀನು ಹೇಳಿದಂತೆ ಎಂಟು ದಿವಸಕ್ಕೆ ಮಾತ್ರ ದುಡ್ಡನ್ನು ಕೊಡಲಿಕ್ಕೆ ತಪ್ಪಬಾರದು, ಎಂದು ಹೇಳಿ ಅಲ್ಲಿಯೇ ಮಾಯವಾದನು. ಪಿಡ್ಡವ್ವನು ಸಂತೋಷಭರಿತಳಾಗಿ ಸೋಮೇಶ್ವರನಿಗೆ ನಮಸ್ಕರಿಸಿ, ತನ್ನ ಮನೆಗೆ ತೆರಳಿದಳು.

ಈ ಮೇರೆಗೆ ಸೋಮೇಶ್ವರನ ಜಾಮೀನಿನಿಂದ ಕದುರನ್ನು ತಂದ ಪಿಡ್ಡವ್ವನು ಮನೆಯೊಳಗಿರುವ ಹಂಜಿಗಳನ್ನು ನೂತು, ಅವು ತೀರಿದ ಮೇಲೆ ಪುನಃ ಹಂಜಿಗಳನ್ನು ತಂದು ಸಂಜೆಯ ವರೆಗೂ ನೂಲುತ್ತ ಪಟ್ಟಿಗಳನ್ನು ಮಾಡಿ ಮಾರಿದರೂ ಹೊಟ್ಟೆಪೂರ್ತಿಯಾಗುತ್ತಿತ್ತೇ ಹೊರ್ತು ಹೆಚ್ಚಿಗೆ ಒಂದು ಕಾಸು ಸಹ ಉಳಿಯುತ್ತಿದ್ದಿಲ್ಲ. ಆಗ ಪಿಡ್ಡವ್ವನಿಗೆ ಕೇಣಿಗಾರನ ದುಡ್ಡಿನ ನೆನಪಾಗಿ:—ನಾನು ಒಂದು ದಿನ ಉಪವಾಸಬಿದ್ದರೂ ಚಿಂತೆಯಿಲ್ಲ. ಆತನ ದುಡ್ಡನ್ನು ಮಾತ್ರ ಕಾಣಿಕೆಯಾಗಿಡಬೇಕೆಂದು ನೆಲವಿನ ಕಾಲಿಗೆ ಕಟ್ಟಿದಳು.

ಹೀಗೆ ನೂಲುತ್ತ ಏಳು ದಿನ ಕಳೆಯಲು, ಆಕೆಗೆ ಅಂತ್ಯಕಾಲವು ಪ್ರಾಪ್ತವಾಯಿತು. ಆ ಕೂಡಲೆ ಯಮರಾಜನು ತನ್ನ ದೂತರನ್ನು ಕಳಿಸಲು, ಅವರು ಆಕೆಯನ್ನು ಪಾಶದಿಂದ ಕಟ್ಟಿ ಎಳೆದೊಯ್ದು ಸಿಂಹಾಸನದ ಮೇಲೆ ಕುಳಿತಿರುವ ಯಮರಾಜನ ಎದುರಾಗಿ ನಿಲ್ಲಿಸಿದರು. ಯಮರಾಜನು ತನ್ನ ಕರಣಿಕರನ್ನು ಕುರಿತು:—ಎಲೈ ಚಿತ್ರಗುಪ್ತರೇ, ಇವಳ ಪಾಪ-ಪುಣ್ಯದ ಪುಸ್ತಕವನ್ನು ತೆಗೆದು ಓದಿರಿ, ಎಂದು ಆಜ್ಞೆ ಮಾಡಿದನು. ಚಿತ್ರಗುಪ್ತರು ತಮ್ಮ ಪುಸ್ತಕಗಳನ್ನು ತೆಗೆದು:—ಮಹಾಪ್ರಭೋ, ಇವಳು ಬಹು ಪಾಪಿಷ್ಠಳು. ಪುಣ್ಯಕಾರ್ಯವನ್ನು ಒಂದನ್ನಾದರೂ ಮಾಡಿರುವದಿಲ್ಲ. ಇದು ಚಿತ್ತಕ್ಕೆ ಶ್ರುತವಿರಬೇಕು, ಎಂದು ಹೇಳಿದರು. ಅವರ ಮಾತನ್ನು ಕೇಳಿದ ಕೂಡಲೆ ಯಮರಾಜನು ಸಿಟ್ಟಿನಿಂದ:—ಈ ನೀಚಾತ್ಮಳನ್ನು ನೂರು ವರುಷಗಳವರೆಗೂ ನರಕದ ಕುಣಿಯಲ್ಲಿ ಹಾಕಿಬಿಡಿರಿ, ಎಂದು ಅಪ್ಪಣೆ ಮಾಡಿದನು. ಕೂಡಲೆ ಯಮದೂತರು ಆಕೆಯನ್ನು ಎಳೆದೊಯ್ದು ನರಕದ ಕುಣಿಯಲ್ಲಿ ಒಗೆದುಬಿಟ್ಟರು. ಅಷ್ಟರಲ್ಲಿ ಪಿಡ್ಡವ್ವನಂತೂ ಸತ್ತು ಯಮಪುರವನ್ನು ಸೇರಿರುವಳು. ಕೇಣಿಗಾರನು ಆ ಶವದ ಕೂಡ ದುಡ್ಡನ್ನು ಹೇಗೆ ತೆಗೆದು ಕೊಳ್ಳುವನೋ ನೋಡಬೇಕೆಂದು ಬಂದನೇನೋ ಎಂಬಂತೆ ಸೂರ್ಯನಾರಾಯಣನು ಮೂಡಣ ದಿಕ್ಕಿನಲ್ಲಿ ಉದಯಿಸಿದನು. ಆಗ ಕಮಲಗಳು ಅರಳಿದವು. ಕುಮುದಗಳು ಮುಚ್ಚಿಕೊಂಡವು. ಪಕ್ಷಿಗಳು ತಮ್ಮ ತಮ್ಮ ಗೂಡುಗಳನ್ನು ಬಿಟ್ಟು ಆಹಾರದ ಕಲುವಾಗಿ ಹೊರಟು ಹೋದವು.

ಇತ್ತ ಅನಾಥಳಾದ ಪಿಡ್ಡವ್ವನ ಶವವನ್ನು ಗ್ರಾಮಾಧಿಪತಿಗಳ ಅಪ್ಪಣೆ ಮೇರೆಗೆ ಸ್ವಪಚರು ತೆಗೆದುಕೊಂಡು ಹೋಗಲಿಕ್ಕೆ ಸಿದ್ಧರಾಗಲು, ಆ ಕೇಣಿಕಾರನು ಅಲ್ಲಿಗೆ ಬಂದು ಆ ಶವವನ್ನು ನೋಡಿ:—ಈ ಪಾಪಿಷ್ಠಳು ನನ್ನ ದುಡ್ಡನ್ನು ಕೊಡದೇ ಸತ್ತು ಹೋಗಿ, ಹೊಣೆಗಾರನನ್ನು ಕೇಳುವ ಪ್ರಸಂಗವನ್ನು ತಂದಳು, ಎಂದು ಗುಣಗುಟ್ಟುತ್ತ ಸೋಮೇಶ್ವರ ದೇವಾಲಯಕ್ಕೆ ಬಂದು:—'ಸೋಮನಾಥಾ, ಕಮರನ್ನು ತೆಗೆದುಕೊಂಡ ಪಿಡ್ಡವ್ವನು ಮರಣ ಹೊಂದಿರುವಳು; ನೀನು ಅವಳಿಗೆ ಜಾಮೀನಾದ ಪ್ರಕಾರ ನನ್ನ ದುಡ್ಡನ್ನು ಕೊಡು' ಎಂದು ಕೇಳಿದನು. ಆ ಮಾತಿಗೆ ಸೋಮನಾಥನು:—ಮಹಾತ್ಮಾ, ಬಡವಿಯಾದ ಪಿಡ್ಡವ್ವನು ದೊಡ್ಡ ರೋಗದಿಂದ ಸತ್ತಳು; ಆಕೆಯನ್ನು

ಯಮಸಾಳುಗಳು ತಮ್ಮೊಡೆಯನ ಅಪ್ಪಣೆಯಂತೆ ನರಕದ ಕುಣಿಯಲ್ಲಿ ಹಾಕಿರುವರು. ಅವಳು ನೂರು ವರುಷಗಳ ವರೆಗೂ ಅಲ್ಲಿದ್ದು ಪುನಃ ಭೂಲೋಕದಲ್ಲಿ ಹುಟ್ಟುವಳು; ಆ ಮೇಲೆ ನಿನ್ನ ದುಡ್ಡನ್ನು ಕೊಡಿಸುತ್ತೇನೆ. ಅಲ್ಲಿಯವರೆಗೆ ಮಾತ್ರ ಕ್ಷಮಿಸು!

ಹೀಗೆ ಹೇಳುವ ಸೋಮನಾಥನ ಮಾತುಗಳನ್ನು ಕೇಳಿ ಕೇಣಿಗನು ಕಣ್ಣುಗಳನ್ನು ಕೆಂಪಗೆ ಮಾಡಿ:—ಜಗದೊಡೆಯನಾದ ನೀನೂ ಸಹ ಹೀಗೆ ಹೇಳುವೆಯಾ? ಇರಲಿ. ನನ್ನ ದುಡ್ಡನ್ನು ಕೊಡದೆ ಸತ್ತಿರುವ ಅವಳನ್ನು ಯಮನಾದರೂ ಹೇಗೆ ನರಕದಲ್ಲಿ ಹಾಕಿಸಿರುವನೋ ನೋಡುತ್ತೇನೆ, ಎಂದು ಶವದ ಹತ್ತಿರ ಬಂದು:—ಮೂಢಳೇ, ನನ್ನ ದುಡ್ಡನ್ನು ಕೊಡದೆ ಯಮಪುರವನ್ನು ಸೇರಿದರೆ ಬಿಡುವೆನೇ? ದುಡ್ಡು ಕೊಟ್ಟು ಮುಂದಕ್ಕೆ ಹೋಗು, ಎಂದು ಶವವನ್ನು ತರುಬಿದನು. ಅಲ್ಲಿ ನೆರೆದಿರುವ ಜನರು ಇವನ ಅಕ್ರಮವನ್ನು ನೋಡಿ:—ಎಲೊ, ಹುಚ್ಚನೇ, ನಿನ್ನ ದುಡ್ಡನ್ನು ಈ ಹೆಣವು ಹೇಗೆ ಕೊಡುವದು? ಸುಮ್ಮನೆ ಬಿಡು, ತೆಗೆದುಕೊಂಡು ಹೋಗಲಿ, ಎಂದು ಹೇಳಿದರು. ಕೇಣಿಗಾರನು ಸುಮ್ಮನೆ ಬಿಟ್ಟರೆ ನನ್ನ ದುಡ್ಡನ್ನು ಯಾರು ಕೊಡುವರು? ಈಕೆಯನ್ನು ಕಂಡು ಎಲ್ಲರೂ ಹೀಗೆಯೇ ಮಾಡ್ಯಾರು. ಸಿಕ್ಷಯವಾಗಿಯೂ ದುಡ್ಡನ್ನು ಕೊಡದೇ ನಾನು ಇವಳನ್ನು ಬಿಡುವದಿಲ್ಲ. ಆದದ್ದಾಗಲಿ, ನೋಡಿಯೇ ಬಿಡುತ್ತೇನೆ, ಎಂದು ಜಪ್ಪಿಸಿ ನಿಂತನು.

ಅಲ್ಲಿ ಕೂಡಿರುವ ಜನರೆಲ್ಲರೂ ಅವನ ಮಾತಿಗೆ ನಗುತ್ತ:—ಹಾಗಾದರೆ ಇವಳ ಕೂಡ ದುಡ್ಡನ್ನು ಹೇಗೆ ತೆಗೆದುಕೊಳ್ಳುವಿಯೋ ನಿನ್ನ ಶಕ್ತಿಯನ್ನಾದರೂ ನೋಡುವೆವೆಂದು ಹಾಸ್ಯ ಮಾಡಿದರು. ಆಗ ಕೇಣಿಗಾರನು ಶವದ ಹತ್ತಿರ ಬಂದು—ಸಿದ್ಧವ್ವಾ, ನುಡಿಯುವದೊಂದು ನಡೆಯುವದೊಂದು ಮಾಡಿದರೆ ನಾನು ಕೇಳುವವನಲ್ಲ ಒಳ್ಳೇ ಮಾತಿನಿಂದ ಮೇಲಕ್ಕೆದ್ದು ನನ್ನ ದುಡ್ಡನ್ನು ಕೊಡು; ಹೂ, ತಡಮಾಡಬೇಡ, ಬೇಗನೆ ಮೇಲಕ್ಕೇಳು, ಎಂದು ನುಡಿದನು. ಕೇಣಿಗಾರನ ಈ ಶಬ್ದವು ದೇಹಕ್ಕೆ ಸ್ಪರ್ಶವಾದ ಕೂಡಲೆ ಸಿದ್ಧವ್ವನ ಶವಕ್ಕೆ ಪ್ರಾಣವು ಬಂದು ಎದ್ದು ಕುಳಿತು:—ನಮ್ಮಪ್ಪಾ, ನಿನ್ನ ದುಡ್ಡನ್ನು ನೆಲವಿನ ಕಾಲಿಗೆ ಕಟ್ಟಿದ್ದೇನೆ; ಕೊಡುತ್ತೇನೆ, ಕ್ಷಮಿಸು! ಎಂದಳು.

ಕೇಣಿಗಾರ:—ನನ್ನ ದುಡ್ಡನ್ನು ಕೊಡದೆ ನಾನೇನೂ ಕ್ಷಮಿಸತಕ್ಕವನಲ್ಲ. ಬೇಗನೆ ಮೇಲಕ್ಕೆದ್ದು ಒಳಗೆ ಹೋಗಿ ದುಡ್ಡು ತಂದುಕೊಟ್ಟು ಮಾತಾಡು.

ಪಿಡ್ಡಮ್ಮ:—ಆಗಲಿ ನಮ್ಮಪ್ಪಾ, ನಿನ್ನ ದುಡ್ಡನ್ನು ತಂದು ಕೊಡುತ್ತೇನೆ, ಎಂದು ಮೇಲಕ್ಕೆದ್ದು ಒಳಗೆ ಹೋಗಿ ದುಡ್ಡನ್ನು ತೆಗೆದುಕೊಂಡು ಬಂದು ಕೇಣಿಗಾರನ ಕೈಯಲ್ಲಿ ಕೊಟ್ಟು ನಮಸ್ಕರಿಸಿದಳು.

ಆಗ ಕೇಣಿಗಾರನು:—ಅಮ್ಮಾ, ನಿನಗೆ ನೂರು ವರುಷ ಆಯುಷ್ಯ ಉಂಟಾಗಲಿ, ಎಂದು ಹರಸಿದನು.

ಪಿಡ್ಡಮ್ಮನು ಕೈಮುಗಿದು:—ಗುರುನಾಥಾ, ನೀನು ಕೇಣಿಗಾರನಲ್ಲ. ಸಾಕ್ಷಾತ್ ಸೋಮನಾಥನಿರುವೆ. ಆದ್ದರಿಂದಲೇ ಯಮಪುರದಲ್ಲಿ ನರಕದ ಕುಣಿಯೊಳಗಿದ್ದ ನನ್ನನ್ನು ಪುನಃ ಇಲ್ಲಿಗೆ ಕರೆತಂದು ಉದ್ಧರಿಸಿದೆ. ಕೃಪಾಘನಾ, ನಿನ್ನ ಮೂಲರೂಪವನ್ನು ತೋರಿಸಿ ಈ ಅನಾಥಳನ್ನು ರಕ್ಷಿಸು. ರಕ್ಷಿಸು! ಎಂದು ಬೇಡಿಕೊಂಡಳು. ಆಗ ಕೇಣಿಗಾರನು ತನ್ನ ಮಾಯಾರೂಪವನ್ನು ಬಿಟ್ಟು, ನಿಜರೂಪವಾದ ಮೌನರೂಪಿನಿಂದ ಪ್ರಕಟನಾದನು. ಆಗಂತೂ ಪಿಡ್ಡಮ್ಮನ ಆನಂದಕ್ಕೆ ನೆಲೆಯಿಲ್ಲದಂತಾಗಿ:—ಸದ್ಗುರೋ, ತ್ರಾಹಿ! ತ್ರಾಹಿ!! ಅನಾಥರ ಮೇಲೆ ನಿನ್ನ ಅಂತಃಕರಣವೆಷ್ಟು!!! ಪಾಮರಳಾದ ನನ್ನನ್ನು ರಕ್ಷಿಸಲಿಕ್ಕಾಗಿಯೇ ನೀನು ಕೇಣಿಗನ ರೂಪದಿಂದ ಬಂದೆ. ನಿನ್ನ ಘನಮಹಿಮೆಯನ್ನು ಎಷ್ಟು ಹೊಗಳಿದರೂ ತೀರದಾಗಿದೆ, ಎಂದು ಪುನಃ ನಮಸ್ಕರಿಸಿದಳು. ಮೌನೇಶನು ಆಕೆಯ ಶಿರವಿಡಿದೆತ್ತಿ:—ಮಗಳೇ, ನಿನಗೆ ನೂರುವರುಷ ಆಯುಷ್ಯವನ್ನು ಕೊಟ್ಟಿರುವೆನು. ಅಲ್ಲಿಯ ವರೆಗೂ ನೀನು ಸದೃಢಳಾಗಿಯೂ, ಐಶ್ವರ್ಯ ಉಳ್ಳವಳಾಗಿಯೂ ಇರುವೆ. ಇನ್ನು ಮೇಲೆ ಮಾತ್ರ ಸದ್ವೃತ್ತಿಯಿಂದ ಕಾಲಹರಣ ಮಾಡುತ್ತ ನನ್ನನ್ನು ಧ್ಯಾನಿಸುತ್ತಿರು. ಅನಂತರ ನಿನಗೆ ಮೋಕ್ಷಸುಖವನ್ನು ಕೊಡುವೆನು ಎಂದು ಹೇಳಲು. ಪಿಡ್ಡಮ್ಮನು:—ಗುರುವರ್ಯಾ, ಹಾಗೆ ನಡೆಸಿಕೊಳ್ಳುವದು ನಿನ್ನನ್ನೇ ಕೂಡಿದೆ, ಎಂದು ಕೈಮುಗಿದು ಹೇಳಿಕೊಂಡಳು. ಇವನ್ನೆಲ್ಲ ನೋಡಿದ ಜನರೆಲ್ಲರೂ ಪರಮಾಶ್ಚರ್ಯದಿಂದ-ಆಹಾ! ಸತ್ತು ಹೋದ ಈ ಪಿಡ್ಡಮ್ಮನನ್ನು ಬದುಕಿಸಿ, ಪುನಃ ನೂರುವರುಷ ಆಯುಷ್ಯವನ್ನು ಕೊಟ್ಟ ಈತನು ಮೃತ್ಯುಂ

ಜಯುನಲ್ಲದೆ, ಮರ್ತ್ಯನಲ್ಲವೆಂದು ಆತನ ಚರಣಾರವಿಂದಗಳಿಗೆ ಒಬ್ಬರ ಮೇಲೊಬ್ಬರು ಬಿದ್ದು ನಮಸ್ಕರಿಸುತ್ತಿದ್ದರು ಮೌನೇಶನು ಅವರೆಲ್ಲರಿಗೂ ಆಶೀರ್ವಾದ, ಆಶೀರ್ವಾದವೆಂದು ಅನ್ನುತ್ತ ಅಲ್ಲಿಯೇ ಅದೃಶ್ಯನಾದನೆಂಬ ಲ್ಲಿಗೆ ಹನ್ನೆರಡನೆಯ ಅಧ್ಯಾಯ ಸಂಪೂರ್ಣವು.



ಶ್ರೀ ಮೌನಗುರು ಪರಬ್ರಹ್ಮಣೇ ನಮಃ|
ಶ್ರೀ ಗಣೇಶಾಯ ನಮಃ||

# ಹದಿಮೂರನೆಯ ಅಧ್ಯಾಯ



## ಆಯುಃಪ್ರದಾನ.

ಪೂರ್ವದಲ್ಲಿ ಮುದುಗಲ್ಲು ಎಂಬ ಪಟ್ಟಣ ಒಂದಿತ್ತು. ಆ ಪಟ್ಟಣವನ್ನು ಮುಸಲಮಾನ ಧರ್ಮದ ಬಾದಶಹನು ಆಳುತ್ತಿದ್ದನು. ಅಲ್ಲಿ ಎಲ್ಲ ಜಾತಿಯ ಜನರು ವಾಸಿಸುತ್ತಿದ್ದರಲ್ಲದೆ, ಎಲ್ಲಿ ನೋಡಿದರೂ ಶ್ರೀಮಂತರ ಮೇಲುಪ್ಪರಿಗೆ ಗಳುಳ್ಳ ಮನೆಗಳೂ, ವರ್ತಕರ ಮಳಿಗೆಗಳೂ ಸಾಲುಸಾಲಾಗಿ ಕಂಗೊಳಿಸು ತ್ತಿದ್ದವು. ಅವುಗಳ ಮಧ್ಯದಲ್ಲಿ ದೊಡ್ಡ ದೊಡ್ಡ ರಸ್ತೆಗಳಿರುವವರಿಂದ ನೋಡು ವವರಿಗೆ ಅತ್ಯಾನಂದವಾಗುತ್ತಿತ್ತು. ಬಾದಶಹನ ಅರಮನೆಯೇ ಅಲ್ಲಿ ಇತ್ತೆಂದ ಮೇಲೆ ಆ ಪಟ್ಟಣದ ವೈಭವವನ್ನು ಎಷ್ಟೆಂದು ಹೇಳಬೇಕು? ಅದು ವರ್ಣನಾತೀತವಾಗಿತ್ತೆಂದರೂ ಅತಿಶಯೋಕ್ತಿಯಾಗದು. ಇರಲಿ.

ಹೀಗಿರುವ ಆ ಮುದುಗಲ್ಲೆಂಬ ಪಟ್ಟಣದಲ್ಲಿ ಹಾಲು ಮತದವರ (ಕುರುಬರ) ವಂಶದಲ್ಲಿ ಆದಿಗೌಡಪ್ಪನೆಂಬ ಐಶ್ವರ್ಯವಂತ ಗೃಹಸ್ಥನಿದ್ದನು. ಆತನಿಗೆ ಸೌಂದರ್ಯವತಿಯಾದ ಒಬ್ಬ ಹೆಂಡತಿ ಇದ್ದಳು. ಆ ಸಂಪತಿ ಗಳು ಪರಸ್ಪರ ಪ್ರೇಮದಿಂದ ಕಾಲಹರಣ ಮಾಡುತ್ತಿದ್ದರು.

ಆ ಸತಿ-ಪತಿಗಳಿಗೆ ಸಕಲ ಸಂಪತ್ತು ಪ್ರಾಪ್ತಿಯಾಗಿದ್ದರೂ, ಪುತ್ರ ಸಂಪತ್ತು ಮಾತ್ರ ಇಲ್ಲದಿರುವ ಕಾರಣ ಅವರು ತಮ್ಮ ಕುಲದೇವರಾದ ವೀರಗೊಲ್ಲಾಳೇಶ್ವರನೆಂಬ ದೇವರಿಗೆ ಹರಕೆಮಾಡಿಕೊಂಡು ನಿತ್ಯದಲ್ಲಿಯೂ ಜಳಕ ಮಾಡಿ ಮಡಿಬಟ್ಟೆಗಳನ್ನುಟ್ಟು ದೇವಾಲಯಕ್ಕೆ ತೆರಳಿ, ಜಲ-ಗಂಧ-ಅಕ್ಷತೆ-ಪುಷ್ಪ-ದೀಪ-ನೈವೇದ್ಯಗಳಿಂದ ಆ ಶಿವಲಿಂಗವನ್ನು ಪೂಜಿಸಿ: 'ಮೃತ್ಯುಂಜಯಾ, ಭಕ್ತರಕ್ಷಕಾ! ನಮಗೊಬ್ಬ ಸತ್ಪುತ್ರನನ್ನು ಕೊಟ್ಟು ಕಾಪಾಡು' ಎಂದು ಸ್ತೋತ್ರ ಮಾಡುತ್ತಿದ್ದರು.

ಈ ರೀತಿಯಾಗಿ ಕೆಲವು ದಿವಸ ಭಕ್ತಿಪುರಸ್ಸರವಾಗಿ ಪೂಜಿಸಲು, ಶಂಕರನು ಆ ದಂಪತಿಗಳ ಸ್ವಪ್ನದಲ್ಲಿ ಪ್ರಕಟನಾಗಿ:—ಭಕ್ತರೇ, ನಿಮ್ಮ ನಿಶ್ಚಲ ಭಕ್ತಿಗೆ ನಾನು ತುಷ್ಟನಾಗಿರುತ್ತೇನೆ. ನಿಮಗೆ ಬೇಕಾದ ವರವನ್ನು ಕೇಳಿರಿ. ಕೊಡುತ್ತೇನೆ, ಎಂದು ಹೇಳಿದನು. ಆಗ ಆ ದಂಪತಿಗಳು ಭಗವಂತನ ಪಾದಾರವಿಂದಗಳಿಗೆ ನಮಸ್ಕರಿಸಿ:—'ದೇವಾ, ನೀನು ಮೆಚ್ಚಿದ್ದೇ ಆದರೆ ನಮಗೊಬ್ಬ ಸುಗುಣವುಳ್ಳ ಮಗನನ್ನು ದಯಪಾಲಿಸು' ಎಂದು ಬೇಡಿಕೊಂಡರು. ಪರಮಾತ್ಮನು:— ಇಗೋ, ಈ ಫಲಗಳನ್ನು ತೆಗೆದು ಕೊಳ್ಳಿರಿ; ಇವುಗಳನ್ನು ನೀವಿಬ್ಬರೂ ಸೇವಿಸಿದರೆ, ನಿಮ್ಮ ಹೊಟ್ಟೆಯಲ್ಲಿ ಒಬ್ಬ ಸತ್ಪುತ್ರನು ಹುಟ್ಟುವನು; ಅವನ ಆಯುಷ್ಯವು ಮೂವತ್ತೆರಡು ವರುಷ ಇರುವದು, ಎಂದು ಹೇಳಿ ಅದೃಶ್ಯನಾದನು. ಬೆಳಗಾದ ಮೇಲೆ ಎದ್ದು ನೋಡಲು, ಇಬ್ಬರ ಕೈಯಲ್ಲಿಯೂ ಒಂದೊಂದು ಮಾವಿನ ಹಣ್ಣು ಇದ್ದವು. ಆಗ ದಂಪತಿಗಳು ದೇವರ ಮಹಿಮೆಯು ಅಗಾಧವಾದದ್ದೆಂದು ಅನ್ನುತ್ತ ಸ್ನಾನಮಾಡಿ ಮಡಿವಸ್ತ್ರಗಳನ್ನು ಧರಿಸಿಕೊಂಡು, ದೇವರು ಕೊಟ್ಟಿರುವ ಮಾವಿನ ಫಲಗಳನ್ನು ಸೇವಿಸಿ, ಸುಖದಿಂದ ಕಾಲಕಳೆಯ ಹತ್ತಿದರು.

ಪರಶಿವನ ಅನುಗ್ರಹದಂತೆ ತುಸು ದಿನಗಳಲ್ಲಿಯೇ ಗೌಡಪ್ಪನ ಪತ್ನಿಯು ಗರ್ಭಧಾರಣ ಮಾಡಿದಳು. ಆ ಪತಿವ್ರತೆಯಳಿಗೆ ನವಮಾಸವು ಪೂರ್ಣವಾಗಿ, ಶುಭಮುಹೂರ್ತದಲ್ಲಿ ಗಂಡು ಕೂಸನ್ನು ಪಡೆದಳು. ಕೂಡಲೆ ಬ್ರಹ್ಮದೇವನು ಆ ಶಿಶುವಿನ ಹಣೆಯಲ್ಲಿ ಶಂಕರನ ನಿಯಮದಂತೆ ಮೂವತ್ತೆರಡು ವರುಷಗಳ ಆಯುಷ್ಯವನ್ನು ಬರೆದನು. ಗೌಡಪ್ಪನಂತೂ ಸಂತೋಷ

ಸಾಗರದಲ್ಲಿ ಮುಳುಗಿ ಇಂದಿಗೆ ನಾನು ಧನ್ಯನಾದೆನೆಂದು ಅನ್ನುತ್ತ ಯಾಚಕ ಜನರಿಗೆ ದಾನ-ಧರ್ಮಗಳನ್ನು ಮಾಡಿ, ಸಂತುಷ್ಟಿಗೊಳಿಸಿದನು. ಆ ಮೇಲೆ ವೀರಗೊಲ್ಲಾಳೇಶ್ವರನ ಅನುಗ್ರಹದಿಂದ ಜನಸಿದ ಆ ಶಿಶುವಿಗೆ ಸುಮಂಗಲೆಯರಿಂದ ವೀರಗೊಲ್ಲಾಳನೆಂತಲೇ ನಾಮಕರಣ ಮಾಡಿಸಿದನು. ಆ ಶಿಶುವು ದಿನದಿನಕ್ಕೆ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತ ತಂದೆ-ತಾಯಿಗಳನ್ನು ಆನಂದಗೊಳಿಸುತ್ತಿತ್ತು.

ನೋಡಿರಿ, ಅಪರೂಪಕ್ಕೆ ಸಂತಾನವಾಗದೆ; ಅದರಲ್ಲಿ ಗಂಡು ಕೂಸು ಆದಾದರೂ ಲೋಕದ ಜನರಂತಾಗದೆ ಶಿವಾನುಗ್ರಹದಿಂದ ಜನಿಸಿತು; ಅಂದ ಮೇಲೆ ತಂದೆ-ತಾಯಿಗಳಿಗೆ ಯಾಕೆ ಪ್ರೀತಿಯಾಗಲಿಕ್ಕಿಲ್ಲ? ಅವರು ಆ ಕೂಸನ್ನು ಸ್ವಲ್ಪಾದರೂ ಅಳಗೊಡದಂತೆ ಯಾವಾಗಲೂ ಬಗಲಲ್ಲಿಯೇ ಎತ್ತಿಕೊಂಡು ಬಹು ಅಕ್ಕರತೆಯಿಂದ ಜೋಪಾನ ಮಾಡುತ್ತಿದ್ದರು. ಬಡವರ ಮಕ್ಕಳಿಗಂತೂ ಇಡ-ತೊಡಲಿಕ್ಕೆಕೊರತೆ. ಶ್ರೀಮಂತರ ಮಕ್ಕಳಿಗೇನು? ಆ ದಂಪತಿಗಳು ತಮ್ಮ ಮಗನಿಗೆ ಅರಳೆಲೆ, ಕೊರಳಹಾರ, ಕಡೆ-ಕಾಲಂದಿಗೆ ಉಡುದಾರ ಮೊದಲಾದ ಬೆಳ್ಳಿ-ಬಂಗಾರದ ಸಾಮಾನುಗಳಿಂದಲೂ, ರೇಶಿಮೆಯ ಅಂಗಿ-ಟೊಪ್ಪಿಗೆಗಳಿಂದಲೂ ಶೃಂಗರಿಸಿ ಆಗಾಗ್ಗೆ ಮುದ್ದಿಸುತ್ತ ಆನಂದಪಡುತ್ತಿದ್ದರು. ಆದಿಗೌಡಪ್ಪನು ಏನಾದರೊಂದು ಕೆಲಸದ ಸಲುವಾಗಿ ಮತ್ತೊಂದು ಗ್ರಾಮಕ್ಕೆ ಹೋದರೆ ತಿರುಗಿ ತನ್ನ ಊರಿಗೆ ಬಂದು ಮಗನ ಮುಖವನ್ನು ನೋಡುವ ವರೆಗೂ ಆತನ ಮನಸ್ಸಿಗೆ ಸಮಾಧಾನವೇ ಆಗುತ್ತಿದ್ದಿಲ್ಲ. ಹುಡುಗನ ದೇಹದಲ್ಲಿ ಸ್ವಲ್ಪ ಅಸ್ವಸ್ಥವಾದರಂತೂ ಆತನಿಗೆ ಆಕಾಶವು ಹರಿದು ಬಿದ್ದಂತಾಗಿ, ವೈದ್ಯರನ್ನು ಕರೆಸಿ ಗುಣಮಾಡಿಸಿ ಅವರ ಮನಸ್ಸು ತೃಪ್ತಿಯಾಗುವ ಹಾಗೆ ಕೈಸಡಿಲು ಬಿಟ್ಟು ಹಣಕೊಟ್ಟು ಕಳಿಸುತ್ತಿದ್ದನು. ಗೊಲ್ಲಾಳನಿಗೆ ಐದು ವರುಷಗಳು ಪೂರ್ಣವಾಗಲು, ಜ್ಯೋತಿಷಜ್ಞರಿಂದ ಶುಭಮುಹೂರ್ತವನ್ನು ತೆಗೆಸಿ ಎಲ್ಲರಂತೆ ಸಾಲೆಗೆ ಕಳಿಸಿದನು.

ಲೋಕದಲ್ಲಿ ಶ್ರೀಮಂತರ ಮಕ್ಕಳಿಗೆ ಬಹು ಮನ್ನಣೆಯಿಲ್ಲವೇ? ಅದರಂತೆ ವಿದ್ಯಾಗುರುಗಳಾದರೂ ಗೌಡಪ್ಪನ ಮಗನಿಗೆ ಶ್ರಮಪಟ್ಟು, ವಿದ್ಯೆ ಹೇಳಿ ಬುದ್ಧಿಶಾಲಿಯನ್ನಾಗಿ ಮಾಡಿ ಆತನಿಂದ ಹೆಚ್ಚು ಸಂಭಾವನೆ ಹೊಂದಬೇಕೆಂಬ ಇಚ್ಛೆಯಿಂದ ಹಗಲು ಸಾಲೆಯಲ್ಲಿ ಪಾಠವನ್ನು ಕಲಿಸಿದ್ದಲ್ಲದೆ,

ರಾತ್ರಿಯಲ್ಲಿ ಅವರ ಮನೆಗೆ ಹೋಗಿ ವಿದ್ಯೆ ಹೇಳುತ್ತಿದ್ದರು. ಗೊಲ್ಲಾಳನಾದರೂ ಈಶ್ವರಾನುಗ್ರಹದಿಂದ ಜನಿಸಿದವನಾದ ಕಾರಣ ಗುರುಗಳು ಹೇಳಿಕೊಟ್ಟಂತೆ ಎಲ್ಲ ಹುಡುಗರಿಗಿಂತಲೂ ಮುಂಚಿತವಾಗಿಯೇ ಪಾಠವನ್ನು ಕಲಿಯುತ್ತಿದ್ದನು. ಗುರುಗಳು ಅವನ ಬುದ್ಧಿ ಚಾತುರ್ಯವನ್ನು ನೋಡಿ ಆಶ್ಚರ್ಯಪಡುತ್ತಿದ್ದರಲ್ಲದೆ, ಗೌಡಪ್ಪನೊಡನೆ ಆಗಿಂದಾಗ್ಗೆ ಆತನ ವಿಷಯವಾಗಿ ವರ್ಣಿಸುತ್ತಿದ್ದರು.

ಗೊಲ್ಲಾಳನು ಎಲ್ಲ ವಿದ್ಯೆಗಳಲ್ಲಿ ನಿಪುಣನಾಗಿ ಸಾಲೆಯನ್ನು ಬಿಟ್ಟು, ಮನೆಯಲ್ಲಿಯ ಕೆಲಸ ಮಾಡಿಕೊಂಡು ಸುಖದಿಂದಿರಲು, ಆತನಿಗೆ ಯೌವನ ಪ್ರಾಪ್ತವಾಯಿತು. ಆಗ ಆತನ ತಂದೆ-ತಾಯಿಗಳು ತಮಗೆ ಸರಿಯಾದ ಮನೆತನದಲ್ಲಿ ಕನ್ನೆಯನ್ನು ತಂದು ಸುಮುಹೂರ್ತದಲ್ಲಿ ವಿವಾಹಕಾರ್ಯ ಮಾಡಿದರು. ಆ ಕನ್ಯೆಯ ಹೆಸರು ಪದ್ಮಿನಿಯು. ಆಕೆಯು ತನ್ನ ಹೆಸರಿಗೆ ಸರಿಯಾಗಿ ರೂಪವತಿಯೂ, ಪತಿವ್ರತಾಶಿರೋಮಣಿಯೂ, ಅತ್ತೆ-ಮಾವಂದಿರಲ್ಲಿ ಭಕ್ತಿಯುಳ್ಳವಳೂ, ಸದ್ಗುಣಿಯೂ ಆಗಿದ್ದಳು.

ಲೋಕದಲ್ಲಿ ಗಂಡನ ಆಜ್ಞೆಯನ್ನು ಪಾಲಿಸತಕ್ಕ ಹೆಂಡತಿ ಸಿಗುವದೇ ದುರ್ಲಭವು; ಆದರಲ್ಲಿ ಅತ್ತೆ-ಮಾವಂದಿರ ಆಜ್ಞೆಯನ್ನು ಪಾಲಿಸತಕ್ಕವಳು ಸಿಗುವದು ಅತಿ ದುರ್ಲಭವಲ್ಲವೇ? ಇದು ಅವರ ಪೂರ್ವಜನ್ಮದ ಪುಣ್ಯವೆಂತಲೇ ಹೇಳಬೇಕು. ಇಂಥ ಸತಿಯಿಂದಲೇ ಪತಿಗೆ ಇಹಲೋಕದಲ್ಲಿ ಕೀರ್ತಿಯೂ, ಪರಲೋಕದಲ್ಲಿ ಸದ್ಗತಿಯೂ ದೊರೆಯುವವು. ಅದುಕಾರಣದಿಂದಲೇ ಜ್ಞಾನಿಗಳು ಪತಿವ್ರತಾ ಸ್ತ್ರೀಯರನ್ನು ಹೆಚ್ಚಾಗಿ ವರ್ಣನ ಮಾಡಿರುವರು. ಇರಲಿ.

ಈ ರೀತಿಯಾಗಿರುವ ಪದ್ಮಿನಿಯನ್ನು ವಿವಾಹವಾಗಿ ವೀರಗೊಲ್ಲಾಳನು ಸೌಖ್ಯದಿಂದ ಕಾಲಕಳೆಯಹತ್ತಿದನು. ಆತನ ತಂದೆ-ತಾಯಿಗಳಂತೂ ಮಗನನ್ನೂ, ಸೊಸೆಯನ್ನೂ ನೋಡಿ ಹಿರಿಹಿರಿ ಹಿಗ್ಗುತ್ತಿದ್ದರು. ಅವರಿಗೆ ದುಃಖರೂಪವಾದ ಈ ಸಂಸಾರವು ಸುಖರೂಪವಾಗಿ, ಆನಂದಸಾಗರದಲ್ಲಿ ಮುಳುಗಿ ಹೋಗಿದ್ದರು.

ಗೊಲ್ಲಾಳನು ಮೊದಲೇ ಸುಂದರ ರೂಪುಳ್ಳವನು; ಅದರಲ್ಲಿ ಯೌವನ ಪ್ರಾಪ್ತಿಯಾದ ಮೇಲೆ ಕೇಳುವದೇನು? ಚೊಕ್ಕ ಬಂಗಾರದಲ್ಲಿ ರತ್ನಕೂಡಿಸಿ

ದಂತಾಗಿತ್ತು. ಆತನು ಕೈಯಲ್ಲಿ ಕೊಳಲನ್ನು ತೆಗೆದುಕೊಂಡು ಊದು ತ್ತಲೂ, ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಂಡು ಅದಕ್ಕೆ ಸರಿಯಾಗಿ ಹೆಜ್ಜೆ ಗಳನ್ನು ಹಾಕಿ ಕುಣಿಯುತ್ತಲೂ, ವೀರಗಾರಾಟವನ್ನು ಆಡುತ್ತಿದ್ದನು. ಗೊಲ್ಲಾಳನು ಕೊಳಲನ್ನು ಊದುವ ವಿದ್ಯೆಯಲ್ಲಿ ಬಹು ನಿಪುಣನಾದ್ದರಿಂದ ಕೇಳಿದವರೆಲ್ಲರೂ ಬೆರಗಾಗಿ ಹೋಗುತ್ತಿದ್ದರಲ್ಲದೆ, ಆತನಿಗೆ ಶ್ರೀಕೃಷ್ಣನ ಅವತಾರವೆಂದು ಅನ್ನುತ್ತಿದ್ದರು.

ನೋಡಿರಿ, ಸುಖವಿತ್ತೆಂದರೆ ಮನುಷ್ಯನಿಗೆ ಯಾವ ತರದ ಆಲೋಚ ನೆಯೂ ಇರುವದಿಲ್ಲ. ಅದರಂತೆ ನಮ್ಮ ಗೊಲ್ಲಾಳನ ತಂದೆ-ತಾಯಿಗಳಿಗೆ ಮಗನ ಆಯುಷ್ಯದ ಕಡೆಗೆ ಸ್ವಲ್ಪಾದರೂ ಲಕ್ಷ್ಯವಿಲ್ಲದೆ ಆನಂದದಿಂದಲೇ ಕಾಲ ಕಳೆಯುತ್ತಿದ್ದರು.

ಈ ಮೇರೆಗೆ ಅತ್ಯಾನಂದದಿಂದ ಮೆರೆಯುತ್ತಿರುವ ಆದಿಗೌಡಪ್ಪನಿಗೆ ಒಂದು ದಿನ ಅಕಸ್ಮಾತ್ತಾಗಿ ತನ್ನ ಮಗನ ಜನ್ಮಪತ್ರಿಕೆಯು ಸಿಕ್ಕಿತು. ಅದನ್ನು ನೋಡಿದ ಕೂಡಲೇ ಆತನ ಎದೆಯೊಡೆದು ನೀರಾಗಿ ಹೋಯಿತು; ಪೂರ್ಣ ಚಂದ್ರನಂತಿರುವ ಮುಖವು ಕಳೆಗುಂದಿ ಹೋಯಿತು. ಆದರೂ ನೋಡಬೇಕೆಂಬ ಆತುರವುಳ್ಳವನಾದ್ದರಿಂದ ಧೈರ್ಯದಿಂದ ಪತ್ರಿಕೆಯನ್ನು ಬಿಚ್ಚಿ ನೋಡಲು, ಗೊಲ್ಲಾಳನ ಆಯುಷ್ಯವು ಮುಂದೆ ಮೂರೇ ದಿನ ಉಳಿ ದಿತ್ತು. ಆಗಂತೂ ಆತನು ಹೌಹಾರಿ ಹೋದನು. ಕಣ್ಣೀರು ಬಳಬಳನೆ ಸುರಿಯಲಿಕ್ಕೆ ಹತ್ತಿದವು. ಪತ್ರಿಕೆಯನ್ನು ಅಲ್ಲಿಯೇ ಒಗೆದು, ದುಃಖಿಸುತ್ತ ನೆಲದ ಮೇಲೆ ಬಿದ್ದುಬಿಟ್ಟನು!

ಇತ್ತ ಅಡಿಗೆಯ ಕೆಲಸದಲ್ಲಿ ತೊಡಗಿದ ಆತನ ಪತ್ನಿಯು ಅಡಿಗೆಯು ಸಿದ್ಧದಾದ ಬಳಿಕ ಹೊರಗೆ ಬಂದು:—ಯಾಕೆ ಮಲಗಿರುತ್ತೀರಿ? ಜಳಕಕ್ಕೇಳಿರಿ, ಗೊಲ್ಲಾಳನು ಎಲ್ಲಿ ಹೋಗಿರುವನು? ಇನ್ನೂ ಬರಲಿಲ್ಲವಲ್ಲ! ಎಂದು ಅಂದಳು.

ಹೆಂಡತಿಯ ಈ ಮಾತುಗಳು ಕಿವಿಗೆ ಬಿದ್ದಕೂಡಲೆ ಗೌಡಪ್ಪನ ದುಃಖವು ಅತಿಶಯವಾಗಿ:—ಪ್ರಿಯೇ, ಇನ್ನೆಲ್ಲಿಯ ಗೊಲ್ಲಾಳನು? ಎಂದು ಅನ್ನುವಷ್ಟರಲ್ಲಿ ಆತನ ಕುತ್ತಿಗೆಯ ನರಗಳು ಬಿಗಿದು ಮುಂದಿನ ಮಾತು ಗಳೇ ಹೊರಡದಾದವು. ಕಣ್ಣೀರಂತೂ ಧಾರೆಗಟ್ಟಿ ಇಳಿಯುತ್ತಿದ್ದವು.

ಗೌಡಪ್ಪನ ಪತ್ನಿಯು ಗಂಡನ ಈ ಸ್ಥಿತಿಯನ್ನು ನೋಡಿ ಗಾಬರಿಯಾಗಿ:—'ಏನಂದಿರಿ? ಗೊಲ್ಲಾಳನಿಗೆ ಏನಾಗಿರುವದು? ಬೇಗನೆ ನಿಜ ಸಂಗತಿಯನ್ನು ಹೇಳಿರಿ" ಎಂದು ನಿಂತಿದ್ದವಳು ಒಮ್ಮೆಲೆ ನೆಲದ ಮೇಲೆ ಬಿದ್ದಳು.

ಆಗ ಗೌಡಪ್ಪನು ತನ್ನ ದುಃಖವನ್ನು ನುಂಗಿಕೊಂಡು:—ಪ್ರಿಯೇ, ಏನು ಹೇಳಲಿ! ದೇವರು ಕೊಟ್ಟ ಮೂವತ್ತೆರಡು ವರುಷ ಆಯುಷ್ಯದಲ್ಲಿ ನಮ್ಮ ಮಗನ ಆಯುಷ್ಯವು ಇಂದಿಗೆ ಮೂರೇ ದಿನ ಉಳಿದಿರುವದು. ಇನ್ನು ಮಾತ್ರ ಮಗನ ಮೋರೆಯು ನಮಗೆ ಎರವಾಯಿತು, ಎಂದು ದುಃಖವನ್ನು ಸಹಿಸಲಾರದೆ ಘೋರೆಂದು ಅತ್ತುಬಿಟ್ಟನು.

ಆಗಂತೂ ಆ ಸಾಧ್ವಿಯು ಹೌಹಾರಿ ಹೋಗಿ ಸ್ವಲ್ಪ ವೇಳೆ ಮಾತಾಡಲಿಕ್ಕೆ ಬರಲಿಲ್ಲ! ಆ ಮೇಲೆ ಪತಿಯನ್ನು ಕುರಿತು:—'ಅಹಾ! ಚಂದ್ರಶೇಖರನು ಕೊಟ್ಟ ಆಯುಷ್ಯವು ಇಂದಿಗೆ ಮೂರೇ ದಿನ ಉಳಿದ ಮೇಲೆ ಆ ನನ್ನ ಕಂದನನ್ನು ರಕ್ಷಿಸುವವರು ಇನ್ನಾರಿರುವರು? ಅಕಟಾ! ಸುಕುಮಾರನೇ, ನಿನ್ನ ಮುಖಕಮಲವನ್ನು ನೋಡದೆ ನಾವು ಈ ಭೂಮಿಯಲ್ಲಿ ಇರುವದಾದರೂ ಹೇಗೆ? ಶಂಕರಾ! ಪಾಪಿಗಳಾದ ನಮ್ಮನ್ನು ಜೀವದಿಂದಿಡುವದಕ್ಕಿಂತ ಮಗನು ಮರಣ ಹೊಂದುವದಕ್ಕಿಂತ ಮೊದಲೇ ನಮಗೆ ಸಾವನ್ನು ಕೊಡಬಾರದೆ?' ಎಂದು ಎದೆ-ಬಾಯಿಗಳನ್ನು ಹೊಡೆದುಕೊಂಡು ದುಃಖಿಸಲಿಕ್ಕೆ ಹತ್ತಿದಳು. ಪದ್ಮಿನಿಯ ದುಃಖಕ್ಕಂತೂ ಪಾರವೇ ಇಲ್ಲದಂತಾಯಿತು.

ನೆರೆಹೊರೆಯುವರು ಇವರ ದುಃಖವನ್ನು ನೋಡಿ:—ಅಹಾ! ಗೊಲ್ಲಾಳನು ಎಷ್ಟು ಬುದ್ಧಿಶಾಲಿಯು!! ಮೇಲಾಗಿ ಸದ್ಗುಣವುಳ್ಳವನು. ಇಂಥವನು ಇನ್ನು ಮೂರು ದಿನಗಳಲ್ಲಿ ಮರಣಹೊಂದಿದ ಮೇಲೆ ಪಾಪ-ಪಾಪ! ಈ ವೃದ್ಧ ದಂಪತಿಗಳ ಗತಿಯೇನು? ಎರಿದು ಮರುಗುತ್ತಿದ್ದರು.

ಈ ರೀತಿಯಾಗಿ ಆದಿಗೌಡಪ್ಪನೂ, ಆತನ ಪತ್ನಿಯೂ, ಸೊಸೆಯಾದ ಪದ್ಮಿನಿಯೂ ದುಃಖಿಸುತ್ತಿರಲು, ಅಷ್ಟರಲ್ಲಿ ಎಲ್ಲಿಯೋ ಹೋಗಿದ್ದ ಗೊಲ್ಲಾಳನು ಮನೆಗೆ ಬಂದನು. ಅವನ ಮುಖವನ್ನು ನೋಡಿದ ಕೂಡಲೆ ದುಃಖವು ಮತ್ತಿಷ್ಟು ಹೆಚ್ಚಾಗಿ:—ಅಕಟಾ! ಸುಕುಮಾರನೇ, ಎಂದು ತೆಕ್ಕೆಬಿದ್ದು ಅಳ

ಲಿಕ್ಕೆ ಹತ್ತಿದರು. ಪದ್ಮಿನಿಯು ಗಂಡನ ಪಾದಗಳ ಮೇಲೆ ಬಿದ್ದು:— ಪ್ರಿಯ ಕರಾ, ಈ ಕಣ್ಣುಗಳಿಂದ ನಿನ್ನ ಮರಣವನ್ನು ನೋಡಬೇಕಾಯಿತೇ? ಅಯ್ಯೋ ನನ್ನ ದುರ್ದೈವವೇ! ಎಂದು ಉರುಳಾಡಿ ಶಂಖಪುಟಿಸಹತ್ತಿದಳು.

ಗೊಲ್ಲಾಳನು ಅವರನ್ನು ಸುಮ್ಮನಿರಿಸಿ:— 'ತಂದೆ-ತಾಯಿಗಳೇ, ನಿಮಗೆ ಬಂದಿರುವ ಸಂಕಟವಾದರೂ ಏನು? ಹೀಗೇಕೆ ಅಳುತ್ತೀರಿ? ಸ್ವಲ್ಪ ಸಮಾಧಾನ ಮಾಡಿಕೊಂಡು ದುಃಖದ ಕಾರಣವನ್ನು ಹೇಳಿರಿ' ಎಂದು ಕೇಳಿದನು.

ಆಗ ಗೌಡಪ್ಪನು ಗೊಲ್ಲಾಳನನ್ನು ಕುರಿತು:- ಕಂದಾ, ನಿನಗೆ ಚಂದ್ರ ಶೇಖರನು ಕೊಟ್ಟವರದ ಅವಧಿಯು ಮುಗಿದ ಮೇಲೆ ಅದನ್ನು ಕೇಳಿ ಬಾದರೂ ನೀನು ಮಾಡುವದೇನು? ಇಂದಿಗೆ ಮಾತ್ರ ನಿನ್ನ ಋಣವು ತೀರಿ ಹೋಯಿತು, ಎಂದು ಕಣ್ಣೀರು ಸುರಿಸಿದನು.

ಗೊಲ್ಲಾಳನು:— ತಂದೆಯೇ, ಚಂದ್ರಶೇಖರನು ಏನೆಂದು ವರವನ್ನು ಕೊಟ್ಟಿರುವನು? ನನಗೆ ಅಂಥ ವಿಪತ್ತು ಬಂದಿರುವದಾದರೂ ಏನು? ಯಾವ ತೊಂದರೆಯಿಲ್ಲದೆ ನಾನು ಸುಖದಿಂದಿರಲಾಗಿ ನೀವು ಹೀಗೇಕೆ ದುಃಖಿಸು ವಿರಿ? ಬೇಗನೆ ನಿಮ್ಮ ದುಃಖದ ಸಂಗತಿಯನ್ನು ಹೇಳಿರಿ.

ಹೀಗೆ ಕೇಳುವ ಮಗನ ಮಾತಿಗೆ ಗೌಡಪ್ಪನು:— ತಮ್ಮಾ, ಪೂರ್ವ ದಲ್ಲಿ ನಮಗೆ ಮಕ್ಕಳಾಗದ್ದರಿಂದ ನಾವು ಭಕ್ತಿ ಪೂರ್ವಕವಾಗಿ ಶಿವಪೂಜೆ ಯನ್ನು ಮಾಡಿದೆವು. ಆ ಮೃತ್ಯುಂಜಯನು ನಮ್ಮ ಸ್ವಪ್ನದಲ್ಲಿ ಪ್ರಕಟ ನಾಗಿ:—' ನಿಮಗೆ ಮೂವತ್ತೆರಡು ವರುಷ ಆಯುಷ್ಯವುಳ್ಳ ಮಗನನ್ನು ಕೊಡುವೆನೆ'ಂದು ಹೇಳಿ ಮಾಯವಾದನು ಆ ದೇವಾಧಿದೇವನ ವಾಕ್ಯ ದಂತೆ ಇನ್ನು ಮೂರು ದಿವಸಗಳಿಗೆ ನಿನ್ನ ಆಯುಷ್ಯವು ಮುಗಿಯುತ್ತಿರು ವದು. ಶಿವನೇ ಈ ರೀತಿಯಾಗಿ ವರವನ್ನು ಕೊಟ್ಟಿರಲು, ಅದನ್ನು ತಪ್ಪಿ ಸುವದು ಯಾರಿಂದಾದೀತು? ಎಂದು ಪುನಃ ಕಣ್ಣೀರನ್ನು ಸುರಿಸಿದನು.

ಇದನ್ನೆಲ್ಲ ಕೇಳಿದ ವೀರಗೊಲ್ಲಾಳನು:— ಜನಕಾ, ಪೂರ್ವದಲ್ಲಿ ಹದಿ ನಾರು ವರುಷಗಳ ಆಯುಷ್ಯವನ್ನು ಮಾರ್ಕಾಂಡೇಯನಿಗೆ ಮದನಾರಿಯು ಕೊಟ್ಟಿರಲು, ಪುನಃ ಆತನು ಎಂದಿಗೂ ಮರಣ ಹೊಂದದಂಥ ವರವನ್ನು ಆ ಇಂದುಧರನಿಂದಲೇ ಪಡೆಯಲಿಲ್ಲವೇ? ಅಂಥ ಮಾರ್ಕಾಂಡೇಯನಿಗೆ

ಚಿರಾಯುವಿತ್ತ ಪರಶಿವನೇ ಮೌನೇಶನೆಂಬ ಹೆಸರಿನಿಂದ ಭೂಲೋಕದಲ್ಲಿ ಅವತರಿಸಿರುವನು. ಈಗಲೆ ನಾನು ಆ ಕರುಣಾಸಾಗರನಿಂದ ನೂರು ವರುಷ ಆಯುಶ್ಯವನ್ನು ಪಡೆದುಕೊಂಡು ಬರುತ್ತೇನೆ. ನೀವು ಮಾತ್ರ ದುಃಖವನ್ನು ಬಿಡಿರೆಂದು ಸಮಾಧಾನಪಡಿಸಿ, ಅವರನ್ನು ಕರೆದುಕೊಂಡು ಭೋಜನ ಮಾಡಿದನು.

ಅನಂತರ ಆ ವೀರಗೊಲ್ಲಾಳನು ಡೊಳ್ಳನ್ನು, ಕೊಳಲನ್ನೂ ತೆಗೆದುಕೊಂಡು ಕಾಲಲ್ಲಿ ಗೆಜ್ಜೆಕಟ್ಟಿಕೊಂಡು ಶೃಂಗಾರವಾಗಿ ವೀರಾವೇಶದಿಂದ ಮೌನೇಶ್ವರನ ಬಳಿಗೆ ನಡೆದನು.

ಭಕ್ತೋದ್ಧಾರಕನೂ, ಜಗತ್ಕರ್ತನೂ, ದಯಾಸಮುದ್ರನೂ ಆದ ಮೌನ ಸದ್ಗುರುವು ಆ ಮುದುಗಲ್ಲ ಪಟ್ಟಣದ ಮೂಡಣ ದಿಕ್ಕಿನಲ್ಲಿರುವ ಮಾವಿನ ಮರಗಳ ನೆರಳಿನಲ್ಲಿ ತಾನೇ ತಾನಾಗಿ ತನ್ನನ್ನೇ ಧ್ಯಾನಿಸುತ್ತ ಕುಳಿತಿದ್ದನು.

ಬೆಲ್ಲದ ಹತ್ತರ ನೊಣಗಳೂ, ವೈದ್ಯರ ಹತ್ತರ ರೋಗಿಗಳೂ, ಗುರುಗಳ ಬಳಿಯಲ್ಲಿ ಶಿಷ್ಯರೂ ನೆರೆದಿರುವಂತೆ, ಆ ಪರಮ ಗುರುವಾದ ಮೌನೇಶ್ವರನ ಹತ್ತರ ವರವನ್ನು ಬೇಡುವ ಜನಸಮೂಹವು ನೆರೆವಿತ್ತು. ಆತನು ಒಬ್ಬರನ್ನಾದರೂ ದಿಟ್ಟಿಸಿ ನೋಡಲೊಲ್ಲನು; ಒಬ್ಬರ ಕೂಡಾದರೂ ಮಾತಾಡಲೊಲ್ಲನು.

ಹೀಗಿರುವ ಶ್ರೀಮೌನೇಶನ ಬಳಿಗೆ ವೀರಗೊಲ್ಲಾಳನು ಬಂದು ದೀರ್ಘದಂಡ ನಮುಸ್ಕಾರ ಮಾಡಿ, ಡೊಳ್ಳನ್ನು ಬಾರಿಸುತ್ತ ಗತ್ತಿಗೆ ಸರಿಯಾಗಿ ಗೆಜ್ಜೆ ಕಟ್ಟಿದ ಹೆಜ್ಜೆಗಳನ್ನು ಹಾಕುತ್ತ ವೀರಾವೇಶದಿಂದ ಕುಣಿಯಲಿಕ್ಕೆ ಹತ್ತಿದನು. ಮತ್ತಾತನು ಒಂದಾವರ್ತಿ ಕೊಳಲನ್ನು ಬಾರಿಸುತ್ತ ಕುಣಿಯುತ್ತಿದ್ದನು ಒಂದಾವರ್ತಿ ಡೊಳ್ಳನ್ನು ಬಾರಿಸುತ್ತ ಹಾಡುತ್ತಿದ್ದನು. ಒಂದಾವರ್ತಿ ಪದಗಳನ್ನು ಹೇಳುತ್ತ ನರ್ತನ ಮಾಡುತ್ತಿದ್ದನು.

ಈ ರೀತಿಯಾಗಿ ಕುಣಿ-ಕುಣಿದು ಗೊಲ್ಲಾಳನ ದೇಹದಲ್ಲಿ ನೀರಿಳಿದು ಪಚ್ಚೈಲ ಸ್ನಾನ ಮಾಡಿದಂತೆ ಅವನ ಅರಿವೆಗಳೆಲ್ಲ ತೊಯ್ದು ಹೋಗಿದ್ದವು. ಆದರೂ ಆತನು ಸ್ವಲ್ಪಾದರೂ ಬೇಸರಿಯದಂತೆ ಭಕ್ತಿಪುರಸ್ಸರವಾಗಿ ಕುಣಿಯುತ್ತಲೇ ಇದ್ದನು. ಮೂಢನಾದರೂ ದೇವರ ದಯೆಗೆ ಪಾತ್ರನಾಗಬೇಕಾದರೆ ನಿಜವಾದ ಭಕ್ತಿಯೇ ಬೇಕು ಇಲ್ಲದಿದ್ದರೆ ಯಾವದೂ ಸಾಧ್ಯವಾಗ

ಲಾರದು; ಯಾಕೆಂದರೆ ಗುಡ್ಡಗಾಡುಗಳಲ್ಲಿ ಕುಳಿತು ಗಡ್ಡೆ-ಗೆಣಸುಗಳನ್ನು ಸೇವಿಸಿ ತಪಸ್ಸು ಮಾಡುತ್ತಿರುವ ಋಷಿಗಳಿಗೂ ಸಹ ದುರ್ಲಭವಾದ ಪರಮಾತ್ಮನನ್ನು ಪ್ರಾಪಂಚಿಕರಾದ ಎಷ್ಟೋ ಜನ ಮುಗ್ಧರು ನಿಜಭಕ್ತಿ ಎಂಬ ಬಲವಾದ ಆಜ್ಞೆಯಿಂದ ಕುಣಿಸಾಡಿಬಿಟ್ಟಿರುವರು!

ಅದರಂತೆ ವೀರಗೊಲ್ಲಾಳನಾದರೂ ತನು ಮನ ಧನಗಳನ್ನು ಮೌನ ಪರಮಾತ್ಮನಿಗೊಪ್ಪಿಸಿ, ಹಸಿವೆ-ತೃಷೆಗಳಿಲ್ಲದೆ ಮೂರು ದಿವಸಗಳ ವರೆಗೂ ಹಗಲು ರಾತ್ರಿಗಳೆನ್ನದೆ ಒಂದೇಸವನೆ ಡೊಳ್ಳನ್ನು ಬಾರಿಸುತ್ತ ಕುಣಿದನು. ಆತನ ದೃಢಭಕ್ತಿಯನ್ನು ನೋಡಿ ಪಟ್ಟಣದ ಜನರೆಲ್ಲರೂ ಆಶ್ಚರ್ಯಭರಿತರಾಗಿದ್ದರು. ಆ ಗಟ್ಟಿಮನಸ್ಸಿನ ಗೊಲ್ಲಾಳನು ಮೌನೇಶ್ವರನ ಚರಣಾರವಿಂದಗಳಲ್ಲಿಯೇ ಮನಸ್ಸಿಟ್ಟು ಎಷ್ಟು ಕುಣಿದರೂ ಮೌನೇಶನು ದಿಟ್ಟಿಸಿ ನೋಡಲಿಲ್ಲ, ಆಗ ಆತನು ಕೈಯಲ್ಲಿ ಬಾಕನ್ನು ತೆಗೆದುಕೊಂಡು:—ದೇವಾ! ನಿನಗೆ ಕೃಪಾಸಮುದ್ರನೆಂದು ಎಲ್ಲರೂ ಹೇಳುತ್ತಿರುವರು. ಅಂಥ ನೀನು ನನ್ನ ಮೇಲೆ ಹೀಗೇಕೆ ನಿರ್ದಯನಾಗಿರುವೆ? ಇಗೋ ನೋಡು, ನಿನ್ನ ಚರಣಾರವಿಂದಗಳಿಗೆ ಈ ಶರೀರವನ್ನು ಅರ್ಪಿಸಿ ಬಿಡುತ್ತೇನೆ, ಎಂದು ಬಾಕಿನಿಂದ ಹೊಟ್ಟೆಯಲ್ಲಿ ಇರಿದುಕೊಳ್ಳಲಿಕ್ಕೆ ಹೋದನು.

ಆ ಕ್ಷಣವೇ ಮೌನಪರಮಾತ್ಮನು ಗೊಲ್ಲಾಳನ ಹತ್ತರವೇ ಪ್ರಕಟನಾಗಿ:—'ಭಕ್ತಶ್ರೇಷ್ಠನೇ! ನಿಲ್ಲು, ನಿಲ್ಲು!! ಪ್ರಾಣತ್ಯಾಗ ಮಾಡಿಕೊಂಡು ಆತ್ಮಹತ್ಯಾ ದೋಷಕ್ಕೆ ಪಾತ್ರನಾಗಬೇಡ; ನಿನ್ನ ಅಚಲವಾದ ಭಕ್ತಿಗೆ ಸಂತುಷ್ಟನಾಗಿರುವೆನು. ಬೇಗನೆ ನಿನ್ನ ಮನಸ್ಸಿನ ಅಭೀಷ್ಟೆಯನ್ನು ತಿಳಿಸು, ಕೊಡುತ್ತೇನೆ.' ಎಂದು ಹೇಳಿದನು

ಗೊಲ್ಲಾಳನು ಮೌನಗುರುವಿನ ಪಾದಾರವಿಂದಗಳಿಗೆ ಅಭಿವಂದಿಸಿ:—ಸದ್ಗುರೋ, ನೀನು ಮೆಚ್ಚಿದ್ದಾದರೆ ನನಗೆ ದೇವರು ಕೊಟ್ಟ ಮೂವತ್ತೆರಡು ವರುಷದ ಆಯುಷ್ಯವು ಇಂದಿಗೆ ಮುಗಿದುಹೋಗಿರುವದು; ಕಾರಣ ಕಾರುಣ್ಯನಿಧಿಯಾದ ನೀನು ನನಗೆ ನೂರು ವರುಷ ಆಯುಷ್ಯವನ್ನು ಕೊಟ್ಟು ಉದ್ಧರಿಸು! ಎಂದು ಬೇಡಿಕೊಂಡನು.

ಆಗ ಪರಮ ದಯಾಳುವಾದ ಮೌನೇಶನು ನಗುತ್ತ:—'ಮಗನೇ, ಇಲ್ಲಿ ಬಾ' ಎಂದು ತನ್ನ ಹತ್ತರ ಕರೆದೊಯ್ದು ಕೂಡ್ರಿಸಿ, ಅವನ ಹಣೆಯ

ಲ್ಲಿರುವ ಬ್ರಹ್ಮಬರೆಹವನ್ನು ಒರೆಸಿ ಪುನಃ ತನ್ನ ಕಿರಿಬೆರಳಿನಿಂದ ನೂರು ವರುಷ ಆಯುಷ್ಯವನ್ನು ಬರೆದು:—'ಭಕ್ತನೇ, ನಿನ್ನ ಇಷ್ಟದಂತೆ ನೂರು ವರುಷ ಆಯುಷ್ಯವನ್ನು ಕೊಟ್ಟಿರುವೆನು. ಅಲ್ಲಿಯ ವರೆಗೂ ನೀನು ನನ್ನನ್ನು ಧ್ಯಾನಿಸುತ್ತ ಸುಖವಾಗಿರು. ಅನಂತರ ನಿನಗೆ ಮೋಕ್ಷಸುಖವನ್ನು ಕೊಡುವೆನು' ಎಂದು ಹೇಳಿದನು.

ಆಗ ಗೊಲ್ಲಾಳನ ಆನಂದಕ್ಕೆ ನೆಲೆಯಿಲ್ಲದಂತಾಗಿ:—ಸದ್ಗುರೋ, ನನ್ನಂಥ ಅನಾಥರನ್ನು ಉದ್ಧರಿಸಲಿಕ್ಕಾಗಿಯೇ ನಿನ್ನ ಅವತಾರವಾಗಿರುವದು. ಈ ತರುಳನ ಮೇಲೆ ನಿನ್ನ ಚರಣಕೃಪೆ ಮಾತ್ರ ಇರಲಿ, ಎಂದು ಮೌನಗುರುವಿನ ಚರಣಗಳ ಮೇಲೆ ಬಿದ್ದು ಮೇಲಕ್ಕೆದ್ದು ನೋಡಲು ಮೌನಗುರುವು ಅದೃಶ್ಯನಾಗಿದ್ದನು. ಗೊಲ್ಲಾಳನು ಮೌನೇಶನ ಮಹಿಮೆಯನ್ನು ಕೊಂಡಾಡುತ್ತ ಮನೆಗೆ ಬಂದು ವ್ಯಸನಭರಿತರಾಗಿರುವ ತಂದೆ-ತಾಯಿಗಳಿಗೆ ನಡೆದ ಸಂಗತಿಯನ್ನೆಲ್ಲ ಹೇಳಿದನು.

ಅದನ್ನು ಕೇಳಿದ ಅವರು ಸಂತೋಷಸಾಗರದಲ್ಲಿ ಮುಳುಗಿ ಮೌನದೇವನ ಮಹಾಮಹಿಮೆಯನ್ನು ಹೊಗಳಹತ್ತಿದ್ದರು. ವೀರಗೊಲ್ಲಾಳನು ಯಾವಾಗಲೂ ಮೌನಪರಮಾತ್ಮನನ್ನು ಧ್ಯಾನಿಸುತ್ತ ಸುಖದಿಂದಿದ್ದನೆಂಬಲ್ಲಿಗೆ ಹದಿಮೂರನೇ ಅಧ್ಯಾಯ ಸಂಪೂರ್ಣವು.

---

ಶ್ರೀ ಮೌನಗುರು ಪರಬ್ರಹ್ಮಣೇ ನಮಃ।
ಶ್ರೀ ಗಣೇಶಾಯ ನಮಃ॥

# ಹದಿನಾಲ್ಕನೆಯ ಅಧ್ಯಾಯ



ಧರ್ಮೋಪದೇಶ

ಕಲ್ಯಾಣ ಪಟ್ಟಣವನ್ನು ಬಿಜ್ಜಳೇಂದ್ರನೆಂಬ ಅರಸನು ಕ್ರಿಸ್ತಶಕದ ೧೧೫೬ರಲ್ಲಿ ಆಳುತ್ತಿದ್ದನು. ಆತನು ಅತ್ಯಂತ ಶೂರನೂ, ನೀತಿಕೋವಿದನೂ, ಪ್ರಜೆಗಳಿಗೆ ಹಿತಮಾಡತಕ್ಕವನೂ, ಪಕ್ಷಪಾತವಿಲ್ಲದವನೂ ಆಗಿ ಮೆರೆಯುತ್ತಿದ್ದನು. ಆತನಿಗೆ ಸದಾಚಾರ ಸಂಪನ್ನನೂ, ಸತ್ಯಸಂಧನೂ

ಸಕಲಶಾಸ್ತ್ರಗಳಲ್ಲಿ ನಿಪುಣನೂ, ಶಿವಾಂಶಸಂಭೂತನೂ, ಮಹಾಮಹಿಮನೂ, ಆದ ವೀರಶೈವ ಧರ್ಮದ ಬಸವೇಶ್ವರನೆಂಬ ಮಂತ್ರಿಯು ಇದ್ದನು. ಆತನು ಯಾವಾಗಲೂ ಗುರು—ಲಿಂಗ—ಜಂಗಮಾರ್ಚನೆಯಲ್ಲಿ ತತ್ಪರನಾಗಿದ್ದ ನಲ್ಲದೆ ಒಂದು ಲಕ್ಷದ ಮೇಲೆ ತೊಂಬತ್ತಾರುಸಾವಿರ ಗಣಂಗಗಳಿಗೆ ನಿತ್ಯ ಭೋಜನ ಮಾಡಿಸುವ ವ್ರತವನ್ನು ಕೈಕೊಂಡಿದ್ದನು; ಮತ್ತು ಆ ಮಹಾ ಪುರುಷನು ಪಂಚಪುರುಷವುಳ್ಳವನಾದ್ದರಿಂದ ಜೈನಮಂಡಳಿಯ ಯಾವ ಆಟವೂ ಆತನ ಮೇಲೆ ನಡೆಯುತ್ತಿದ್ದಿಲ್ಲ. ಕಾರಣ ಲಿಂಗಾಯತ ಧರ್ಮ ದವರಾದರೂ ಅಲ್ಲಿ ವಿಶೇಷವಾಗಿದ್ದರು.

ಈ ಮೇರೆಗೆ ರಾಜಬಲದಿಂದ ಜೈನ ಮಂಡಳಿಯೂ, ಮಂತ್ರಿ ಬಲ ದಿಂದ ವೀರಶೈವ ಮಂಡಳಿಯೂ ಅತಿಶಯವಾಗಿರುವ ಕಲ್ಯಾಣ ಪಟ್ಟಣಕ್ಕೆ ಎಲ್ಲ ದೇವರ ದೇವನಾದ ಮೌನಪರಮಾತ್ಮನು ಅಲ್ಲಲ್ಲಿಯ ಕಲ್ಲ ದೇವರನ್ನು ಮಾತಾಡಿಸುತ್ತ ಅನೇಕ ಮಹಿಮೆಗಳನ್ನು ತೋರಿಸುತ್ತ ಸದ್ಭಕ್ತರನ್ನು ಉದ್ಧರಿಸುತ್ತ ವಿಕಾರಸ್ವರೂಪನ್ನು ಧರಿಸಿ ಬಂದನು. ಆ ಮಹಾತ್ಮನು ಒಂದು ಪಾದಕ್ಕೆ ಲಿಂಗವನ್ನೂ, ಮತ್ತೊಂದು ಪಾದಕ್ಕೆ ಯಜ್ಞೋಪವೀತ ವನ್ನೂ ಕಟ್ಟಿಕೊಂಡಿದ್ದನು. ಕರಿಯ ಕೋರಿಯ ಅಂಗಿಯನ್ನು ತೊಟ್ಟಿ ದ್ದನು. ಅದೇ ಜಾತಿಯ ಲುಂಗಿಯನ್ನು ಉಟ್ಟಿದ್ದನು. ತಲೆಯ ಮೇಲೆ ಟೊಪ್ಪಿಗೆಯನ್ನು ಹಾಕಿದ್ದನು. ಕೈಯಲ್ಲಿ ಚಪ್ಪಗೊಡಲಿಯನ್ನು ಹಿಡಿ ದಿದ್ದನು.

ಆ ಮಾಯಗಾರನ ವಿಚಿತ್ರ ರೂಪವನ್ನು ಯಾರಿಂದ ವರ್ಣಿಸುವ ದಾದೀತು? ತೊಟ್ಟಿರುವ ಅಂಗಿಯು ಭೂಲೋಕಕ್ಕೆ ಮಳೆ ಸುರಿಯುವ ಹಾಗೆ ಆಜ್ಞೆ ಮಾಡುತ್ತಿತ್ತು; ಉಟ್ಟಿರುವ ಲುಂಗಿಯು ಬೆಳೆಗಳಿಗೆ ಹುಳಗಳ ಬಾಧೆ ಯಾಗದಂತೆ ಶಾಂತಿಯನ್ನುಂಟು ಮಾಡಿ ಕಾಪಾಡುತ್ತಿತ್ತು. ಕೈಯಲ್ಲಿ ಹಿಡಿ ದಿರುವ ಕೊಡಲಿಯಲ್ಲಿ ಅನೇಕ ಕೋಟಿ ಬ್ರಹ್ಮಾಂಡಗಳು ಅಡಗಿ ಹೋಗಿ ದ್ದವು. ಇದಲ್ಲದೆ ಆ ಕೊಡಲಿಯು ಶಿಷ್ಟ ಜನರ ಇಷ್ಟಾರ್ಥವನ್ನು ಕೊಟ್ಟು ರಕ್ಷಿಸುತ್ತಿತ್ತು; ದುಷ್ಟ ಜನರ ಹುಟ್ಟು ಬೇರನ್ನು ಕಡಿದು ಹಾಕುತ್ತಿತ್ತು.

ಹೀಗೆ ಮಾಯಾರೂಪವನ್ನು ಧರಿಸಿದ ಮೌನೇಶನು ಕಲ್ಯಾಣಪಟ್ಟಣ ದಲ್ಲಿರುವ ರಾಜಬೀದಿಯನ್ನು ಹಿಡಿದು ಬಿಜ್ಜಳರಾಜನ ಅರಮನೆಯ ಸಮೀ

ಪಕ್ಕೆ ಬಂದನು. ಬಿಜ್ಜಳೇಂದ್ರನು ಸಭೆಯಲ್ಲಿ ರತ್ನಖಚಿತವಾದ ಸಿಂಹಾಸನದ ಮೇಲೆ ಕುಳಿತಿದ್ದನು. ಬಸವೇಶ್ವರನು ಮಹಾರಾಜನ ಬಲಭಾಗದಲ್ಲಿ ಮಣಿಖಚಿತವಾದ ಪೀಠದಲ್ಲಿ ಮಂಡಿಸಿದ್ದನು. ಸೇನಾಪತಿ ಮುಂತಾದ ಪ್ರಮುಖರು ತಮ್ಮ-ತಮ್ಮ ಯೋಗ್ಯಾಸನಗಳಲ್ಲಿ ಕುಳಿತಿದ್ದರು; ಮತ್ತು ಶಿವನೇ ಶ್ರೇಷ್ಠ ದೇವರೆಂದು ಹೇಳುವ ಗಣಸ್ತೋಮವು ಒಂದು ಕಡೆಯಲ್ಲಿಯೂ, ಜಿನ್ನನೇ ಶ್ರೇಷ್ಠ ದೇವರೆಂದು ಹೇಳುವ ಜೈನ ಮಂಡಳಿಯೊಂದು ಕಡೆಯಲ್ಲಿಯೂ ಮಂಡಿಸಿತ್ತು. ಜೈನ ಭಕ್ತರು ಬಿಜ್ಜಳೇಂದ್ರನನ್ನು ಹೊಗಳುತ್ತಿದ್ದರು. ಶಿವಭಕ್ತರು ಬಸವೇಶ್ವರನನ್ನು ಕೊಂಡಾಡುತ್ತಿದ್ದರು. ಶಿವ ಮತ್ತು ಜಿನ್ನದೇವರ ಸಂಬಂಧವಾಗಿ ವಾದ-ವಿವಾದಗಳು ನಡೆಯುತ್ತಲೇ ಇದ್ದವು. ಶೈವಪಂಡಿತರು ವೇದಾಗಮಗಳ ಪ್ರಮಾಣದಿಂದ ಶಿವನೇ ಶ್ರೇಷ್ಠನೆಂದು ಸಿದ್ಧಮಾಡಿ ತೋರಿಸುತ್ತಿದ್ದರು. ಜೈನ ಪಂಡಿತರು ಜಿನ್ನನೇ ಶ್ರೇಷ್ಠನೆಂದು ಶಾಸ್ತ್ರಾಧಾರಗಳ ಮೇಲಿಂದ ನಿಶ್ಚಯಿಸುತ್ತಿದ್ದರು. ಮಹಾತ್ಮರ ಮುಂದೆ ಎಂಥ ಪಂಡಿತರ ಆಟ ಸಾಗುವದು? ದ್ವಿತೀಯ ಶಂಭುವಾದ ಬಸವೇಶ್ವರನ ಮುಂದೆ ಜೈನ ಪಂಡಿತರ ಆಟ ನಡೆಯದೆ, ಮೇಲಿಂದ ಮೇಲೆ ಮುಖಭಂಗಿತರು ಮಾತ್ರ ಆಗುತ್ತಿದ್ದರು

ಹೀಗಿರುವ ಮಹಾಸಭೆಯ ಮಹಾದ್ವಾರದ ಮುಂದೆ ಮಹಾಮಹಿಮನಾದ ಮೌನದೇವನು ಮೇಲೆ ಹೇಳಲ್ಪಟ್ಟ ವಿಕಾರರೂಪಿನಿಂದ ಬಂದು ನಿಲ್ಲಲು, ದ್ವಾರ ಪಾಲಕನು ಆತನನ್ನು ಕಂಡು:—ಏನಯ್ಯಾ, ನೀನು ಯಾರು? ನಿನ್ನ ಊರಾವದು? ಇಲ್ಲಿಗೆ ಯಾತಕ್ಕೆ ಬಂದೆ? ಎಂದು ಕೇಳಿದನು

ಆ ಮಾತಿಗೆ ಮೌನಪರಮಾತ್ಮನು—ದ್ವಾರರಕ್ಷಕನೇ, ನಾನು ಯಾರೆಂದು ಹೇಳಬೇಕೇ? ನನಗೆ ಆಕಾಶವೇ ಮನೆಯು, ಪಂಚಾಕ್ಷರೀ ಮಂತ್ರವೇ ಗದ್ದುಗೆಯು. ಮೂರು ಲೋಕಗಳಲ್ಲಿಯೂ ನನಗೆ ಬಂಧು-ಬಾಂಧವರು ಯಾರೂ ಇರುವದಿಲ್ಲ. ಯಾವಾಗಲೂ ನಾನೊಬ್ಬನೇ ಇರುವೆನು. ಇಂಥ ಅನಾಥನಾದ ನಾನು ಬಸವೇಶ್ವರನ ಉದಾರ ಗುಣಗಳನ್ನೂ ಬಿಜ್ಜಳೇಂದ್ರ ಮಹಾರಾಜನ ಸತ್ವ ಗುಣಗಳನ್ನೂ ಕೇಳಿ ಇಲ್ಲಿ ಮಾತ್ರ ನನ್ನ ರಕ್ಷಣವು ಚನ್ನಾಗಿ ಆಗುವದೆಂಬ ಆಶೆಯಿಂದ ಬಂದಿರುತ್ತೇನೆ. ಆವ

ರಾದರೂ ಪರದೇಶಿಯಾದ ನನ್ನನ್ನು ಕಣ್ದೆರೆದು ನೋಡುವರೋ ಇಲವೋ ಯಾರಿಗೆ ಗೊತ್ತು? ಎಂದು ಹೇಳಿದನು.

ಈ ರೀತಿಯಾಗಿ ಹೇಳುವ ಮೌನಪರಮಾತ್ಮನ ಮಾತುಗಳನ್ನು ಕೇಳಿ, ಸಭೆಯಲ್ಲಿರುವ ಶೈವ ಮಂಡಲಿಯೂ, ಜೈನ ಮಂಡಲಿಯೂ ಹೊರಗೆ ಬಂದು ಆತನ ಅಕ್ರಮವನ್ನು ನೋಡಿ, ಮನಸ್ಸಿನಲ್ಲಿ ಕೋಪಗೊಂಡದಲ್ಲದೆ ಈ ದುರಾಚಾರಿಯನ್ನೇನು ಮಾಡಬೇಕೆಂದು ಹಲ್ಲು ಕಡಿಯಹತ್ತಿದರು.

ಅವರಲ್ಲಿ ಜಂಗಮ ಸಮೂಹವು—ಎಲೈ ದುಷ್ಟನೇ, ಇಷ್ಟಲಿಂಗವನ್ನು ಹೃದಯದ ಮಧ್ಯದಲ್ಲಿ ಧರಿಸಿಕೊಳ್ಳುವದು ಲೋಕಸಮ್ಮತವಾದದ್ದು. ಅದನ್ನು ಬಿಟ್ಟು ಪಾದದಲ್ಲಿ ಕಟ್ಟಿಕೊಂಡಿರುವ ಭ್ರಷ್ಟನಾದ ನಿನ್ನ ಮುಖವನ್ನು ನೋಡುವದು ಪಾಪಕರವಲ್ಲವೇ? ಎಂದು ಪಾದದಲ್ಲಿರುವ ಲಿಂಗವನ್ನು ಹರಿಯುವಂತೆ ಹಿಡಿದೆಳೆದರು.

ಜೈನಸಮೂಹವು—ಮೂರ್ಖನೇ, ಮನುಷ್ಯರ ಅಜ್ಞಾನವನ್ನು ನಾಶಮಾಡಿ ಸುಜ್ಞಾನವನ್ನುಂಟು ಮಾಡುವ ಯಜ್ಞೋಪವೀತವನ್ನು ಪಾದದಲ್ಲಿ ಕಟ್ಟಿಕೊಳ್ಳಬೇಕಾದರೆ ನೀನು ಎಷ್ಟು ದುರಹಂಕಾರಿ ಇರುವೆ? ಎಂದು ಜನಿವಾರವನ್ನು ಹಿಡಿದೆಳೆದರು.

ಹೀಗೆ ಎಳೆದಾಕ್ಷಣವೇ ಮೂರು ಲೋಕಗಳೂ ನಡುಗಿದವು; ಇದಲ್ಲದೆ ಜಂಗಮಸಮೂಹದ ಮತ್ತು ಜೈನ ಸಮೂಹದ ಕಣ್ಣುಗಳು ಕತ್ತಲುಗೂಡಿಸಿದಂತಾಗಿ ಏನೂ ಕಾಣದ ಹಾಗಾಯಿತು. ಆಗ ಅವರೆಲ್ಲರೂ ಆಶ್ಚರ್ಯಭರಿತರಾಗಿ:—ಅಹಾ! ಈತನು ಲಿಂಗಧಾರಿಯಾದ ಜಂಗಮನೂ ಅಲ್ಲ; ಯಜ್ಞೋಪವೀತವನ್ನು ಧರಿಸಿದ ಬ್ರಾಹ್ಮಣನೂ ಅಲ್ಲ! ಈತನ ಸ್ಥಿತಿಯನ್ನು ನೋಡಿದರೆ ವಿಪರೀತವಾಗಿರುವ ಹಾಗಿದೆ ಕಾರಣ ಈ ಮಹಿಮನು ನಮ್ಮ ಮನಸ್ಸನ್ನು ಪರೀಕ್ಷಿಸಲಿಕ್ಕೆ ಬಂದ ಸಾಕ್ಷಾತ್ ಪರಮೇಶ್ವರನೇ ಆಗಿರಬಹುದು; ಆದ್ದರಿಂದಲೇ ನಮ್ಮ ಕಣ್ಣುಗಳು ಕಾಣದಂತಾದವು. ಅಕಟಾ! ನಾವು ಯಾಕಾದರೂ ಈ ಮಹಾಪುರುಷನ ಗೊಡವಿಗೆ ಹೋದೆವು? ನಮ್ಮ ಅಜ್ಞಾನವನ್ನು ಎಷ್ಟೆಂದು ಹೇಳಬೇಕು? ಎಂದು ಗೋಳಾಡುತ್ತಿದ್ದರು. ಸಿಂಹಾಸನದಲ್ಲಿ ಕುಳಿತಿರುವ ಬಿಜ್ಜಳೇಂದ್ರನಿಗೂ ಸಹ ಕಣ್ಣುಗಳು ಕತ್ತಲುಗೂಡಿಸಿದಂತಾಗಿ ಇದೇನು ವಿಚಿತ್ರವೆಂದು ಬೆರಗಾಗಿ ಹೋಗಿದ್ದನು.

ಸದ್ಗುರುವಿನ ನಿಜಸ್ಥಿತಿಯು ಸದ್ಭಕ್ತರಿಗಲ್ಲದೆ ಇತರರಿಗೆ ಹೇಗೆ ತಿಳಿಯಬೇಕು? ಎಲ್ಲರೂ ಹೀಗೆ ಗೋಳಾಡುತ್ತಿರುವದನ್ನು ಸದ್ಗುಣಸಿಧಿಯಾದ ಬಸವೇಶ್ವರನು ಕಂಡು, ಈತನು ಪರಬ್ರಹ್ಮನಾದ ಮೌನಗುರುವೆಂದು ತಿಳಿದು ಬೇಗನೆ ಮೇಲೆಕ್ಕೆದ್ದು ಒಂದು ಗುರುಚರಣಾರವಿಂದಗಳಿಗೆ ನಮಸ್ಕರಿಸಿ:—'ಗುರುನಾಥಾ, ನೀವು ಈ ನರಲೋಕದಲ್ಲಿ ಏಕೆ ಬಂದೆ? ಲೋಕೋದ್ಧಾರದ ಸಲುವಾಗಿ ನೀನು ಅವತರಿಸಿ ಸಂಚರಿಸುತ್ತಿದ್ದರೂ ಹೀಗೆ ಮಾಯಾರೂಪಿನಿಂದ ಬಂದರೆ ನಿನ್ನ ಘನಮಹಿಮೆಯನ್ನು ಅರಿಯುವದಾದರೂ ಹೇಗೆ? ದಯವಿಟ್ಟು ಇವರೆಲ್ಲರ ಅಪರಾಧಗಳನ್ನು ಕ್ಷಮಿಸಿ ಭಕ್ತೋದ್ಧಾರಕನೆಂಬ ಬಿರುದನ್ನು ಮೆರೆಯಿಸು' ಎಂದು ಬೇಡಿಕೊಂಡನು.

ಮೌನಪರಮಾತ್ಮನು ಬಸವೇಶ್ವರನ ಭಕ್ತಿ-ಭಾವಕ್ಕೆ ಮೆಚ್ಚಿ ತಾನು ಧರಿಸಿದ ವಿಕಾರರೂಪವನ್ನು ತ್ಯಜಿಸಿ, ಮೌನರೂಪಿನಿಂದ ಪ್ರಕಟನಾಗಿ:—ಭಕ್ತಶ್ರೇಷ್ಠನೇ, ಇವರ ಅಪರಾಧವನ್ನು ನಾನೇಕೆ ಕ್ಷಮಿಸಬೇಕು? ಲೋಕಪೂಜ್ಯವಾದ ನಿನ್ನ ಸತ್ವಗುಣವೇ ಕ್ಷಮಿಸುವದು' ಎಂದು ಅನ್ನಲು, ಆ ಕ್ಷಣವೇ ಎಲ್ಲರ ಕಣ್ಣುಗಳು ಮೊದಲಿನಂತೆ ಕಾಣಲಿಕ್ಕೆ ಹತ್ತಿದವು. ಆಗ ಜಂಗಮ ಸಮೂಹವೂ, ಜೈನ ಸಮೂಹವೂ ಮೌನದೇವನ ಪಾದಗಳಿಗೆ ನಮಸ್ಕರಿಸಿ:—ಪ್ರಭುವೇ, ನಿನ್ನ ಮಾಯಾ ನಟನೆಯನ್ನು ತಿಳಿಯಲು ಅಜ್ಞರಾದ ನಮಗೆ ಸಾಧ್ಯವೇ? ಎಂದು ಪ್ರಾರ್ಥಿಸಿದರು. ರಾಜನೂ ಸಹ ಎದ್ದು ಬಂದು, ಗುರುಪಾದಗಳ ಮೇಲೆ ಬಿದ್ದು:-ದೇವಾಧಿದೇವಾ, ಈ ಸೇವಕನಿಗೆ ನೀನು ದರ್ಶನ ಕೊಟ್ಟಿದ್ದರಿಂದ ನನ್ನ ವಂಶವು ಪವಿತ್ರವಾಯಿತಲ್ಲದೆ ನಾನು ಪರಮ ಧನ್ಯನಾಗಿ ಹೋದೆನು, ಎಂದು ದೈನ್ಯಭಾವದಿಂದ ಹೇಳಿಕೊಂಡನು.

ಬಸವೇಶ್ವರನು ಶ್ರೀ ಮೌನಗುರುವಿನ ಕೈಹಿಡಿದು ಕರೆದೊಯ್ದು ಸಿಂಹಾಸನದ ಮೇಲೆ ಕೂಡ್ರಿಸಿ ಪಾದಪೂಜೆಯನ್ನು ಮಾಡಿ, ಕೃತಾರ್ಥನಾದನು. ಮೌನಗುರುವು ಗಣಸಮೂಹವನ್ನು ಕುರಿತು:—ಜಂಗಮ ಸಮೂಹವೇ, ಲಿಂಗ ಲಿಂಗವೆಂದು ಬಡಿದಾಡುತ್ತಿರುವ ನಿಮಗೆ ಆ ಮಹಾಲಿಂಗದ ವಿಷಯವನ್ನು ಹೇಳುವೆನು ಕೇಳಿರಿ. ಆಕಾಶದಲ್ಲಿ ಸಂಚರಿಸುತ್ತಿರುವ ಸೂರ್ಯ-ಚಂದ್ರರೂ, ಪ್ರಕಾಶಿಸುತ್ತಿರುವ ನಕ್ಷತ್ರಗಳೂ, ಸುರಿಯು

ತ್ತಿರುವ ಮಳೆಯೂ, ಬೆಳೆಯುತ್ತಿರುವ ಧಾನ್ಯಗಳೂ, ಬೀಸುತ್ತಿರುವ ಗಾಳಿಯೂ, ಪ್ರಜ್ವಲಿಸುತ್ತಿರುವ ಅಗ್ನಿಯೂ, ಹರಿಯುತ್ತಿರುವ ನದಿಗಳೂ, ನಿರ್ಮಲವಾದ ಆಕಾಶವೂ, ಸರ್ವಕ್ಕೂ ಆಧಾರಭೂತವಾದ ಭೂಮಿಯೂ ಸಚರಾಚರ ಪ್ರಾಣಿಗಳೂ ಇವುಗಳೆಲ್ಲ ಲಿಂಗ ಸ್ವರೂಪವೇ ಆಗಿರುವವು. ಲಿಂಗವೆಂಬ ವಸ್ತುವು ಜಗತ್ತಿನಲ್ಲಿ ಎಲ್ಲ ಕಡೆಗೂ ಪರಿಪೂರ್ಣವಾಗಿರುವದು. ಲಿಂಗವಿಲ್ಲದ ಸ್ಥಳವು ಎಲ್ಲಿ ಹುಡುಕಿದರೂ ಸಿಗುವ ಹಾಗಿಲ್ಲ.

ಹೀಗಿರುವ ಆದಿಲಿಂಗದ ಮೂಲಸ್ವರೂಪವು ನಿರಾಕಾರವೂ, ನಿರ್ಗುಣವೂ, ನಿರಾಮಯವೂ, ನಿರ್ವಿಕಲ್ಪವೂ, ಸ್ವಯಂಪ್ರಕಾಶವೂ, ನಿತ್ಯಾನಂದವೂ, ವೇದಾಗಮಗಳಿಗೆ ಅಗೋಚರವೂ ಆಗಿರುವದು. ಆ ವಸ್ತುವಿಗೆ ಬ್ರಹ್ಮವೆಂತಲೂ, ಪರಬ್ರಹ್ಮವೆಂತಲೂ, ಆತ್ಮನೆಂತಲೂ, ಪರಮಾತ್ಮನೆಂತಲೂ ಜ್ಞಾನಿಗಳು ಹೇಳುತ್ತಿರುವರು. ಅಂಥ ಪರಬ್ರಹ್ಮ ವಸ್ತುವನ್ನು ವರ್ಣಿಸುವದಕ್ಕೆ ಶಾಸ್ತ್ರಗಳು ಬೇಕಾದಷ್ಟು ಪ್ರಯತ್ನಪಟ್ಟಾಗ್ಯೂ ಸಾಧ್ಯವಾಗುವಹಾಗಿಲ್ಲ; ಅವು ಒಂದಕ್ಕೊಂದು ವಿರುದ್ಧವಾದಿಗಳಾಗುವವು. ಒಂದು ಶಾಸ್ತ್ರವು ಬ್ರಹ್ಮವೆಂದು ಹೇಳಿದರೆ ಮತ್ತೊಂದು ಶಾಸ್ತ್ರವು ಅದನ್ನು ಅನ್ಯರೀತಿಯಿಂದ ಪ್ರತಿಪಾದಿಸುತ್ತಿರುವದು ವೇದಗಳೂ ಸಹ ನೇತಿ ನೇತಿ ಎಂದು ಹೇಳುತ್ತಿರುವವು. ಯೋಗಿಗಳ ಸಂಘವೂ ಸಹ ಪರಬ್ರಹ್ಮನನ್ನು ವರ್ಣಿಸುತ್ತ ಅದನ್ನು ತಿಳಿಯದೆ ಸ್ತಬ್ಧವಾಗಿ ಹೋದವು. ವೇದಾಂತಿಗಳ ಅದ್ವೈತವಾದದ ಮಾತುಗಳೂ ಸಹ ನಾಚಿಹೋದವು. ಅದನ್ನು ತಿಳಿಯಲಿಕ್ಕೆ ಅಂತರಂಗ ಬಹಿರಂಗಗಳಲ್ಲಿ ಸಮದರ್ಶನವುಳ್ಳವರಾಗುವದೇ ಅನುಭವದ ಗುರುತಾಗಿದೆ

ಅದುಕಾರಣದಿಂದಲೇ ಜ್ಞಾನಿಗಳು—'ಸರ್ವಮೇಕಮಿದಂ ಶಾಂತಂ ಆದಿಮಧ್ಯಾಂತ ವರ್ಜಿತಂ|| ಭಾವಾಭಾವವಿನಿರ್ಮುಕ್ತಮಿತಿಮತ್ವಾ ಸುಖೀಭವ"|| ಅಂದರೆ ಪರಬ್ರಹ್ಮನೆಂಬ ವಸ್ತುವು ಅದ್ವಿತೀಯವಾಗಿಯೂ, ರಾಗ-ದ್ವೇಷ ರಹಿತವಾಗಿಯೂ, ಆದಿ-ಮಧ್ಯ-ಅಂತ್ಯಗಳು ಇಲ್ಲದ್ದಾಗಿಯೂ, ಜನನ-ಮರಣ ರಹಿತವಾಗಿಯೂ ಇರುವದು. ಹೀಗೆ ತಿಳಿದವನು ಮಾತ್ರ ಸುಖಸ್ವರೂಪನಾಗುವನು.

ಮತ್ತು 'ಯಥಾವಿಶುದ್ಧ ಆಕಾಶೇ ಸಹಸ್ತೈವಾಭ್ರಮಂಡಲಂ|| ಭೂತ್ವಾ ವಿಲೀಯತೇ ತದ್ವದಾತ್ಮನ್ಯೈಜೇಽಖಿಲಂಜಗತ್''|| ನಿರ್ಮಲವಾದ ಆಕಾಶ

ದಲ್ಲಿ ಮೋಡಗಳ ಸಮೂಹವು ತೋರಿ ಕ್ಷಣಕಾಲದಲ್ಲಿ ಹೇಗೆ ಅಡಗುತ್ತಿರ ವವೋ ಹಾಗೆ ಪರಮಾತ್ಮನಲ್ಲಿ ಈ ಜಗತ್ತೆಲ್ಲವೂ ಉಂಟಾಗಿ ಪುನಃ ನಾಶ ಹೊಂದುತ್ತಿರುವದು ಅಂದಮೇಲೆ ಒಬ್ಬ ಪರಮಾತ್ಮನಿಂದಲೇ ಉಂಟಾಗಿ ಪುನಃ ನಾಶಹೊಂದುತ್ತಿರುವದು. ಅಂದಮೇಲೆ ಒಬ್ಬ ಪರಮಾತ್ಮನಿಂದಲೇ ಉಂಟಾಗಿರುವ ಈ ಜಗತ್ತಿನಲ್ಲಿ ಶ್ರೇಷ್ಠ-ಕನಿಷ್ಟಗಳನ್ನು ಹೇಗೆ ಕಲ್ಪಿಸಬೇಕು?

ಇದಲ್ಲದೆ—ತಂತುಮಾತ್ರಂಭವತ್ಯೇವ ಪಟೋಯದ್ವದ್ವಿಚಾರತಃ|
ಆತ್ಮಾ ತನ್ಮಾತ್ರ ಮೇವೇದಂ ತದ್ವದ್ವಿಶ್ವಂವಿಚಾರತಃ'

ಮನುಷ್ಯನು ತನ್ನ ಮೈಮೇಲಿರುವ ವಸ್ತ್ರವನ್ನು ವಿಚಾರಿಸಿ ನೋಡಿ ದರೆ ಅದು ನೂಲೇ ಎಂದು ಹೇಗೆ ಸಿದ್ಧವಾಗುವದೋ, ಅದರಂತೆ ತೋರುತ್ತಿ ರುವ ಸಕಲ ಪ್ರಪಂಚವನ್ನು ವಿಚಾರಿಸಿ ನೋಡಿದರೆ ಪರಮಾತ್ಮನೇ ಎಂದು ಸಿದ್ಧವಾಗುವದು. ಜಂಗಮ ಸಮೂಹವೇ, ಆಕಳುಗಳು ನಾನಾ ಬಣ್ಣದವು ಗಳಿದ್ದರೂ, ಅವುಗಳ ಕ್ಷೀರವು ಹೇಗೆ ಒಂದೇ ಬಣ್ಣದ್ದಿರುವದೋ? ಆಭರಣ ಗಳು ಅನೇಕ ಹೆಸರಿನವುಗಳಿದ್ದರೂ ಅವುಗಳ ಬಂಗಾರವು ಹೇಗೆ ಒಂದೇ ಹೆಸರಿನದಿರುವದೋ? ಅದರಂತೆ ಸಚರಾಚರ ಪ್ರಾಣಿಗಳಲ್ಲಿರುವ ಪರಮಾ ತ್ಮನು ಒಬ್ಬನೇ ಆಗಿರುವನು.

ಹೀಗಿರುವ ಪರಬ್ರಹ್ಮನಲ್ಲಿ ಕುಲವನ್ನೆಣಿಸುವದು ಕುಹಕತನವಲ್ಲವೆ? ಆಕಟಾ! ನರಶರೀರವು ನೋಡಲಿಕ್ಕೆ ಮಾತ್ರ ಸುಂದರವಾಗಿರುವದೇ ಹೊರತು ಒಳಗೆ ನೋಡಿದರೆ ಏನೂ ಹುರುಳಿರುವದಿಲ್ಲ. ಎಲುವಿನ ಪಂಜರದಿಂದಲೂ ನರಗಳ ಸಮೂಹದಿಂದಲೂ, ರಕ್ತ-ಮಾಂಸ-ಮೇದಸ್ಸುಗಳಿಂದಲೂ, ಮಲ ಮೂತ್ರಗಳ ಹೊಲಸಿನಿಂದಲೂ ತುಂಬಿಹೋಗಿರುವದು. ಇಂಥ ಅಸಹ್ಯ ಕರವಾದ ಈ ಶರೀರಕ್ಕೆ ಯಾವ ಕುಲವೆಂದು ಹೇಳಬೇಕು? ನನ್ನ ಕುಲ ಶ್ರೇಷ್ಠವೆಂದು ಅನ್ನುವವರೆಲ್ಲರಿಗೂ ಇಂದ್ರಿಯಗಳ ಧರ್ಮಗಳೂ, ಕುಂದು ಕೊರತೆಗಳೂ, ಬೇನೆ-ಬೇಸರಗಳೂ, ಬಾಲ್ಯ-ಯೌವನ-ವೃದ್ಧಾಪ್ಯಗಳೂ, ಜಾಗ್ರತ-ಸ್ವಪ್ನ-ಸುಪ್ತಿಗಳೂ, ಹಸಿವೆ-ನೀರಡಿಕೆಗಳೂ, ಜನನ-ಮರಣಗಳೂ, ಸುಖ-ದುಃಖಗಳೂ ಒಂದೇ ವಿಧವಾಗಿರುವವು. ಅಂದಮೇಲೆ ಹೆಚ್ಚು ಕಡಿಮೆಗಳನ್ನು ಹೇಗೆ ಕಲ್ಪಿಸಬೇಕು? ತೋರುತ್ತಿರುವ ಪ್ರಪಂಚವೆಲ್ಲವೂ ಪರಮಾತ್ಮಸ್ವರೂಪವೇ ಎಂದು ತಿಳಿದಿರುವ ಬ್ರಹ್ಮಜ್ಞಾನಿಯು ಎಂದಿಗೂ

ಭೇದವನ್ನೆಣಿಸುವದಿಲ್ಲ. ಇದು ಜೀವನ್ಮುಕ್ತರ ಲಕ್ಷಣವು ಇದಾದರೂ ಸುಲಭ ಸಾಧ್ಯವಾದದ್ದಲ್ಲ! ಯಾಕಂದರೆ ಬಾಯಿಂದ ಬೇಕಾದಷ್ಟು ಮಾತಾಡ ಬಹುದು; ಆಡಿದಂತೆ ನಡೆದು ತೋರಿಸುವದು ಮಾತ್ರ ಬಹು ಕಠಿಣವಾಗಿರು ವದು. ಜೀವನ್ಮುಕ್ತಿಗೆ ತತ್ವಮಸಿ ವಾಕ್ಯವೇ ಮೂಲ ಕಾರಣವು.

ಅದನ್ನು ತಿಳಿಯಬೇಕಾದರೆ ಪ್ರಥಮದಲ್ಲಿ ಸಾಧನ ಚತುಷ್ಟಯ ಸಂಪನ್ನನಾಗಿ ಸದ್ಗುರುವನ್ನು ಹೊಂದಿ ಭಕ್ತಿ ಪುರಸ್ಸರವಾಗಿ ಸೇವಿಸಿ ತಿಳಿದು ಕೊಳ್ಳಬೇಕು ಆ ಮೇಲೆ ಅಷ್ಟಾಂಗ ಯೋಗಗಳನ್ನು ಸಾಧಿಸುತ್ತ ಪ್ರಾಣಾ ಯಾಮವನ್ನು ತಿಳಿದು ರೇಚಕ-ಪೂರಕ-ಕುಂಭಕಗಳನ್ನು ಅನುಸರಿಸಿ ಚಕ್ರಗಳನ್ನು ಮುಟ್ಟಿ ಭೇದಿಸಿ ಹೋಗುತ್ತ ಸುಷುಮ್ನೆಯನ್ನು ಒಡೆದು ದ್ವಿದಳದ ಮೇಲೆ ಸೇರುವನು. ಅನಂತರ ಗುರುಕರುಣದಿಂದ ಹಠಮಾರ್ಗ ವನ್ನು ಬಿಟ್ಟು ರಾಜಯೋಗಕ್ಕೆ ಬಿದ್ದು ಬಾಹ್ಯವ್ಯಾಪಾರಗಳನ್ನೆಲ್ಲ ಮರೆದು ಪರಬ್ರಹ್ಮನಲ್ಲಿ ಲಕ್ಷ್ಯೆಯನ್ನಿಟ್ಟು ತಾನೇ ತಾನಾಗಿ ಪ್ರಕಾಶಿಸುತ್ತಿರುವನು.

ಈ ರೀತಿಯಾಗಿ ಹೇಳಲ್ಪಟ್ಟಯೋಗೀಶ್ವರನಿಗೆ ಜೀವತ್ವವು ನಾಶವಾಗಿ ಕಾಮಾದಿ ಅರಿಷಡ್ವರ್ಗಗಳು ಲಯಹೊಂದಿ, ಅಷ್ಟಮದಗಳು ಸುಟ್ಟುಹೋಗಿ ಸರ್ವಕ್ಕೂ ಸಾಕ್ಷಿಸ್ವರೂಪನಾಗಿ ಮೆರೆಯುತ್ತಿರುವನು; ಮತ್ತು ಆ ಯೋಗಿ ವರ್ಯನು ಸರ್ವವನ್ನು ಅಳಿದು, ಸುಖ-ದುಃಖಗಳ ಭ್ರಾಂತಿಯು ಹೋಗಿ ಬಾಹ್ಯಾಂತರಗಳನ್ನು ಮರೆತು, ವಾಸನೆಗಳು ನಾಶವಾಗಿ ಜೀವತ್ವವನ್ನು ಕಳೆದು ಬ್ರಹ್ಮವೇ ತಾನಾಗಿ ಸಂಚರಿಸುತ್ತ ದೇಹವನ್ನು ಬಿಟ್ಟು ಅಖಂಡ ವಸ್ತುವನ್ನು ಕೂಡುವನು. ಆಗ ಮಾತ್ರ ಆ ಯೋಗೀಶ್ವರನು ಹಾಲಿನಲ್ಲಿ ಹಾಲು ಕೂಡಿದ ಹಾಗೆಯೂ, ನೀರಿನಲ್ಲಿ ನೀರು ಬೆರೆತ ಹಾಗೆಯು, ಸಕ್ಕರೆ ಯಲ್ಲಿ ಸಕ್ಕರೆಯು ಕೂಡಿದಂತೆಯೂ ಪರಮಾತ್ಮನಾದ ಯೋಗಿಯು ಪರಿ ಪೂರ್ಣವಾದ ಪರಬ್ರಹ್ಮವನ್ನು ಹೊಂದುವನು. ಇದಕ್ಕೆ ಜೀವನ್ಮುಕ್ತಿ ಯೆಂತಲೂ, ಐಕ್ಯವೆಂತಲೂ, ಕೈವಲ್ಯವೇತಲೂ ಅನ್ನುತ್ತಿರುವರು. ಸದ್ಗು ರುವು ದೊರೆಯದ ವಿನಾಃ ಇದು ಲಭಿಸಲಾರದು. ಇದೇ ಮಹಾಲಿಂಗದ ನಿರ್ಗುಣ ಸ್ವರೂಪವು. ಇನ್ನು ಸಗುಣ ವಿಷಯವನ್ನು ಹೇಳುವೆನು ಕೇಳಿರಿ:

ಮೇಲೆ ಹೇಳಲ್ಪಟ್ಟ ನಿರಾಕಾರನಾದ ಪರಮಾತ್ಮನೇ ಆಕಾರಕ್ಕೆ ಬಂದು ಸಹಸ್ರ ಮುಖವುಳ್ಳವನೆಂತಲೂ, ಪಂಚಮುಖವುಳ್ಳವನೆಂತಲೂ,

ಏಕ ಮುಖವುಳ್ಳವನೆಂತಲೂ, ವಿಶ್ವಕರ್ಮನೆಂತಲೂ, ಶಿವನೆಂತಲೂ, ವಿಷ್ಣುವೆಂತಲೂ, ಜಿನ್ನನೆಂತಲೂ ಹೀಗೆ ಅನೇಕ ಹೆಸರುಗಳಿಂದ ಕರೆಸಿಕೊಂಡನು; ಮತ್ತು ಆ ಪರಮಾತ್ಮನು ಲೀಲಾಮಾತ್ರವಾಗಿ ಪ್ರಥಮದಲ್ಲಿ ಪೃಥ್ವಿ-ಆಪ್-ತೇಜ--ವಾಯು--ಆಕಾಶಗಳೆಂಬ ಪಂಚಭೂತಗಳನ್ನು ಸೃಷ್ಟಿಸಿ, ಅನಂತರ ಅನೇಕ ಬ್ರಹ್ಮಾಂಡಗಳನ್ನು ನಿರ್ಮಿಸಿದನು. ಆತನ ಸಗುಣ ಸ್ವರೂಪವು ಹದಿನಾಲ್ಕು ಲೋಕಗಳಲ್ಲಿಯೂ ಪರಿಪೂರ್ಣವಾಗಿರುವದು. ಆತನು ಸೃಷ್ಟಿಸಿರುವ ಎಂಬತ್ನಾಲ್ಕು ಲಕ್ಷ ಜೀವರಾಶಿಗಳಲ್ಲಿ ಮನುಷ್ಯಪ್ರಾಣಿಯೊಂದಕ್ಕೆ ಮಾತ್ರ ಸುಜ್ಞಾನವೆಂಬ ಸಂಪತ್ತನ್ನು ಕರುಣಿಸಿರುವನು

ಆದ್ದರಿಂದಲೇ ಮನುಷ್ಯಪ್ರಾಣಿಗಳಿಗೆ ಪುಣ್ಯ-ಪಾಪಗಳನ್ನೂ, ಲಾಭ-ನಷ್ಟಗಳನ್ನೂ, ಸುಖ-ದುಃಖಗಳನ್ನೂ ಸತ್ಯಾಸತ್ಯಗಳನ್ನೂ, ಜ್ಞಾನ-ಅಜ್ಞಾನಗಳನ್ನೂ ಚನ್ನಾಗಿ ತಿಳಿದುಕೊಳ್ಳುವ ಸಾಮರ್ಥ್ಯವು ಉಂಟಾಗಿದೆ. ಪರಮಾತ್ಮನ ಸೃಷ್ಟಿಯು ವಿಚಿತ್ರವಾದದ್ದು. ಬರಬರುತ್ತ ಮನುಷ್ಯ ಪ್ರಾಣಿಗಳಲ್ಲಿಯ ವಿಚಾರಶೀಲರು ಧರ್ಮಗಳನ್ನು ಕಲ್ಪಿಸಿಕೊಂಡರು. ಹಾಗೆ ಮಾಡದಿದ್ದರೆ ಲೋಕದ ವ್ಯವಹಾರಗಳು ಸರಿಯಾಗಿ ನಡೆಯುತ್ತಿದ್ದಿಲ್ಲ. ಅವುಗಳಲ್ಲಿ ಕೆಲವು ಧರ್ಮಗಳು ದೇವರಿಂದಲೇ ಉಂಟಾಗಿರುವವೆಂದು ಶಾಸ್ತ್ರಗಳು ಹೇಳುತ್ತಿರುವವು, ಆದರೂ ತಿಳಿದು ನೋಡಿದರೆ ಎಲ್ಲ ಧರ್ಮಗಳ ಮೂಲಸ್ವರೂಪವು ಒಂದೇ ಆಗಿರುವದು. ಇದನ್ನರಿಯದೆ ಕೆಲವರು ಒಂದು ಧರ್ಮವನ್ನು ಶ್ರೇಷ್ಠವೆಂದು ಹೇಳಿದರೆ ಕೆಲವರು ಮತ್ತೊಂದು ಧರ್ಮವನ್ನು ಶ್ರೇಷ್ಠವೆಂದು ಹೇಳುವರು. ಹೀಗೆ ಎಲ್ಲರೂ ತಮ್ಮ-ತಮ್ಮ ಧರ್ಮಗಳನ್ನು ಪ್ರಧಾನವೆಂದು ಹೇಳುತ್ತಿರುವರು.

ಯಾರು ಹೇಗೆ ಹೇಳಿದರೂ ಅವುಗಳೊಳಗಿನ ಒಳ್ಳೇರೀತಿಯಿಂದ ನಡೆಯಬೇಕು; ಪಾಪಕಾರ್ಯಗಳನ್ನು ಮಾಡಬಾರದು; ಸತ್ಯವನ್ನು ಹೇಳಬೇಕು; ಸುಳ್ಳನ್ನು ಹೇಳಬಾರದು; ಪರೋಪಕಾರ ಮಾಡಬೇಕು; ಪ್ರಾಣಿಹಿಂಸೆ ಮಾಡಬಾರದು ಎಂಬಿವೇ ಮುಂತಾದ ವಿಷಯಗಳ ಅಭಿಪ್ರಾಯವು ಮಾತ್ರ ಒಂದೇ ಆಗಿರುವದು. ಹೀಗೆ ಧರ್ಮಕರ್ತೃಗಳ ಉದ್ದೇಶವು ಒಂದೇ ವಿಧವಾಗಿದ್ದರೂ ಪೂರ್ಣ ವಿಚಾರದಿಂದ ಅದನ್ನು ತಿಳಿಯಲಿಕ್ಕೆ ಶಕ್ಯವಿಲ್ಲದ

ಅಜ್ಞಾನಿಗಳು ಮಾತ್ರ ನಮ್ಮ ಧರ್ಮವು ಹೆಚ್ಚಿನದು; ನಮ್ಮ ಜಾತಿಯು ಶ್ರೇಷ್ಠವಾದದ್ದು, ಎಂಬ ಅಭಿಮಾನದಿಂದ ಇಲ್ಲದ್ದೊಂದು ಗೊಂದಲವನ್ನೆಬ್ಬಿಸಿ ಧರ್ಮಕರ್ತೃಗಳಾದ ಮಹಾಪುರುಷರಿಗೆ ಅಪಕೀರ್ತಿಯನ್ನೇ ತರುವರು. ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಹೋಗಲಿಕ್ಕೆ ಬೇರೆ ಬೇರೆ ಮಾರ್ಗಗಳು ಹೇಗಿರುವವೋ ಹಾಗೆ ಧರ್ಮಕರ್ತೃಗಳಾದರೂ ಮೋಕ್ಷಹೊಂದಲಿಕ್ಕೆ ಅನೇಕ ಮಾರ್ಗಗಳನ್ನು ಕಲ್ಪಿಸಿರುವರು. ಅವುಗಳೊಳ್ಳೊಂದಾದ ವೀರಶೈವ ಧರ್ಮವೇ ನಿಮ್ಮ ಮೂಲ ಧರ್ಮವಾಗಿರುವದು. ಅದರಲ್ಲಾದರೂ ಅನೇಕ ಭೇದಗಳುಂಟು. ಅವರೊಳಗಿನ ಮುಖ್ಯ ವಿಷಯವನ್ನು ಹೇಳುವೆನು ಕೇಳಿರಿ.

ವೀರಶೈವನಾದವನು ಸಮಸ್ತ ಶೈವರಲ್ಲಿ ಶ್ರೇಷ್ಠನಾಗಿ, ಇತರ ಶೈವರಂತೆ ಬಹು ಕ್ರಿಯೆಗಳಿಂದ ಅಲ್ಪ ಫಲವನ್ನು ಪಡೆಯದೆ, ಅಲ್ಪ ಕ್ರಿಯೆಯಿಂದ ಅನಂತ ಫಲವನ್ನು ಪಡೆಯುವವನಾಗಿ, ಶಿವದೀಕ್ಷೆಯನ್ನು ಹೊಂದಿದ ಮೇಲೆ ಸ್ನಾನ-ಭೋಜನ-ನಿದ್ರಾ-ಜಾಗರಣ-ಮಲಮೂತ್ರವಿಸರ್ಜನ ಕಾಲಗಳಲ್ಲಿ ಅಶುಚಿಭಾವನೆಯನ್ನು ತೊರೆದು, ಸದಾ ಲಿಂಗಾಂಗಾನುಬಂಧಿಯಾಗಿಯೂ, ಲಿಂಗೋಪಭೋಗಿಯಾಗಿಯೂ, ತನ್ನ ಇಷ್ಟಲಿಂಗದಲ್ಲಿ ಆವಾಹನ ವಿಸರ್ಜನಾದಿ ಕ್ರಿಯೆಗಳನ್ನು ಮಾಡದವನಾಗಿ, ತ್ರಿಕಾಲ ಲಿಂಗಾರ್ಚನಾಸಕ್ತನಾಗಿ, ಆ ಇಷ್ಟಲಿಂಗವು ಅಕಸ್ಮಾತ್ತಾಗಿ ಕಳೆದು ಹೋದರೆ ಪ್ರಾಣತ್ಯಾಗವಲ್ಲದೆ ಬೇರೊಂದು ಪ್ರಾಯಶ್ಚಿತ್ತವಿಲ್ಲದಾತನಾಗಿ, ಗುರು ನಿಂದೆ, ಶಿವ ನಿಂದೆ, ಶಿವಕಥಾ ನಿಂದೆ, ಶೈವನಿಂದೆ, ಪ್ರಮಥ ನಿಂದೆ, ಜಂಗಮ ನಿಂದೆ, ಶಿವಪಾದೋದಕ ನಿಂದೆ, ಶಿವಲಿಂಗ ನಿಂದೆ, ಶಿವಧರ್ಮ ನಿಂದೆ, ಭಸ್ಮಧಾರಣ ನಿಂದೆ, ಶಿವಾಗಮ, ಶಿವಕ್ಷೇತ್ರ, ಶಿವಾಚಾರ ಸಾಂಪ್ರದಾಯ ನಿಂದೆ ಇವುಗಳನ್ನು ಸೈರಿಸದಾತನಾಗಿ, ಅವನ್ನು ಕೇಳಿದ ಕಿವಿಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು, ನುಡಿದ ನಾಲಿಗೆಯನ್ನು ಶೀಳುವಾತನಾಗಿ, ಬಾಹ್ಯದಲ್ಲಿ ಲಿಂಗಲಾಂಛನವಿಲ್ಲದ ಭವಿಗಳೊಡನೆ ಏಕಾಸನ, ಶಯನ, ಯಾನ, ಸಹವಾಸ, ಸಂಭಾಷಣ, ಸಂಭೋಜನ ಮೊದಲಾದವುಗಳಿಲ್ಲದಾತನಾಗಿ, ಭಸ್ಮಧಾರಿಗಳಾದವರ ಮೇಲೆ ಮಾತ್ರ ಅಂತಃಕರಣವುಳ್ಳಾತನಾಗಿ, ಶೈವ ಚಿಹ್ನವೇ ಇಲ್ಲದ ಪಾಪಿಷ್ಠರನ್ನು ಶಿಕ್ಷಿಸಲಿಚ್ಛೆಯುಳ್ಳಾತನಾಗಿ, ಶಿವಧರ್ಮಾಭಿವೃದ್ಧಿಗೋಸುಗ ತನ್ನ ತನು ಮನ ಧನ

ಗಳನ್ನು ಪೂರೆಗೊಡುವಾತನಾಗಿ, ಅನೃತ, ಅಸ್ಥಿರವಾಕ್ಯ, ವಂಚನೆ, ಪಂಕ್ತಿ ಭೇದ, ಉದಾಸೀನತೆ, ನಿರ್ದಯ ನೆಂಬ ಆರು ದೋಷಗಳಿಂದ ಆರು ತರದ ಭವಿಗಳಾಗದಾತನಾಗಿ, ವೀರಶೈವ ಮಹೇಶ್ವರರನ್ನು ಕಂಡಾಕ್ಷಣವೇ ಮೇಲ ಕ್ಕೇಳುವದು, ಅವರಿಗೆ ಎದುರಾಗಿ ಹೋಗುವದು, ಅವರನ್ನು ಕೂಡಿಕೊಂಡು ತಿರುಗಿ ಬರುವದು, ಪ್ರಿಯ ವಚನಗಳನ್ನು ಆಡುವದು, ಗದ್ದುಗೆಯನ್ನಿಕ್ಕಿ ಕೂಡ್ರಿಸುವದು, ಅನ್ನೋದಕಗಳನ್ನು ಸಮರ್ಪಿಸುವದು ಎಂಬ ಮುಕ್ತಿಗೆ ಸೋಪಾನಗಳಾದ ಸಪ್ತಕ್ರಮಗಳಿಂದ ಕೂಡಿದವನಾಗಿ, ಶಿವಧರ್ಮ ವಿರುದ್ಧ ವಾದುದೆಲ್ಲವನ್ನೂ ವರ್ಜಿಸಿದವನಾಗಿ, ಜಾತಸೂತಕ, ಜನನಸೂತಕ, ಪ್ರೇತ ಸೂತಕ, ಉಚ್ಛಿಷ್ಟಸೂತಕ, ಪ್ರಜಾಸೂತಕವೆಂಬ ಪಂಚ ಸೂತಕಗಳನ್ನು ಅಳಿದವನಾಗಿ ಲಿಂಗಾಚಾರ, ಸದಾಚಾರ, ಭಕ್ತ್ಯಾಚಾರ, ಶಿವಾಚಾರ, ಗಣಾ ಚಾರಗಳೆಂಬ ಪಂಚಾಚಾರ ನಿಷ್ಠನಾಗಿ, ದಾಸತ್ವ, ವೀರದಾಸತ್ವ, ಭೃತ್ಯತ್ವ, ವೀರ ಭೃತ್ಯತ್ವ, ಸಮಯಾಚಾರತ್ವ, ಸಕಲಾವಸ್ಥಾತ್ವಗಳೆಂಬ ಷಡ್ವಿಧ ಸಜ್ಜನತ್ವ ಯುಕ್ತನಾಗಿ, ದೇಶ-ಕಾಲ ಕಲ್ಪಿತ ಲೌಕಿಕಾಚಾರಗಳನ್ನು ಮೀರಿ ಸ್ವತಂತ್ರಶೀಲನಾಗಿ, ಶಿವಾತ್ಮರ್ಗ ಭೇದ ಭ್ರಾಂತಿದೋರದಾತನಾಗಿ, ಜೀವ ಲಿಂಗವನ್ನು ಶಿವಲಿಂಗದಲ್ಲಿ ಐಕ್ಯಗೊಳಿಸಿ ಮೆರೆಯುವಾತನಾಗಿ, ವೀರಶೈವ ಧರ್ಮಗಳಿಂದ ಕೃತ-ಕೃತ್ಯನಾಗಿ, ಲಿಂಗಾಂಗ ಗಂಗಾಸಂಗಾದ್ವೈತ ಭಾವನೆ ಯಿಂದ ಭಯವರ್ಜಿತನಾಗಿ, ಸರ್ವಶಕ್ತ, ಶಿವೋಪಾಶ್ರಯ ಬಲದಿಂದ ಅಗಟನಾಘಟನ ಸಾಮರ್ಥ್ಯವನ್ನುಳ್ಳ ಧೈರ್ಯಸಂಪನ್ನನಾಗಿ, ಹರ್ಷ-ವಿಷಾದಗಳಿಗೆರಗದಾತನಾಗಿ, ಶಾಂಭವ ವಿದ್ಯೆಯಲ್ಲಿ ರಮಿಸುವ ಶೈವನ ಪ್ರವರಿಂವತತ್ವಂಜ್ಞೆಯುಳ್ಳಾತನಾಗಿ, ಜಗತ್ಪೂಜ್ಯನಾಗಿರುವಾತನೇ ವೀರ ಶೈವನೆನಿಸುವನು.

ಜಂಗಮ ಸಮೂಹವೇ, ಲಿಂಗಧಾರಿಯಾದ ವೀರಶೈವನು ಈ ರೀತಿ ಯಿಂದ ನಡೆವದ್ದಾದರೆ ನಿತ್ಯ ಸುಖವಾದ ನಿಜಮೋಕ್ಷವನ್ನು ಹೊಂದುವನು. ಇದನ್ನು ಬಿಟ್ಟು ವ್ಯರ್ಥವಾಗಿ ಲಿಂಗವನ್ನು ಧರಿಸಿ, ನಾನು ವೀರಶೈವನೆಂದು ಹೇಳುತ್ತ ಅನಾಚಾರದಿಂದ ನಡೆದದ್ದಾದರೆ ದುರ್ಗತಿ ಪ್ರಾಪ್ತಿಯಾಗುವ ದಲ್ಲದೆ ಸದ್ಗತಿಯು ಎಂದಿಗೂ ದೊರೆಯಲಾರದು. ಇರಲಿ.

ಇನ್ನು ಬ್ರಾಹ್ಮಣ ಧರ್ಮದ ಮುಖ್ಯ ವಿಷಯವನ್ನು ಹೇಳುವೆನು, ಕೇಳಿರಿ. ಇದನ್ನು ಜೈನ ಸಮೂಹವು ಮಾತ್ರ ವಿಶೇಷ ಲಕ್ಷ್ಯಗೊಟ್ಟು ಕೇಳ ಬೇಕು. ಯಾಕಂದರೆ, ಲಿಂಗಧಾರಿಗಳಲ್ಲಿ ಅನೇಕ ಭೇದಗಳಿದ್ದರೂ ಅವುಗಳ ಮೂಲ ತತ್ವವು ಮಾತ್ರ ಒಂದೇ ವಿಧವಾಗಿ ಹೇಗಿರುವದೋ, ಅದರಂತೆ ಯಜ್ಞೋಪವೀತಧಾರಿಗಳಲ್ಲಿ ಅನೇಕ ಭೇದಗಳಿದ್ದರೂ ಅವುಗಳೊಳಗಿನ ಮುಖ್ಯೋದ್ದೇಶವು ಒಂದೇ ಆಗಿರುವದು. ಆದ್ದರಿಂದಲೇ ಅದನ್ನು ಒಟ್ಟಾಗಿ ವಿವರಿಸುವೆನು.

ಬ್ರಾಹ್ಮಣನಾದವನು ತಾನು ಜನಿಸಿದ ಎಂಟನೇ ವರುಷದಲ್ಲಿ ಉಪ ನಯನ ಸಂಸ್ಕಾರವನ್ನು ಹೊಂದಿ, ಶಿಖಾ ಯಜ್ಞೋಪವೀತ-ಕಟಿಸೂತ್ರ-ಕೌಪೀನ-ಶುಭ್ರ ವಸ್ತ್ರ-ಭಸ್ಮ-ರುದ್ರಾಕ್ಷ ಇವುಗಳಿಂದ ಕೂಡಿದವನಾಗಿ, ಏಕಕಾಲಸ್ನಾನ-ಉದಯಾಸ್ತಗಳಲ್ಲಿ ಸಂಧ್ಯಾವಂದನೆ ಇವುಗಳನ್ನು ತಪ್ಪದೇ ಮಾಡುತ್ತ, ಇಂದ್ರಿಯನಿಗ್ರಹವುಳ್ಳವನಾಗಿ, ಕಾಮ ಕ್ರೋಧಗಳನ್ನು ವರ್ಜಿಸಿ ಗುರುಸ್ಥಾನವನ್ನು ಸೇರಿ, ಭಕ್ತಿಪುರಸ್ಸರವಾಗಿ ಸೇವಿಸಿ, ವೇದಾಧ್ಯಯನ ಮಾಡಿ, ಗುರುದಕ್ಷಿಣೆಯನ್ನು ಸಮರ್ಪಿಸಿ ಅವರ ಅನುಗ್ರಹಕ್ಕೆ ಪಾತ್ರನಾಗಿ ಬ್ರಹ್ಮ-ಕಶ್ಯಪ-ಮನು ಮುಂತಾದ ಬ್ರಹ್ಮಋಷಿಗಳ ಮತದಂತೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಪಿತೃಋಣದಿಂದ ಮುಕ್ತನಾಗಬೇಕಾದ್ದರಿಂದ ಸದ್ಗುರುವಿನ ಆಜ್ಞೆಯಿಂದ ವ್ರತಸಮಾವರ್ತನ ಸ್ನಾತಕಾದಿಗಳನ್ನು ಮಾಡಿ, ಬ್ರಹ್ಮಚರ್ಯವನ್ನು ಬಿಟ್ಟು ತನ್ನ ಮನೆಯನ್ನು ಸೇರಿ ಮಾತಾ-ಪಿತೃಗಳ ಆಜ್ಞೆಯನ್ನು ಮೀರದಂತೆ ವರ್ತಿಸುತ್ತ ಅವರ ಅಪ್ಪಣೆಯ ಪ್ರಕಾರ ಸುಲಕ್ಷಣ ವುಳ್ಳ ಕನ್ನೆಯನ್ನು ವಿವಾಹವಾಗಿ, ಗೃಹಸ್ಥನಾಗಿ ಸ್ನಾನ ಸಂಧ್ಯಾವಂದನೆ ದೇವತಾರ್ಚನೆ ಮೊದಲಾದ ನಿತ್ಯಕರ್ಮಗಳನ್ನೂ, ಗರ್ಭಾಧಾನ-ಸೀಮಂತ ಜಾತಕರ್ಮ ಮೊದಲಾದ ನೈಮಿತ್ತಿಕ ಕರ್ಮಗಳನ್ನೂ ವಿಧ್ಯುಕ್ತ ಪ್ರಕಾರ ವಾಗಿ ಆಚರಿಸುತ್ತ, ದೇವ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿ, ಯಾವಾಗಲೂ ಶಾಂತಚಿತ್ತನಾಗಿ ಸದ್ವೃತ್ತಿಯಿಂದ ಕಾಲ ಕಳೆಯುತ್ತ, ದುಷ್ಕಾರ್ಯ ಗಳಿಗೆ ಮನವೆಳಸದೇ ಸಜ್ಞಾನವುಳ್ಳವನಾಗಿ, ಪ್ರಾಣಿಹಿಂಸೆಯನ್ನು ಕಣ್ಣುಗಳಿಂದ ನೋಡದೆ, ಕಿವಿಗಳಿಂದ ಕೇಳದೆ, ಪರಸ್ತ್ರೀಯರನ್ನು ಮಾತೃ ಸಮಾನರೆಂತಲೂ, ಪರದ್ರವ್ಯವನ್ನು ಮಣ್ಣಿನ ಹೆಂಟೆಗೆ ಸಮಾನವೆಂತಲೂ,

ಸ್ವಪ್ನದಲ್ಲಿಯೂ ಕೂಡ ಅವುಗಳನ್ನು ಬಯಸದೆ, ನ್ಯಾಯವಾಗಿ ಸಂಪಾದಿಸಿದ ದ್ರವ್ಯದಿಂದ ಕಾಲಕ್ಷೇಪ ಮಾಡುತ್ತ ತನ್ನ ಇಷ್ಟದೈವತವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ, ಆಶಾರಹಿತನಾಗಿರುತ್ತ ಅಂತ್ಯ ಕಾಲದಲ್ಲಿ ಸತಿ-ಸುತರ ಮೇಲಣ ಅಪೇಕ್ಷೆಯಿಲ್ಲದೆ ಪರಮಾತ್ಮನಲ್ಲಿಯೇ ಮನಸ್ಸಿಟ್ಟು, ಈ ನಶ್ವರವಾದ ದೇಹವನ್ನು ಬಿಟ್ಟು, ಶಾಶ್ವತವಾದ ಮೋಕ್ಷಸುಖವನ್ನು ಹೊಂದುವನು.

ಈ ರೀತಿಯಾಗಿ ನಡೆಯುವಾತನೇ ನಿಜವಾದ ಬ್ರಾಹ್ಮಣನು. ಇದನ್ನು ಬಿಟ್ಟು ವ್ಯರ್ಥವಾಗಿ ಯಜ್ಞೋಪವೀತವನ್ನು ಧರಿಸಿ, ಬಾಯಿಂದ ನಾನು ಬ್ರಾಹ್ಮಣನೆಂದು ಹೇಳುತ್ತ ಅನಾಚಾರದಿಂದ ನಡೆದರೆ ಅಂಥವನಿಗೆ ನಿಶ್ಚಯವಾಗಿ ದುರ್ಗತಿಯೇ ಪ್ರಾಪ್ತಿಯಾಗುವದು ಆದಕಾರಣ ಲಿಂಗಧಾರಿಗಳಾದ ಜಂಗಮ ಸಮೂಹವೂ, ಯಜ್ಞೋಪವೀತಧಾರಿಗಳಾದ ನೀವೂ ಭಿನ್ನಭಾವನೆಯನ್ನು ಬಿಟ್ಟು, ನಾವೆಲ್ಲರೂ ಒಬ್ಬ ಪರಮಾತ್ಮನಿಂದಲೇ ಉಂಟಾದವರೆಂಬ ಸಮಾಧಾನವನ್ನು ವಹಿಸಿ, ಒಬ್ಬರನ್ನೊಬ್ಬರು ಪ್ರೀತಿಸುತ್ತ ನಿಮ್ಮ ನಿಮ್ಮ ಧರ್ಮಗಳಲ್ಲಿ ಹೇಳಿದ ವಿಧಿಗಳನ್ನು ಮೀರದೆ ಆಚರಿಸುತ್ತ ಈ ಮಹಾಪುರುಷನಾದ ಬಸವೇಶ್ವರನ ಸದ್ವಾಕ್ಯಗಳನ್ನು ಮೀರದ ಹಾಗೆ ನಡೆದರೆ ನಿಜವಾಗಿಯೂ ನಿಮಗೆ ಮೋಕ್ಷ ಸುಖವು ಪ್ರಾಪ್ತಿಯಾಗುವದು, ಎಂದುಹೇಳಲು,

ಜಂಗಮ ಸಮೂಹವೂ, ಜೈನ ಸಮೂಹವೂ ಮತ್ತು ಬಸವೇಶ್ವರನೂ ಸಹ ಮೌನಗುರುವಿನ ಸದ್ಬೋಧೆಯನ್ನು ಕೇಳಿ, ಪರಮಾನಂದ ಭರಿತರಾಗಿ ಆತನ ಚರಣಗಳಿಗೆ ನಮಸ್ಕರಿಸುತ್ತಿರಲು, ಶ್ರೀ ಮೌನಪರಮಾತ್ಮನು ಎಲ್ಲರಿಗೂ ಆಶೀರ್ವಾದ ಮಾಡುತ್ತ ಅಂತರ್ಧಾನ ಹೊಂದಿದನೆಂಬಲ್ಲಿಗೆ ಹದಿನಾಲ್ಕನೆಯ ಅಧ್ಯಾಯ ಸಂಪೂರ್ಣವು.



ಶ್ರೀ ಮೌನಗುರು ಪರಬ್ರಹ್ಮಣೇ ನಮಃ!
ಶ್ರೀ ಗಣೇಶಾಯ ನಮಃ॥

# ಹದಿನೈದನೆಯ ಅಧ್ಯಾಯ



—ವರವೀಕ್ಷೇತ್ರದಲ್ಲಿ ಮಹಾತ್ಮ್ಯ ತೋರಿಸಿದ್ದು; ಮತ್ತು ತಿಂಥಿಣಿಯಲ್ಲಿ ಐಕ್ಯವಾದದ್ದು.—

ಶ್ರೀ ಮೌನಪರಮಾತ್ಮನು ಅನೇಕ ದೇಶಗಳಲ್ಲಿ ಸಂಚರಿಸುತ್ತ ಭಕ್ತ ಜನರನ್ನು ಉದ್ಧರಿಸುತ್ತ ವರವೀ ಕ್ಷೇತ್ರಕ್ಕೆ ಬಂದನು. ಆತನ ಸಂಗಡ ಶಿಷ್ಯರ ಸಮುದಾಯವು ವಿಶೇಷವಾಗಿತ್ತು. ಒಂದು ದಿನ ಶ್ರೀ ಮೌನ ದೇವನು ವರವಿಯ ಬಹಿರ್ಭಾಗದಲ್ಲಿ ಸಂಚರಿಸುತ್ತಿರುವಾಗ್ಗೆ ಒಂದು ಕಲ್ಲನ್ನು ಬಲಗಾಲಿನಿಂದ ಎಡವಿದನು. ಅದನ್ನು ನೋಡಿ ಶಿಷ್ಯರೆಲ್ಲರೂ-'ಗುರುನಾಥಾ, ನೀನು ಸಚ್ಚಿದಾನಂದನೂ, ನಿರ್ಮಲನೂ, ಜ್ಯೋತಿರ್ಮಯನೂ, ಸುಜ್ಞಾನ ಸ್ವರೂಪನೂ, ಪರಮಾತ್ಮನೂ ಆಗಿರುವೆ; ಅಂಥ ನೀನು ಈ ಕಲ್ಲನ್ನೇಕೆ ಎಡವಿದೆ? ಬೆರಳು ನೋವಾಯಿತೇ ಹೇಗೆ? ನಿನ್ನ ಮಾಯಾ ಮಹಿಮೆಯನ್ನು ತಿಳಿಯಲು ಯಾರಿಗೆ ಸಾಧ್ಯವು! ದಯವಿಟ್ಟು ನೀನು ಎಡವಿದ ಕಾರಣವನ್ನು ಹೇಳಿ ಮನಸ್ಸಿನ ಸಂಶಯವನ್ನು ಪರಿಹರಿಸು' ಎಂದು ಕೇಳಿದರು.

ಮೌನಪರಮಾತ್ಮನು:—ಶಿಷ್ಯವೃಂದವೇ, ಈ ಭೂಮಿಯು ಪುಣ್ಯಪ್ರದವಾಗಿರುವದಲ್ಲದೆ, ನಾನು ಎಡವಿದ ಈ ಶಿಲೆಯು ಜ್ಯೋತಿರ್ಮಯ ಲಿಂಗವಾಗಿ ತ್ರಿಕಾಲಗಳಲ್ಲಿಯೂ ಪೂಜೆಯನ್ನು ಹೊಂದುವದು. ಇದನ್ನು ಪೂಜಿಸಿದವರ ಅಭೀಷ್ಟಗಳು ಪೂರ್ಣವಾಗುವವು. ಹೆಚ್ಚಿಗೆ ಹೇಳುವದೇನು! ಈ ಶಿಲೆಯೇ ನಾನಿರುವೆನು ಈ ಪುಣ್ಯ ಭೂಮಿಯಲ್ಲಿ ತೋರುವ ಕಲ್ಲೆಲ್ಲ ದೇವರು, ಹರಿಯುವ ನೀರೆಲ್ಲ ಘನತೀರ್ಥವು, ಎಂದು ಹೇಳಿ ಮುಂದಕ್ಕೆ ನಡೆದನು.

ಜಗದ್ಗುರುವಿನ ಅಮೃತವಾಣಿಯಿಂದ ಸ್ವಲ್ಪ ದಿನಗಳಲ್ಲಿಯೇ ಆ ಶಿಲೆಯು ಲಿಂಗಸ್ವರೂಪವನ್ನು ಹೊಂದಿ ಭಕ್ತಜನರಿಂದ ಪೂಜಿಸಲ್ಪಡಹತ್ತಿತು. ಆಗ ಮೌನದೇವನು ವಿಜಾಪುರದ ಬಾದಶಹನ ಸ್ವಪ್ನದಲ್ಲಿ ಪ್ರಕಟನಾಗಿ:-

'ಬಾದಶಹನೇ, ಪೂರ್ವದಲ್ಲಿ ನೀನು ಏನಾದರೊಂದು ಸೇವೆಯ ಕಾರ್ಯ ವನ್ನು ನಿಯಮಿಸೆಂದು ನನ್ನನ್ನು ಕೇಳಿದ್ದೆ. ಅದುಕಾರಣ ಈಗ ನಿನಗೊಂದು ಸೇವೆಯನ್ನು ನಿಯಮಿಸುವೆನು; ಅದೇನಂದರೆ:—ನಾನು ವರವೀ ಕ್ಷೇತ್ರದಲ್ಲಿ ಲಿಂಗಸ್ವರೂಪನಾಗಿ ನೆಲೆಸಿರುತ್ತೇನೆ ಆ ಸ್ಥಳದಲ್ಲಿ ನನ್ನ ಸಲುವಾಗಿ ಒಂದು ಗುಡಿಯನ್ನು ಕಟ್ಟಿಸು; ಅಂದರೆ ನಿನ್ನ ಸೇವೆಯು ನನಗೆ ಮುಟ್ಟಿ ದಂತಾಗುವದು, ಎಂದು ಹೇಳಿ ಅದೃಶ್ಯನಾದನು.

ಬಾದಶಹನು ಮೌನಸ್ವಾಮಿಯ ಪ್ರಿಯಶಿಷ್ಯನಾದ್ದರಿಂದ ಗುರುವಾಕ್ಯ ದಂತೆ ವರವೀ ಕ್ಷೇತ್ರದಲ್ಲಿ ಒಂದು ಭವ್ಯವಾದ ಗುಡಿಯನ್ನು ಕಟ್ಟಿಸಲಿಕ್ಕೆ ಪ್ರಮುಖ ಜನರಿಗೆ ಅಪ್ಪಣೆಮಾಡಿದನು.

ಆಗಿನ ಕಾಲಕ್ಕೆ ಮೌನೇಶ್ವರನು ಎಡವಿದ ಉದ್ಭವಲಿಂಗವು ಭೂ- ಪೃಷ್ಠದ ಮೇಲೆ ಕಾಣಿಸುತ್ತಿತ್ತು. ಆದ್ದರಿಂದ ಗುಡಿಯ ಕೆಳಭಾಗವನ್ನು ವಿಶೇಷ ಎತ್ತರವಾಗಿ ಕಟ್ಟಿಸಲು ಅವಕಾಶವಿಲ್ಲದ್ದರಿಂದ ಸ್ವಲ್ಪೇ ಎತ್ತರವಾಗಿ ಪಾಯಾದ ಕಟ್ಟೆಯನ್ನು ರಚಿಸಿ ಸಂಜೆಗೆ ಮನೆಗೆ ಹೋಗಲು, ಮರುದಿವಸ ಕಟ್ಟಿಕ್ಕವರು ಬರುವದರೊಳಗಾಗಿ ಪೂರ್ವದಷ್ಟೇ ಲಿಂಗವು ಮೇಲೆ ತೋರು ವಂಥದಾಗಿತ್ತು. ಪುನಃ ಅದಕ್ಕೆ ಸರಿಯಾಗಿ ಕಟ್ಟೆಯನ್ನೇರಿಸಿ ಹೋಗಲು, ಮರುದಿವಸ ಮತ್ತೂ ಮೊದಲಿನಂತೆ ಎತ್ತರವಾಗಿ ಕಾಣಿಸುತ್ತಿತ್ತು. ಬಾದ ಶಹನ ಅಪ್ಪಣೆಯಿಂದ ಗುಡಿಯನ್ನು ಕಟ್ಟಲಿಕ್ಕೆ ಬಂದ ಪ್ರಮುಖ ಜನರು ಅದನ್ನು ನೋಡಿ ಆಶ್ಚರ್ಯಭರಿತರಾಗಿ ಆ ಸಂಗತಿಯನ್ನು ಬಾದಶಹನಿಗೆ ತಿಳಿಸಿದರು.

ಬಾದಶಹನು ಪರಮಾನಂದವುಳ್ಳವನಾಗಿ:—,ಆ ಮೌನಗುರುವಿನ ಅನುಗ್ರಹವು ಎಲ್ಲಿಯವರೆಗಾಗುವದೋ ಅಲ್ಲಿಯ ವರೆಗೂ ಪ್ರತಿ ದಿವಸ ಹಿಂದೊಂದು ಥರವನ್ನು ಏರಿಸುತ್ತಾ ಹೋಗಿರಿ; ಅನುಗ್ರಹ ಕಟ್ಟಾಗುತ್ತಲೇ ಕಟ್ಟೆಯನ್ನು ಬಂದು ಮಾಡಿ, ಮೇಲ್ಭಾಗವನ್ನು ರಚಿಸಿರಿ, ಎಂದು ಅಪ್ಪಣೆ ಯನ್ನಿತ್ತನು. ಅವರಂತೆ ಗುಡಿಯನ್ನು ಸುಂದರವಾಗಿಯೂ, ವಿಸ್ತಾರವಾ ಗಿಯೂ, ಗುಮ್ಮಟಗಳಿಂದ ಮತ್ತು ಕಮಾನುಗಳಿಂದ ಅಚ್ಚಳಿಯದಂತೆ ಭದ್ರವಾಗಿ ರಚಿಸಿರುವರು. ಅದು ಈಗ್ಯೂ ಇರುತ್ತದೆ.. ಅದಕ್ಕೆ ಮೌನೇ ಶ್ವರನ ದೇವಾಲಯವೆಂತಲೂ, ಮಠವೆಂತಲೂ ಅನ್ನುತ್ತಿರುವರು. ಅದ

ರೊಳಗಿರುವ ಉದ್ಭವಲಿಂಗವೇ ಆ ಮರವೀ ಕ್ಷೇತ್ರದ ಅಧಿದೇವತೆಯು. ಪ್ರತಿ ವರುಷ ಶ್ರಾವಣ ಮಾಸದ ಕಡೇಸೋಮವಾರದ ದಿವಸ ರಥೋತ್ಸವವು ಒಳ್ಳೇ ವೈಭವದಿಂದ ಜರುಗುವದು. ಅಲ್ಲಿಗೆ ವಿಶ್ವಬ್ರಾಹ್ಮಣ ಸಮಾಜವು ವಿಶೇಷ ವಾಗಿ ಬರುವರು. ಈ ದೇವಾಲಯುವು. ಮರವೀ ಗ್ರಾಮದ ಪೂರ್ವದಿಕ್ಕಿ ನಲ್ಲಿರುವದು. ಆ ಉದ್ಭವಲಿಂಗವನ್ನು ದರ್ಶನ ಮಾಡಿಕೊಂಡವರ ಪಾಪ ಸಮೂಹವು ನಾಶವಾಗುವದೆಂಬ ವಿಷಯುವನ್ನು ಮಾತ್ರ ವಾಚಕ ವೃಂದವು ನೆನಪಿನಲ್ಲಿಡತಕ್ಕದ್ದು. ಇರಲಿ

ಮತ್ತೊಂದು ದಿನ ಶ್ರೀ ಮೌನದೇವನು ಮರವೀ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿರುವ ಹಳ್ಳದ ದಂಡೆಯುಲ್ಲಿ ಸಾಧುವಿನ ವೇಷದಿಂದ ಒಂದು ಬಂಡೆ ಗಲ್ಲಿನ ಮೇಲೆ ಕುಳಿತಿದ್ದನು. ಆ ಮಹಾತ್ಮನು ಅಲ್ಲಿರುವ ನೀರಿನ ಕೊರತೆ ಯುನ್ನು ತಪ್ಪಿಸಬೇಕೆಂದು ಯೋಚಿಸಿ, ಲೀಲೆಯಿಂದ ದೊಡ್ಡದೊಂದು ಬತ್ತಿ ಯುನ್ನು ಕಟ್ಟಿ ಅದರಲ್ಲಿ ತಂಬಾಕವನ್ನು ತುಂಬಿ ಬೆಂಕಿಯಿಲ್ಲದೆ ಸುಮ್ಮನೆ ಕುಳಿತುಬಿಟ್ಟಿದ್ದನು. ಆ ಜಗತ್ಪಾಲಕನ ಆಟವು ಯಾರಿಗೆ ತಿಳಿಯುಬೇಕು? ಎಷ್ಟೋ ಜನರು ಬಂದು ಬಂದು ನೋಡಿ ಇವನಾರೋ ಒಬ್ಬ ಸಾಧು ಪುರುಷನಿರಬಹುದೆಂದು ತರ್ಕಿಸಿ, ಸುಮ್ಮನೆ ಹೋಗುತ್ತಿದ್ದರು. ಸದ್ಗುರು ವಾದರೂ ಅವರೊಬ್ಬರನ್ನೂ ಮಾತಾಡಿಸಲಿಲ್ಲ.

ಅಷ್ಟರಲ್ಲಿ ಒಬ್ಬ ಸಾಧ್ವಿಯು ನೀರನ್ನೊಯ್ಯುವದರ ಸಲುವಾಗಿ ಕೊಡ ವನ್ನು ತೆಗೆದುಕೊಂಡು ಹಳ್ಳಕ್ಕೆ ಬಂದಳು. ಆಗ ಆ ಹಳ್ಳದಲ್ಲಿ ನೀರಿನ ಕೊರತೆ ಇದ್ದದರಿಂದ ಒರತೆಯುಲ್ಲಿ ಬಸಿದು ಬರುವ ಅಲ್ಪ-ಸ್ವಲ್ಪ ನೀರನ್ನು ಬಹಳ ಹೊತ್ತಿನ ವರೆಗೆ ಪರಟೆಯಿಂದ ತುಂಬಿಕೊಳ್ಳುತ್ತ ಕೂಡ್ರಬೇಕಾಗು ತ್ತಿತ್ತು. ಅದರಂತೆ ಆ ಹೆಣ್ಣುಮಗಳು ಕೊಡವನ್ನು ತುಂಬಲಿಕ್ಕಾಗಿ ಒರೆ ತೆಯ ಹತ್ತರ ಕುಳಿತಳು.

ಆಕೆಯುನ್ನು ನೋಡಿ ಮೌನಸ್ವಾಮಿಯು:—ತಾಯಿ, ನನಗೆ ತಂಬಾಕ ಸೇದುವ ಇಚ್ಛೆಯು ಬಹಳವಾಗಿದೆ. ಎಲ್ಲವನ್ನೂ ಸಿದ್ಧಮಾಡಿ ರುವೆನು; ಬೆಂಕಿ ಇಲ್ಲದ್ದರಿಂದ ಸುಮ್ಮನೆ ಕುಳಿತಿರುತ್ತೇನೆ. ದಯುಮಾಡಿ ಸ್ವಲ್ಪ ಬೆಂಕಿಯುನ್ನು ತಂದು ಕೊಡು. ಊರೇನೂ ದೂರವಿಲ್ಲ, ತೀರ ಸಮೀಪದಲ್ಲಿದೆ, ಎಂದು ಹೇಳಿದನು.

ಆ ಮಾತಿಗೆ ಆ ಸುದತಿಯು:—ಸ್ವಾಮಿ! ನಿನ್ನ ವಾಕ್ಯವನ್ನು ನಡೆಸಲು ನನಗೆ ಅನುಕೂಲವಿಲ್ಲ; ಯಾಕಂದರೆ ನಾನು ಅತ್ತೆಯ ಮನೆಯ ಸೊಸೆಯಿರುವೆನು. ಇದಲ್ಲದೆ ನನ್ನ ಅವಳಿ-ಜವಳಿ ಮಕ್ಕಳು ತೊಟ್ಟಿಲದಲ್ಲಿ ಕೀಸರ-ಬಾಸರ ಹಿಡಿಸಿವೆ. ಅತ್ತೆಯವರು ಅಂಬಲಿಯನ್ನು ತಯಾರಿಸಿ, ಸಂಜೆಗೆ ನುಚ್ಚು ಮಾಡಲಿಕ್ಕೆ ಆಜ್ಞೆಯಿತ್ತು ಹೋಗಿರುವರು. ಮನೆಯಲ್ಲಿಯ ಎಲ್ಲರೂ ಹೊಲಕ್ಕೆ ಹೋಗಿರುವದರಿಂದ ಕದವನ್ನು ಮುಂದೆ ಮಾಡಿ ಬಂದಿರುವೆನು. ತೀವ್ರ ಹೋಗಬೇಕಾಗಿದೆ, ಎಂದು ಕೊಡವನ್ನು ತುಂಬಲುಪಕ್ರಮಿಸಿದಳು.

ಅದನ್ನು ಕೇಳಿ ಸದ್ಗುರುವರನು:—'ತಂಗೀ, ದೇವರು ನಿನಗೆ ಇಷ್ಟೆಲ್ಲ ಸಂಪತ್ತು ಕೊಟ್ಟಿರಲು, ನೀನು ಹೀಗೆ ನಿರ್ದಯ ಮಾಡಬಹುದೇ? ನೀನು ಬೆಂಕಿಯನ್ನು ತರಲಿಕ್ಕೆ ಮನೆಗೆ ಹೋಗು; ಅಷ್ಟರಲ್ಲಿ ನಾನು ನಿನ್ನ ಕೊಡವನ್ನು ತುಂಬುವೆನು; ಮತ್ತು ಮನೆಯವರಿಂದ ಯಾವ ಪ್ರಕಾರದ ಅತಂಕವೂ ಬಾರದಂತೆ ಮಾಡುವೆನು. ಬೇಗನೆ ಹೋಗು. ದೇವರು ನಿನಗೆ ಕಲ್ಯಾಣ ಮಾಡುವನು" ಎಂದು ನುಡಿದನು.

ಆ ಮಾತಿಗೆ ಕೋಮಲ ಹೃದಯಳಾದ ಆ ಬಾಲ ಯುವತಿಯು ಸಾಧುಗಳ ಮಾತನ್ನು ಮೀರುವದು ಯೋಗ್ಯವಲ್ಲೆಂದು ತಿಳಿದು ಪ್ರತ್ಯುತ್ತರವನ್ನು ಕೊಡದೆ ಬೆಂಕಿಯನ್ನು ತರಲಿಕ್ಕೆ ಮನೆಗೆ ಹೋದಳು.

ಇತ್ತ ಶ್ರೀ ಮೌನಪರಮಾತ್ಮನು ತನ್ನ ಕೈಯಲ್ಲಿರುವ ಕಠಾರಿಯಿಂದ ತಾನು ಕುಳಿತಿರುವ ಬಂಡೆಗಲ್ಲಿನಲ್ಲಿ ತಿವಿಯಲು, ಅಲ್ಲಿ ಜಲಪ್ರವಾಹವು ಹೊರಟಿತು. ಅದನ್ನು ಒಂದು ಕೊಡ ಮುಳುಗಿಸಿ ತುಂಬುವಷ್ಟು ವಿಸ್ತಾರವಾಗಿ ಮಾಡಿದನು ಅಷ್ಟರಲ್ಲಿ ಆ ಪತಿವ್ರತೆಯು ಬೆಂಕಿಯನ್ನು ತೆಗೆದುಕೊಂಡು ಬಂದು ಸ್ವಾಮಿಯ ಸನ್ನಿಧಿಯಲ್ಲಿಟ್ಟು ನಮಸ್ಕರಿಸಿದಳು.

ಸಾಧುಗಳು ಆ ಸ್ತ್ರೀಯಳ ಸದ್ವೃತ್ತಿಯನ್ನು ನೋಡಿ:—"ಅಮ್ಮಾ, ನಿನಗೆ ದೇವರು ಕ್ಷೇಮವನ್ನುಂಟು ಮಾಡಲಿ" ಎಂದು ಆಶೀರ್ವಾದ ಮಾಡಿ:—'ಮಗಳೇ, ಈ ನೀರನ್ನು ತೆಗೆದುಕೊಂಡು ಹೋಗು; ನೀನು ಎಂದಿನಂತೆ ಅಂಬಿಲವನ್ನು ತಯಾರಿಸುವ ಕಾರಣವಿಲ್ಲ. ಈ ನೀರಿನಲ್ಲಿ ನುಚ್ಚನ್ನು ಸುರುವಿ ಹಾಗೇ ಒಲೆಯ ಮೇಲಿಟ್ಟರೆ ಮಧುರವಾದ ಅನ್ನ

ವಾಗುವದು. ಇದರಂತೆ ಪ್ರತಿದಿವಸ ಈ ತೀರ್ಥದ ನೀರನ್ನು ತೆಗೆದೊಯ್ದು ನಿನ್ನ ಕಾರ್ಯವನ್ನು ಸಿದ್ಧಿಸಿಕೋ' ಎಂದು ಹೇಳಿದನು.

ಆಗ ಆ ಸ್ತ್ರೀಯಳು ಪುನಃ ಗುರುಪಾದಾರವಿಂದಗಳಿಗೆರಗಿ ಮನೆಗೆ ಹೋಗಿ ಸಾಧುಗಳು ಹೇಳಿದ ಹಾಗೆ ಮಾಡಲು, ಅದನ್ನು ಭೋಜನ ಮಾಡಿದ ಅವರ ಮನೆಯವರೆಲ್ಲರೂ:—ಇಂದಿನ ಅಡಿಗೆಯು ಬಹು ರುಚಿಯಾಗಿದೆ; ಅಂಬಿಲದ ಪ್ರಮಾಣವು ಸರಿಯಾಗಿ ಆಗಿದೆ. ಇಂತಹ ನುಚ್ಚನ್ನು ನಾವು ಎಂದೂ ಉಂಡಿಲ್ಲ. ಹೀಗೆಂದು ಆಶ್ಚರ್ಯಭರಿತರಾಗಿ ಆ ಸ್ತ್ರೀಯಳನ್ನು ಕುರಿತು:—

ಇಂದಿನ ದಿವಸ ಈ ಜೋಳದ ಬೋನವು ಇಷ್ಟು ರುಚಿಯಾಗುವದಕ್ಕೆ ಕಾರಣವೇನು? ನಿಜ ಸಂಗತಿಯನ್ನು ಹೇಳೆಂದು ಕೇಳಿದರು.

ಅದಕ್ಕೆ ಆ ಸುದತಿಯು ಆನಂದಭರಿತಳಾಗಿ:—ಒಬ್ಬ ಸಾಧುಗಳ ಅನುಗ್ರಹದಿಂದ ಈ ಹೊತ್ತಿನ ಜೋಳದ ಬೋನದಲ್ಲಿ ಇಷ್ಟು ಮಧುರತ್ವವು ಬಂದಿರುವದೆಂದು ನಡೆದ ಸಂಗತಿಯನ್ನೆಲ್ಲ ವಿಸ್ತರಿಸಿದಳು. ಅದನ್ನು ಕೇಳಿ ಮನೆಯವರೆಲ್ಲರೂ ಹರ್ಷಾತಿಶಯದಿಂದ ಆಕೆಯನ್ನು ಹೊಗಳಿ, ನಿನ್ನ ಪುಣ್ಯ ಪ್ರಭಾವದಿಂದ ನಮ್ಮ ಗ್ರಾಮದಲ್ಲಿ ಒಂದು ಪವಿತ್ರ ತೀರ್ಥವು ಉಂಟಾಯಿತು. ಆ ಮಹಿಮನ ಕೀರ್ತಿಯು ದಿಗಂತರದಲ್ಲಿ ಪಸರಿಸಿತು. ನಿನ್ನ ಹೆಸರು ಸ್ಥಿರಸ್ಥಾಯಿಯಾಯಿತು, ಎಂದು ಅನೇಕ ಪ್ರಕಾರವಾಗಿ ಹೊಗಳಿ ಆ ತೀರ್ಥದ ಹತ್ತರ ಹೋಗಿ ನೋಡಿ, ಅದಕ್ಕೆ ಆಮ್ಲತೀರ್ಥವೆಂದು ಕರೆದರು. ಆ ತೀರ್ಥಕ್ಕೆ ಆ ಹೆಸರು ಈಗ್ಯೂ ಇರುತ್ತದೆ.

ಮತ್ತೊಂದು ದಿನ ಶ್ರೀ ಮೌನೇಶ್ವರನು ಪರಮೀ ಗ್ರಾಮದ ದಕ್ಷಿಣ ಭಾಗದಲ್ಲಿರುವ ಹಳ್ಳದ ತಟಾಕದಲ್ಲಿ ಕುರುಬನ ವೇಷವನ್ನು ಧರಿಸಿ, ಕುರಿಗಳನ್ನು ಮೇಯಿಸುತ್ತ ಸಾಯಂಕಾಲದ ಸುಮಾರಕ್ಕೆ ನಿಂತಿದ್ದನು. ಅಲ್ಲಿ ಒಂದು ಕರೀ ಕಲ್ಲಿನ ವಿಸ್ತಾರವಾದ ಹಾಸು ಬಂಡೆಯ ಮೇಲೆ ನಿಂತು ತನ್ನ ವೇಣುಗಾನವನ್ನು ಆರಂಭಿಸಿದನು. ಆ ಇಂಪಾದ ಕೊಳಲಿನ ಸುಸ್ವರಕ್ಕೆ ಆ ಕುರಿಗಳೆಲ್ಲ ಓಡಿ ಬಂದು ಆ ಬಂಡೆಗಲ್ಲಿನ ಮೇಲೆ ಮೌನಗುರುವಿನ ಮುಖದ ಕಡೆಗೆ ನೋಡುತ್ತ ನಿಂತುಕೊಂಡವು ಸಾಕ್ಷಾತ್ ಪರಮೇಶ್ವರನೇ ಗಾಯಕನಾದ ಮೇಲೆ ಆತನ ಗಾಯನದ ಮೋಹಕ್ಕೆ ಸಿಲುಕದವರಾರು?

ಆ ಇಂಪಾದ ಸುಸ್ವರವನ್ನು ಕೇಳುತ್ತಲೇ ವರವೀಪುರದ ಜನರು ಆಶ್ಚರ್ಯ ಭರಿತರಾಗಿ:—"ಅಹಾ! ಇವನಾವನೋ ಕುರುಬನು ಹೊಸಬನಂತೆ ಕಾಣು ವನು. ಇಂಥ ಮನೋಹರವಾಗಿ ಕೊಳಲನ್ನೂದುವವರನ್ನು ನಾವು ಇದು ವರೆಗೂ ನೋಡಿರುವದಿಲ್ಲ. ನಮ್ಮ ಕೆಲಸ-ಬೊಗಸೆಗಳ ಪರಿಯನ್ನು ಪರಿ ಹರಿಸಿ, ತನ್ನಲ್ಲಿಯೇ ಲೀನ ಮಾಡಿಕೊಳ್ಳುವ ಈ ಸುಸ್ವರವು ಎಷ್ಟು ಮಧುರ ವಾಗಿದೆ? ಎಂದು ಓಡಿ ಬಂದು ಆ ಸೃಷ್ಟಿಕರ್ತನ ಸುತ್ತಲೂ ನೆರೆಯುವಂಥ ವರಾದರು.

ಜನಸಂದಣಿಯು ಕೂಡಿದ ಹಾಗೆ ಆ ಮಹಾಮಹಿಮನಾದ ಮೌನ ದೇವನು ವೇಣುಗಾನವನ್ನು ಮತ್ತಿಷ್ಟು ಇಂಪಾಗಿ ಮಾಡಲಿಕ್ಕೆ ಹತ್ತಿದನು. ಜನಸಮೂಹದ ಕಣ್ಣು-ಮನಸ್ಸುಗಳು ಆ ಮಹಿಮಾ ಪುರುಷನ ಮುಖ ಕಮಲದಲ್ಲಿಯೇ ಸಂಕಲನವಾಗಿದ್ದವು. ಒಬ್ಬರಿಗಾದರೂ ಮನೆಗೆ ಹೋಗ ಬೇಕೆಂಬ ಇಚ್ಛೆಯಾಗಲೊಲ್ಲದು. ಎಲ್ಲರಿಗೂ ಆನಂದವೇ ಆನಂದ!

ಅಷ್ಟರಲ್ಲಿ ಆ ಮಾಯಗಾರನು ಒಮ್ಮಿಂದೊಮ್ಮೆಲೆ ಗಾಬರಿಯಾದವ ನಂತೆ ನಟಿಸಿ, ಭಯಾನಕ ಸ್ವರದಿಂದ—'ಹಾಯ್ ಹಾಯ್! ನನ್ನ ಕಾಲು ಗಳು ಕೆಸರಿನಲ್ಲಿ ಸಿಗಬೀಳುವಂತೆ ಈ ಕಲ್ಲಿನಲ್ಲಿ ಸೇರಹತ್ತಿವೆ. ಮುಂದೇನು ಗತಿ! ಕಿತ್ತುಕೊಳ್ಳಲಿಕ್ಕೆ ನನಗೆ ಶಕ್ತಿ ಸಾಲದು; ದಯಮಾಡಿ ನೀವೆ ಲ್ಲರೂ ಬಂದು ನನ್ನನ್ನು ಈ ಕಲ್ಲಿನೊಳಗಿಂದ ಕಡೆಗೆ ತೆಗೆದು ಈ ಸಂಕಟ ವನ್ನು ತಪ್ಪಿಸಿ ಪುಣ್ಯಾಕಟ್ಟಿಕೊಳ್ಳಿರಿ' ಎಂದು ಗಟ್ಟಿಯಾಗಿ ಕೂಗಿದನು.

ಆಗ ಎಲ್ಲರೂ ಆತನ ಪಾದಾರವಿಂದಗಳ ಕಡೆಗೆ ದೃಷ್ಟಿಯನ್ನಿಡಲು, ಆತನ ಎರಡೂ ಪಾದಗಳು ಕೆಸರಿನಲ್ಲಿ ಸಿಕ್ಕ ಹಾಗೆ ಬಂಡೆಗಲ್ಲಿನಲ್ಲಿ ಸಿಕ್ಕು ವ ರೆಯಾಗಿ ಹೋಗಿದ್ದವು. ಆತನ ಕುರಿಯ ಹಿಂಡಿನ ಗತಿಯಾದರೂ ಅದೇ ರೀತಿಯಾಗಿತ್ತು. ಅದನ್ನು ನೋಡಿದವರಲ್ಲಿ ಕೆಲವರು:—ಅಹಾ! ಇದೇ ನಾಶ್ಚರ್ಯವು!! ಪಾಪ-ಪಾಪ! ಈ ಬಡಪ್ರಾಣಿಯು ಎಷ್ಟು ಬುದ್ಧಿಶಾಲಿ ಇದ್ದನು? ಈ ಕಷ್ಟದಿಂದ ಇವನನ್ನು ಪಾರುಮಾಡುವದು ಹೇಗೆ? ಎಂದು ಮರುಗಹತ್ತಿದ್ದರು.

ಕೆಲವರು:—ಇಂಥ ಬಂಡೆಗಲ್ಲಿನಲ್ಲಿ ಈತನ ಕಾಲುಗಳು ಕೆಸರಿನಲ್ಲಿ ಸಿಕ್ಕಂತೆ ಸಿಗಬೇಕಾದರೆ ಇದು ಲೋಕದಲ್ಲಿ ಎಂದಿಗೂ ನಡೆಯುವ ವಿಷಯ

ವಾಗಿದೆ. ಇದು ದೇವರ ಮಾಯೆಯಿಂದಾಗಿದೆಯೋ ಹೊರ್ತು ಅನ್ಯಥಾ ಅಲ್ಲವೆಂದು ಅನ್ನುತ್ತಿದ್ದರು.

ಮತ್ತೆ ಕೆಲವರು:—ಮನುಷ್ಯರಿಗೆ ಇಂಥ ಪ್ರಸಂಗವು ಎಂದಿಗೂ ಘಟಿಸದು. ಅದುಕಾರಣ ಈತನು ನಿಶ್ಚಯವಾಗಿ ಮನುಷ್ಯನಲ್ಲ! ಕುರುಬನ ವೇಷವನ್ನು ಧರಿಸಿಕೊಂಡು ಬಂದಿರುವ ಸಾಕ್ಷಾತ್ ಪರಮೇಶ್ವರನೇ ಈತನಹುದು, ಎಂದು ನುಡಿಯುತ್ತಿದ್ದರು.

ಕೆಲವರು ವೇಷಧಾರಿಯಾದ ಮೌನೇಶ್ವರನನ್ನು ಕುರಿತು:–ಮಹಿಮಾ ಪುರುಷನೇ, ಈ ಘೋರ ಸಂಕಟದಿಂದ ನಿನ್ನನ್ನು ಪಾರುಮಾಡುವ ಸಾಮರ್ಥ್ಯವು ಯಾರಿಗೂ ಇರುವದಿಲ್ಲ. ಕಾರಣ ಪರಮಾತ್ಮನೇ, ನಿನ್ನ ವಿಪತ್ತನ್ನು ಪರಿಹರಿಸಬೇಕು, ಎಂದು ವಿನಯದಿಂದ ಹೇಳುತ್ತಿದ್ದರು.

ಈ ರೀತಿಯಾಗಿ ಜನಸಮೂಹವು ತಮ್ಮ ತಮ್ಮ ಮನ ಬಂದ ಹಾಗೆ ಮಾತಾಡುತ್ತಿರಲು, ಮೌನಪರಮಾತ್ಮನು ಒಮ್ಮಿಂದೊಮ್ಮೆಲೆ ಕೆಸರೊಳಗಿಂದ ಕಾಲನ್ನು ಕೀಳುವ ಹಾಗೆ ಪಾದದ್ವಯಗಳನ್ನು ಕ್ರಮವಾಗಿ ತೆಗೆದು ಮುಂದಕ್ಕೆ ಇಟ್ಟು, ತನ್ನ ಕೈಯಲ್ಲಿರುವ ಕೋಲನ್ನು ಬೀಸುತ್ತ ಹುಶ್ಯ ಹಶ್ಯ ಎಂದು ಕುರಿಗಳನ್ನು ಬೆದರಿಸಿದನು. ಕೂಡಲೆ ಯಾವತ್ತೂ ಕುರಿಯು ಹಿಂಡು ತಮ್ಮ ತಮ್ಮ ಕಾಲುಗಳನ್ನು ಕಿತ್ತುಕೊಂಡು ಬೇರೊಂದು ಕಡೆಗೆ ನಿಲ್ಲುವಂಥವಾದವು.

ಪ್ರತ್ಯಕ್ಷ ಈ ಕೃತಿಯನ್ನು ನೋಡಿದ ಪುರಜನರೆಲ್ಲರೂ ಪರಮಾಶ್ಚರ್ಯದಿಂದ ಈತನು ಸಾಕ್ಷಾತ್ ಪರಮಾತ್ಮನೇ ಇರುವನೆಂದು ಆತನ ಚರಣಾರವಿಂದಗಳಿಗೆರಗಿ:—ಮಹಾತ್ಮಾ, ನೀನು ಕುರಬನಲ್ಲ! ಶ್ರೀ ಪರಮೇಶ್ವರನಿರುವೆ; ಕಾರಣ ನಿನ್ನ ನಿಜ ಸ್ವರೂಪವನ್ನು ತೋರಿಸಿ ನಮ್ಮನ್ನು ಧನ್ಯರನ್ನಾಗಿ ಮಾಡು, ಎಂದು ಪ್ರಾರ್ಥಿಸಿದರು.

ಆಗ ಸದ್ಗುರುನಾಥನು ಕುರುಬವೇಷವನ್ನು ತ್ಯಜಿಸಿ ಮೌನರೂಪಿನಿಂದ ಪ್ರಕಟನಾಗಿ:—ಭಕ್ತವೃಂದವೇ, ಈ ಬಂಡೆಗಲ್ಲಿನಲ್ಲಿ ಮೂಡಿರುವ ನನ್ನ ಪಾದಗಳನ್ನೂ, ಕುರಿಯ ಹೆಜ್ಜೆಗಳನ್ನೂ ಪೂಜಿಸಿದವರ ಇಷ್ಟಾರ್ಥಗಳು ಪೂರ್ಣವಾಗುವವು; ಆದಕಾರಣ ಭಕ್ತಿಪೂರ್ವಕವಾಗಿ ಪೂಜಿಸಿ

ಎಂದು ಹೇಳಲು, ಎಲ್ಲ ಜನರು ಪುನಃ ಗುರುಚರಣಗಳಿಗೆ ಶಿರಬಾಗಿ ಆತನಿಂದ ಆಶೀರ್ವಾದವನ್ನು ಹೊಂದಿ ತಮ್ಮ-ತಮ್ಮ ಮನೆಗಳಿಗೆ ತೆರಳಿದರು.

ಆಗಿನ ಕಾಲದಲ್ಲಿ ಮೂಡಿದ ಶ್ರೀ ಮೌನದೇವನ ಪಾದಗಳೂ, ಕುರಿಯ ಹೆಜ್ಜೆಗಳೂ ಅಚ್ಚಳಿಯದೆ ಕೆಸರಿನಲ್ಲಿ ಎದ್ದಿ ತೆಗೆದಂತೆ ಕರೀ ಕಲ್ಲಿನಲ್ಲಿ ಇಂದಿಗೂ ಕಾಣಿಸುತ್ತಿರುವವು. ಅವುಗಳನ್ನು ನೋಡಿದ ಯಾತ್ರಿಕರೆಲ್ಲರೂ ಮೌನಗುರುವಿನ ಮಹಿಮೆಯನ್ನು ವಿಶೇಷವಾಗಿ ಹೊಗಳುತ್ತಿರುವರು; ಮತ್ತು ಜನರಲ್ಲಿ ಆಸ್ತಿಕತ್ವವನ್ನುಂಟು ಮಾಡಲಿಕ್ಕೆ ಈ ಪದಪದ್ಮಗಳ ಕುರುಹು ಒಳ್ಳೇ ಬಲವಾದ ಸಾಕ್ಷಿಗಳಾಗಿವೆ. ಇರಲಿ.

ಈ ಮೇರೆಗೆ ವರವೀ ಕ್ಷೇತ್ರದಲ್ಲಿ ಮಹಿಮೆಯನ್ನು ತೋರಿಸಿದ ಶ್ರೀ ಮೌನದೇವನು ಅಲ್ಲಿಂದ ಹಾವಿನಹಾಳೆಂಬ ಗ್ರಾಮಕ್ಕೆ ಬಂದು ಅಲ್ಲಿ ವಿಶ್ವಬ್ರಾಹ್ಮಣ ವಂಶಸಂಭೂತನಾದ ಕಲ್ಲಯ್ಯನೆಂಬ ಶರಣನಿಗೆ ಅನುಗ್ರಹ ಮಾಡಿದನು. ಆತನು ಮೌನಗುರುವಿನ ಅನುಗ್ರಹದಿಂದ ಮಹಾಮಹಿಮನಾಗಿ ಮೆರೆಯುತ್ತಿರಲು ಆ ಗ್ರಾಮದಲ್ಲಿ ಬಹು ಜನರನ್ನು ಕಡಿದು ಕೊಂದಿದ್ದ ಒಂದು ಭಯಂಕರವಾದ ಕೃಷ್ಣಸರ್ಪವು ಒಂದು ದಿನ ಕಲ್ಲಯ್ಯನನ್ನು ಕಡಿದು ತಾನೇ ಸತ್ತು ಹೋಯಿತು! ಇದಲ್ಲದೆ ಅದೇ ಗ್ರಾಮದಲ್ಲಿರುವ ವೈಷ್ಣವ ಬ್ರಾಹ್ಮಣರಿಗೂ ಕಲ್ಲಯ್ಯನಿಗೂ ಮತಸಂಬಂಧವಾಗಿ ವಾದನಡೆದು ಅದರಲ್ಲಿ ಕಲ್ಲಯ್ಯನು ತನ್ನ ಮನೆಯಲ್ಲಿರುವ ಶ್ವಾನದ ಬಾಯಿಂದ ಚತುರ್ವೇದಗಳನ್ನು ಹೇಳಿಸಿ ಜಯವನ್ನು ಸಂಪಾದಿಸಿದನು.

ಹೀಗೆ ಕಲ್ಲಯ್ಯನನ್ನು ಮಹಿಮಾ ಪುರುಷನನ್ನಾಗಿ ಮಾಡಿದ ಮೌನದೇವನು ಬಾಗೇವಾಡೀ ತಾಲೂಕ ಉಕ್ಕಲಿ ಎಂಬ ಗ್ರಾಮಕ್ಕೆ ಬಂದು ಅಲ್ಲಿರುವ ವಿಶ್ವಬ್ರಹ್ಮವಂಶದ ಗುರುನಾಥಾಚಾರ್ಯ, ತುಳಜಾಭವಾನಿ ಎಂಬ ದಂಪತಿಗಳು ಸಂತಾನದ ಸಲುವಾಗಿ ತನ್ನನ್ನು ಧ್ಯಾನಿಸುತ್ತಿರುವದನ್ನು ತಿಳಿದು ಅವರಿಗೆ ಪುತ್ರ ಸಂತಾನವನ್ನು ಕೊಟ್ಟು, ಆ ಪುತ್ರನಿಗೆ ಮೇಘರಾಜೇಂದ್ರನೆಂಬ ನಾಮಕರಣವನ್ನು ಮಾಡಿಸಿ ಆ ದಂಪತಿಗಳಿಗೆ:—ಈ ನಿಮ್ಮ ಮಗನು ಮಹಾಮಹಿಮನಾಗುವನೆಂದು ಹೇಳಿದನು ಗುರುವಾಕ್ಯದಂತೆ ಮುಂದೆ ಆ ಮೇಘರಾಜೇಂದ್ರ ಸ್ವಾಮಿಯು ಕುರುಡರಿಗೆ ಕಣ್ಣುಗಳನ್ನೂ, ಕಿವುಡರಿಗೆ ಕಿವಿಗಳನ್ನೂ, ಬಡವರಿಗೆ ಐಶ್ವರ್ಯವನ್ನೂ,

ಬಂಜೆಸ್ತ್ರೀಯರಿಗೆ ಮಕ್ಕಳನ್ನೂ ಕೊಟ್ಟು ರಕ್ಷಿಸುತ್ತಿದ್ದನಲ್ಲದೆ, ಮಳೆಯಾಗದ ಸ್ಥಳಗಳಿಗೆ ಹೋಗಿ ಭಕ್ತಜನರ ಇಷ್ಟದಂತೆ ಮಳೆಯನ್ನು ಸುರಿಸಿ ಅವರ ಕಷ್ಟವನ್ನು ನಿವಾರಣ ಮಾಡುತ್ತಿದ್ದನು.

ಅಲ್ಲಿಂದ ಮೌನಪರಮಾತ್ಮನು 'ದೋತ್ರಗಾವಿ' ಎಂಬ ಗ್ರಾಮಕ್ಕೆ ಬಂದು ಅಲ್ಲಿರುವ ಪಂಚಾನನವಂಶದ ವೀರಣ್ಣಯ್ಯನೆಂಬ ಭಕ್ತನಿಗೆ ಅನುಗ್ರಹ ಮಾಡಿ, ಆತನನ್ನು ಘನಮಹಿಮನೆಂದು ಹೇಳಿಸಿ ಅನಂತರ 'ಪಾಲ್ಕುರಕೆ' ಎಂಬ ಗ್ರಾಮಕ್ಕೆ ದಯಮಾಡಿಸಿ, ಕರವೀರಪ್ಪನೆಂಬ ಭಕ್ತನಿಗೆ ಅನುಗ್ರಹ ಮಾಡಿ ಉದ್ಧರಿಸಿ ಅಲ್ಲಿಂದ ಮಲಯಗಿರಿ ದಾಸಪ್ಪನೆಂಬ ಭಕ್ತನಿಗೆ ಅನುಗ್ರಹ ಮಾಡಿ ಆತನಿಂದ ಅನೇಕ ಮಹಿಮೆಗಳನ್ನುಂಟು ಮಾಡಿಸಿ, ಅದರಂತೆ ಬೀಜದ ಬಾಬಯ್ಯ, ನಾಗಾಭಕ್ತ ಮುಂತಾದ ಭಕ್ತಸಮುದಾಯವನ್ನು ಉದ್ಧರಿಸಿ, ದಿಲ್ಲೀ ಪಟ್ಟಣಕ್ಕೆ ಬಂದನು.

ಆ ಪಟ್ಟಣದಲ್ಲಿ ಬೇಡರ ಜಾತಿಯಲ್ಲಿ ಪಿಡ್ಡನಾಯಕನೆಂಬ ತಳವಾರನಿರಲು, ಆತನು ಪ್ರತಿದಿವಸ ಮೌನಗುರುವಿನನ್ನು ಧ್ಯಾನಿಸುತ್ತ ಕಾಲ ಕಳೆಯುತ್ತಿದ್ದನು. ಒಂದು ದಿನ ಮೌನಪರಮಾತ್ಮನು ಪಿಡ್ಡನಾಯಕನಿಗೆ ದರ್ಶನಕೊಟ್ಟು ಆತನ ಭಕ್ತಿ-ಭಾವಕ್ಕೆ ಮೆಚ್ಚಿ:--ಭಕ್ತನೇ, ನೀನು ಈ ಪಟ್ಟಣಕ್ಕೆ ಅರಸನಾಗು, ಎಂದು ಅನುಗ್ರಹ ಮಾಡಿದನು. ಗುರುವಾಕ್ಯದಂತೆ ತುಸ ದಿವಸಗಳಲ್ಲಿಯೇ ಪಿಡ್ಡನಾಯಕನು ಆ ಪಟ್ಟಣದ ಅರಸನಾದನು. ಮೌನ ಪರಮಾತ್ಮನು ಪುನಃ ಆತನಿಗೆ ಭೆಟ್ಟಿಯಾಗಲು, ಪಿಡ್ಡನಾಯಕನು ಗುರುಚರಣಗಳಿಗೆ ಶಿರಬಾಗಿ ಸಿಂಹಾಸನದಲ್ಲಿ ಕುಳ್ಳಿರಿಸಿ ಪಾದ ಪೂಜೆ ಮಾಡಿ:—ಸ್ವಾಮಿ, ತಮ್ಮ ಅನುಗ್ರಹದಿಂದ ಕೃತಾರ್ಥನಾಗಿರುವೆನು; ಆದರೆ ಚರಣಸನ್ನಿಧಿಯಲ್ಲಿ ವಿಜ್ಞಾಪನೆ ಮಾಡಿಕೊಳ್ಳುವದೇನಂದರೆ, ನನಗೆ ಪರರಾಜರ ಭಯವಿಲ್ಲದಂತೆ ಗುರುವಿನ ಅಮೃತಹಸ್ತದಿಂದ ಏನಾದರೊಂದು ಪದಾರ್ಥವನ್ನು ಅನುಗ್ರಹಿಸಬೇಕೆಂದು ಬೇಡಿಕೊಂಡನು.

ಆಗ ಮೌನಪರಮಾತ್ಮನು ತನ್ನ ಕೈಯಲ್ಲಿರುವ ಕೊಡಲಿಯನ್ನು ಆತನಿಗೆ ಕೊಟ್ಟು:—'ಭಕ್ತನೇ, ನಾನು ಕೊಟ್ಟಿರುವ ಈ ಕೊಡಲಿಯು ನಿನಗೆ ಬಹು ದಿವಸ ಈ ಸಿಂಹಾಸನವನ್ನೇರಿ ರಾಜ್ಯವಾಳುವ ಅಧಿಕಾರವನ್ನು ಕೊಡಲಿ; ಮತ್ತು ಯಾವಾಗಲೂ ನಿನಗೆ ಜಯವನ್ನೂ, ನಿನ್ನ ವೈರಿಗಳಿಗೆ

ಅಪಜಯವನ್ನೂ ಕೊಡಲಿ. ಪುತ್ರ-ಮಿತ್ರಾದಿ ಸಕಲ ಸಂಪತ್ತನ್ನೂ ಕೊಡಲಿ. ರಾಜನೆ, ಇಂಥ ಫಲದಾಯಕವಾದ ಈ ಕೊಡಲಿಯೇ ನೀನು ದಾನ-ಧರ್ಮ ಗಳನ್ನು ಮಾಡದಿದ್ದರೆ, ಅನ್ಯಾಯ ಕಾರ್ಯ ಮಾಡಿದರೆ ನಿನ್ನ ವಂಶವನ್ನು ಕಡಿದುಹಾಕಿ, ಹಾನಿಯನ್ನು ಮಾಡಲಿ.' ಎಂದು ಹೇಳಿ, ಶಿಷ್ಯಸಮುದಾಯ ದೊಡನೆ ತಿಂಥಿಣಿ ಎಂಬ ಗ್ರಾಮಕ್ಕೆ ಬಂದು ಅಲ್ಲಿರುವ ಗಣಸಮೂಹಕ್ಕೆ ಕಾಣಿಸಿಕೊಂಡನು.

ಅಲ್ಲಿರುವ ಎಲ್ಲ ಗಣಸಮೂಹವು ಮೇಲಕ್ಕೆದ್ದು ಸದ್ಗುರುನಾಥನಿಗೆ ನಮಸ್ಕರಿಸಲು, ಶ್ರೀ ಮೌನದೇವನು ಅವರೆಲ್ಲರಿಗೂ ಆಶೀರ್ವಾದ ಮಾಡಿ ತನ್ನ ಸಂಗಡವಿರುವ ಶಿಷ್ಯಸಮೂಹವನ್ನು ಕುರಿತು:—ಭಕ್ತವೃಂದವೇ, ನಾನು ಈ ಭೂಲೋಕದಲ್ಲಿ ಅವತರಿಸಿ ಇಂದಿಗೆ ೩೦೦ ವರ್ಷಗಳು ಸಂಪೂರ್ಣವಾದವು. ಇನ್ನು ಮಾತ್ರ ನನ್ನ ಈ ಅವತಾರವನ್ನು ಸಮಾಪ್ತಿ ಗೊಳಿಸುವೆನು; ಆದರೆ ನನ್ನ ಸೇವೆಯಲ್ಲಿದ್ದ ನಿಮ್ಮೆಲ್ಲರಿಗೂ ಕೆಲವು ಹಿತ ವಾಕ್ಯಗಳನ್ನು ಹೇಳುವೆನು ಕೇಳಿರಿ. ನಾನು ಆಯಾವ ಸ್ಥಳಗಳಲ್ಲಿ ಮಹಿಮೆ ಯನ್ನು ತೋರಿಸಿರುವೆನೋ ಅವೆಲ್ಲ ಪವಿತ್ರ ಸ್ಥಳಗಳಾಗಿರುವವು. ಅವು ಗಳಲ್ಲಿ ಗೋನಾಲ, ಲಿಂಗನಭಂಡಿ, ವರವಿ, ತಿಂಥಿಣಿ ಮೊದಲಾದ ಸ್ಥಳಗಳು ತೀರ ಫಲಪ್ರದಗಳಾಗಿರುವವು; ಆದ್ದರಿಂದ ಆಯಾ ಸ್ಥಳಗಳಲ್ಲಿ ನಾನು ಮೂರ್ತಿಮಂತವಾಗಿ ವಾಸಿಸುವೆನು ಯಾರಾದರೂ ಅಲ್ಲಿ ಜರಗುವ ರಥೋ ತ್ಸವಕ್ಕಾಗಿ ಬಂದು ನನ್ನ ದರ್ಶನ ತಕೊಂಡದ್ದಾದರೆ ಅವರ ತಾಪಸಮೂ ಹವು ನಾಶವಾಗುವದಲ್ಲದೆ, ಅವರ ಇಷ್ಟಾರ್ಥಗಳು ಪೂರ್ಣವಾಗುವವು; ಮತ್ತು ನಾನು ಇದುವರೆಗೂ ತೋರಿಸಿದ ಮಹಿಮೆಗಳನ್ನು, ಅಂದರೆ ನಾನು ಅವತರಿಸಿದಂದಿನಿಂದ ಹಿಡಿದು ಅವತಾರ ಸಮಾಪ್ತಿಯಾಗುವ ವರೆಗೂ ಇರುವ ನನ್ನ ಚರಿತ್ರವನ್ನು ಭಕ್ತಿ ಪುರಸ್ಸರವಾಗಿ ಬರೆಯುವವರಿಗೂ, ಹೇಳು ವವರಿಗೂ, ಕೇಳುವವರಿಗೂ, ಹೇಳಿಸುವವರಿಗೂ ಇಹಲೋಕದಲ್ಲಿ ಸತಿ- ಸುತ-ಧನ-ಕನಕ-ವಸ್ತು-ವಾಹನ ಮುಂತಾದ ಸಕಲ ಸಂಪತ್ತನ್ನೂ, ಪರ ಲೋಕದಲ್ಲಿ ಮೋಕ್ಷಸುಖವನ್ನೂ ಕೊಟ್ಟು ರಕ್ಷಿಸುವೆನು. ಭಕ್ತ ಜನರಿಗೆ ಈ ನನ್ನ ಚರಿತ್ರೆಯನ್ನು ಉಪದೇಶ ಮಾಡಿ ಕೃತಾರ್ಥರನ್ನಾಗಿ ಮಾಡಿರಿ. ಇದು ಮಾತ್ರ ನಿಮ್ಮೆಲ್ಲರಿಗೂ ನೆನಪಿನಲ್ಲಿರಲಿ. ನಿಮಗೆ ಭೂಲೋಕವ